॥ ಶ್ರೀ ಜಗದ್ಗುರು ಚಿದ್ಘನಲಿಂಗ ಶಿವಾಚಾರ್ಯಃ ಪ್ರಸೀದತು ॥

ಶ್ರೀ ಗಣಾಧೀಶ್ವರ ಗ್ರಂಥಮಾಲೆಯ 22 ನೆಯ ಪುಷ್ಪ

# ಪ್ರಾರಬ್ಧಕರ್ಮ ಪರಿಹಾರ ಮಾರ್ಗ


ಗ್ರಂಥಕರ್ತರು :

ಜ್ಯೋತಿರ್ವಿದ್ಯಾವಿಭೂಷಣ, ಸಾಹಿತ್ಯರತ್ನ

**ವೇ. ಬಸವಯ್ಯ ಶಾಸ್ತ್ರಿಗಳು ಹಿರೇಮಠ**

ಶ್ರೀ ಗಣಾಧೀಶ್ವರ ಪಂಚಾಂಗ ಕರ್ತರು, ಗದಗ.





ಪ್ರಕಾಶಕರು:

**ಮೆ॥ ಪಿ. ಸಿ. ಶಾಬಾದಿಮಠ ಬುಕ್ ಡಿಪೋ**

ಸ್ಟೇಶನ್ ರೋಡ, ಗದಗ-582 101.

# ಪರಿವಿಡಿ

★★★

|| ಶ್ರೀ ಜಗದ್ಗುರು ಚಿದ್ಘನಲಿಂಗ ಶಿವಾಚಾರ್ಯಃ ಪ್ರಸೀದತು ||

# ಪ್ರಾರಬ್ಧ ಕರ್ಮ ಪರಿಹಾರ ಮಾರ್ಗ

## ಸೂರ್ಯ ದಶಾದಲ್ಲಿ ಸೂರ್ಯ ಪ್ರೀತಿಕರ ಸುವರ್ಣ ಪದ್ಮ ದಾನ, ಸೂರ್ಯ ಪ್ರತಿಮಾ ದಾನ, ರಕ್ತಧೇನು (ಕೆಂಪು ಆಕಳ) ದಾನ

ಜನನ ಲಗ್ನ ಕುಂಡಲಿಯಲ್ಲಿ ರವಿಯು ಲಗ್ನ, ಅಷ್ಟಮ, ದ್ವಾದಶ ಹಾಗೂ ಇತರ ದುಷ್ಟ ಸ್ಥಾನಗಳಲ್ಲಿದ್ದರೆ, ಆ ದಶಾಭುಕ್ತಿಕಾಲಗಳಲ್ಲಿ ಕ್ರೂರ ಫಲಗಳನ್ನು ಕೊಡುವವನಾಗುವದರಿಂದ ಆ ಅರಿಷ್ಟ ಶಮನಾರ್ಥವಾಗಿಯೂ, ಸೂರ್ಯಗ್ರಹ ಸಂತುಷ್ಟಿಗಾಗಿಯೂ ಸುವರ್ಣ ಪದ್ಮ (ಬಂಗಾರದ ಕಮಲ) ದಾನವನ್ನೂ, ಕೆಂಪುಬಣ್ಣದ ಆಕಳ ದಾನವನ್ನೂ ಮಾಡುವದರಿಂದ ಆಯುಷ್ಯ, ಆರೋಗ್ಯ, ಸಂಪದಭಿವೃದ್ಧಿಯಾಗಿ ಪುತ್ರ, ಪೌತ್ರರೊಡನೆ ಸುಖ–ಸಂತೋಷಗಳಿಂದ ಜೀವಿಸುವನು. ಆದರ ಕ್ರಮವು ಯಾಮಳ ತಂತ್ರದಲ್ಲಿ ಈ ಪ್ರಕಾರ ಇದೆ–

ಜನ್ಮನಕ್ಷತ್ರ, ನಾಮನಕ್ಷತ್ರ, ಕರ್ಮ ನಕ್ಷತ್ರಗಳು ಇರುವ ದಿವಸ ಅಥವಾ ರವಿವಾರ (ರವಿವಾರ ಜನ್ಮ ಅಥವಾ ನಾಮ ನಕ್ಷತ್ರಗಳು ಕೂಡಿದ್ದರೆ ಬಹಳ ಉತ್ತಮ) ಪುರೋಹಿತನು ಉಕ್ತಕಾಲದಲ್ಲಿ ವಿಧಿಗನುಸಾರವಾಗಿ ಸ್ನಾನ ಶಿವಾರ್ಚನಾದಿ ಕ್ರಿಯೆಗಳನ್ನು ತೀರಿಸಿಕೊಂಡು ಗುರು ಚಿಹ್ನಗಳಿಂದ ಅಲಂಕೃತನಾಗಿ ದರ್ಭೆಯ ಉಂಗುರವನ್ನು ಧರಿಸಿಕೊಂಡು ಗೋಮಯ, ಗೋಮೂತ್ರ, ಗೋಕ್ಷೀರ, ಗೋದಧಿ, ಗೋಘೃತ, ಗೋರೋಜನಗಳಿಂದ ಸಾರಿಸಲ್ಪಟ್ಟು ರಂಗವಲ್ಯಾದಿಗಳಿಂದ ಅಲಂಕೃತವಾದ ಪರಿಶುದ್ಧ ಭೂಮಿಯಲ್ಲಿ ಕಂಬಳಿ ಅಥವಾ ದರ್ಭಾಸನದ ಮೇಲೆ ಪೂರ್ವ ಇಲ್ಲವೆ ಉತ್ತರಾಭಿಮುಖವಾಗಿ ಕುಳಿತುಕೊಂಡು ಪೂಜಾ ಸಾಮಗ್ರಿಗಳನ್ನು ಸಂಗ್ರಹಿಸಿಕೊಳ್ಳಬೇಕು. ಅನಂತರ ಯಜಮಾನನು (ಪೂಜಾ ಮಾಡಿಸತಕ್ಕವನು) ಪತ್ನೀ ಸಮೇತ ಪೂರ್ವ ದಿವಸದಲ್ಲಿ ಕ್ಷೀರಾಹಾರಿಯಾಗಿದ್ದು ಆ ದಿವಸ ಬ್ರಾಹ್ಮಿ ಮುಹೂರ್ತದಲ್ಲಿ ಎದ್ದು ಶಿವ ಸ್ತುತಿಯಂ ಮಾಡಿ ಶೌಚ, ಆಚಮನ, ದಂತಧಾವನಾದಿ ನಿತ್ಯ ಕ್ರಿಯೆಗಳನ್ನು ತೀರಿಸಿಕೊಂಡು ಉಕ್ತಕಾಲದಲ್ಲಿ ಮಂಗಲ ಸ್ನಾನವನ್ನು ಮಾಡಿಕೊಂಡು ಶಿವ ಚಿಹ್ನಯುಕ್ತನಾಗಿ ಗುರುಗಳ ಸಮ್ಮುಖದಲ್ಲಿ ಅಥವಾ ಬಲಭಾಗದಲ್ಲಿ ಉತ್ತರಾಭಿಮುಖವುಳ್ಳವನಾಗಿ ಭದ್ರಾಸನದ ಮೇಲೆ ಕುಳಿತುಕೊಂಡು–

ಯಸ್ಮಿನ್ವೋ ನಾಮರೂಪಾಭ್ಯಾಂ ಯಾದೇವಿ ಸರ್ವಮಂಗಳಾ।
ತಯೋಸ್ಸಂ ಸ್ಮರಣಾತ್ಪುಂಸಾಂ ಸರ್ವತೋ ಜಯಮಂಗಲಂ॥
ಅಭೀಪ್ಸಿತಾರ್ಥ ಸಿದ್ಧ್ಯರ್ಥಂ ಪೂಜಿತೋಯಃ ಸುರೈರಪಿ।
ಸರ್ವ ವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ॥

ಎಂದು ಪ್ರಾರ್ಥಿಸಿ,

ಆಗಮಾರ್ಥಂತು ದೇವಾನಾಂ ಗಮನಾರ್ಥಂತು ರಕ್ಷಸಾಂ।
ಕುರ್ವೇ ಘಂಟಾರವಂ ಭಕ್ತ್ಯಾ ದೇವತಾಹ್ವಾನ ಲಾಂಛನಂ॥
ಘಂಟಾಮೂಲೇ ತಥಾದೇವಿ ಗಳೋರ್ಧ್ವೇ ಶಿರಮೂಲಕೇ।
ವಸವಶ್ಶೂಲ ಮಗ್ರಸ್ಥಾ ಸರ್ವೇವಸತು ಶಂಕರ॥

ಎಂದು ಘಂಟಾನಾದವನ್ನು ಮಾಡಿ ಆಚಮನ, ಪ್ರಾಣಾಯಾಮಗಳನ್ನು ಮಾಡಬೇಕು.

ಆಚಮನ ಕ್ರಮ- ಅಂಗುಷ್ಠತರ್ಜನಿ ತುದಿಬೆರಳುಗಳನ್ನು ಕೂಡಿಸಿದ ಬಲ ಅಂಗೈಯಲ್ಲಿ ಅರ್ಘ್ಯದ ಸವುಟನಿಂದ ಗೋದಿಕಾಳು ಮುಳುಗುವಷ್ಟು ಜಲವನ್ನು ಹಾಕಿಕೊಂಡು- ಋಗ್ವೇದಾಯ ಸ್ವಾಹಾ, ಯಜುರ್ವೇದಾಯ ಸ್ವಾಹಾ, ಸಾಮವೇದಾಯ ಸ್ವಾಹಾ, ಅಥರ್ವಣವೇದಾಯ ನಮಃ, ಇತಿಹಾಸ ಪುರಾಣಾಯ ನಮಃ, ಅನಂತಾಯ ನಮಃ, ಸೂಕ್ಷ್ಮಾಯ ನಮಃ, ಶಿವೋತ್ತಮಾಯ ನಮಃ, ಏಕನೇತ್ರಾಯ ನಮಃ, ತ್ರಿಮೂರ್ತಯೇ ನಮಃ, ಶಿಖಂಡಿನೇ ನಮಃ, ಶ್ರೀಕಂಠಾಯ ನಮಃ, ಹೃದಯಾಯ ನಮಃ, ಶಿರಸೇ ನಮಃ, ಶಿಖಾಯೈ ನಮಃ, ಕವಚಾಯ ನಮಃ, ನೇತ್ರತ್ರಯಾಯ ನಮಃ, ಅಸ್ತ್ರಾಯ ನಮಃ ಈ ವಾಕ್ಯಗಳನ್ನು ಹೇಳುತ್ತ ಆಚಮನ ಮಾಡಿ ಜಲದಿಂದ ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಚೆ ಈ ಜ್ಞಾನೇಂದ್ರಿಯಗಳನ್ನು ಮುಟ್ಟಿ ಕೈ ತೊಳೆದುಕೊಂಡು ಅಂಗುಷ್ಠ ಮಧ್ಯಮ, ಅನಾಮಿಕ ಬೆರಳುಗಳಿಂದ ಮೂಗನ್ನು ಹಿಡಿದು ಕೆಳಗಿನ ಮಂತ್ರವನ್ನು ಒಂದೊಂದು ಸಾರೆ ಉಚ್ಚರಿಸುತ್ತ ಪ್ರಾಣಾಯಾಮವನ್ನು ಮಾಡಬೇಕು.

ಪ್ರಾಣಾಯಾಮ ಮಂತ್ರ- ಓಂ ಭೂಃ, ಓಂ ಭುವಃ, ಓಂ ಸುವಃ, ಓಂ ಮಹಃ, ಓಂ ಜನಃ, ಓಂ ತಪಃ, ಓಂ ಸತ್ಯಂ, ಓಂ ತತ್ಸ ವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ, ಧಿಯೋ ಯೋನಃ ಪ್ರಚೋದಯಾತ್ ಓಂ ಆಪೋಜ್ಯೋತಿ ರಸೋಽ ಮೃತಂ ಬ್ರಹ್ಮ ಭೂರ್ಭುವ ಸ್ಸುವರೋಂ॥

ಎಂದು ಉಚ್ಛರಿಸುತ್ತ ಮೂಗನ್ನು ಹಿಡಿದು ವಾಯುವನ್ನು ಮೇಲಕ್ಕೇರಿಸುವದು, ನಿಲ್ಲಿಸುವದು ಹಾಗೂ ಬಿಡುವದು ಈ ಪ್ರಕಾರ ಮಾಡುವದು 1 ಸಲ ಪ್ರಾಣಾಯಾಮವು.

ನಂತರ ಬಲಹಸ್ತದಲ್ಲಿ ಅಕ್ಷತೆ, ಬಿಲ್ವಪತ್ರಿ ಸಹಿತ ಜಲವನ್ನು ಹಾಕಿಕೊಂಡು ಸಂಕಲ್ಪ ಮಾಡಬೇಕು.

ಸಂಕಲ್ಪ- ಓಂ ಶಿವ ಶಿವ ಶಂಭೋ ರಾಜ್ಞಯಾ ಪ್ರವರ್ತಮಾನ ಸ್ಯಾದ್ಯ ಬ್ರಹ್ಮಣೋ ದ್ವಿತೀಯ ಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ಮೇರೋರ್ದಕ್ಷಿಣ ದಿಗ್ಭಾಗೇ ಶ್ರೀಶೈಲಸ್ಯ ಪಶ್ಚಿಮಪ್ರದೇಶೇ ಕರ್ನಾಟಕ ದೇಶೇ (  ) ಗ್ರಾಮೇ ವ್ಯಾವಹಾರಿಕ ಚಾಂದ್ರಮಾನೇ ಶಾಲಿವಾಹನ ಶಕೆ (  ) ಪ್ರಭವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೇ (  ) ಸಂವತ್ಸರೇ (  ) ಅಯನೇ (  ) ಋತೌ (  ) ಮಾಸೇ (  ) ಪಕ್ಷೇ (  ) ತಿಥೌ (  ) ವಾಸರೇ (  ) ನಕ್ಷತ್ರ (  ) ಯೋಗ (  ) ಕರಣ (  ) ಯುಕ್ತಾಯಾಂ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭ ಪುಣ್ಯ ಕಾಲೇ ಮಮ* ಸರ್ವಾರಿಷ್ಟ ನಿವಾರಣಾರ್ಥಂ, ಸರ್ವ ಸಂಪತ್ ಪ್ರಾಪ್ತ್ಯರ್ಥಂ, ಆಯುಷ್ಯ, ಆರೋಗ್ಯ, ಅಭಿವೃದ್ಧ್ಯರ್ಥಂ ಸೂರ್ಯಗ್ರಹಪ್ರೀತ್ಯರ್ಥಂ ಸುವರ್ಣ ಪದ್ಮದಾನಂ, ಸೂರ್ಯ ಪ್ರತಿಮಾದಾನಂ, ರಕ್ತಧೇನು ದಾನಂಚ ಕರಿಷ್ಯೇ ತದಾದೌ ನಿರ್ವಿಘ್ನೇನ ಪರಿಸಮಾಪ್ತಿ ದ್ವಾರಾ ಉತ್ತರೋತ್ತರಾಭಿವೃದ್ಧ್ಯರ್ಥಂ ಶ್ರೀ ಮಹಾಗಣಾಧಿಪತಿ ಪೂಜಾಂ ಕರಿಷ್ಯೇ॥

ಎಂದು ಸಂಕಲ್ಪವನ್ನು ಮಾಡಿ ಹಸ್ತದಲ್ಲಿರುವ ಬಿಲ್ವದಳ, ಜಲ, ಅಕ್ಷತಾದಿಗಳನ್ನು ಶುದ್ಧೋದಕ ಪಾತ್ರೆಯಲ್ಲಿ ಹಾಕಬೇಕು. ಆಮೇಲೆ ಜಲದಿಂದ ತುಂಬಿದ ಆ ಕಲಶವನ್ನು ಇಲ್ಲವೆ ಥಾಲಿಯನ್ನು ತನ್ನ ಬಲಭಾಗದಲ್ಲಿಟ್ಟುಕೊಂಡು ಆ ಪಾತ್ರೆಯನ್ನು ತನ್ನ ಬಲಹಸ್ತದಿಂದ ಮುಚ್ಚಿ,

ಕಲಶಸ್ಯ ಮುಖೇರುದ್ರಃ ಕಂಠೇ ವಿಷ್ಣುಃ ಸಮಾಶ್ರಿತಃ।
ಮೂಲೇತತ್ರ ಸ್ಥಿತೋಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ॥
ಕುಕ್ಷೌತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ।
ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ।
ಅಂಗೈಶ್ಚ ಸಹಿತಾ ಸ್ಸರ್ವೇ ಕಲಶಂತು ಸಮಾಶ್ರಿತಾಃ।
ಗಾಯತ್ರೀ ಚೈವಸಾವಿತ್ರಿ ಶಾಂತಿಃ ಪುಷ್ಟಿಕರೀತಥಾ॥
ಆಯಾಂತು ಯಜಮಾನಸ್ಯ ದುರಿತ ಕ್ಷಯಕಾರಕಾಃ।

(*ಪೂಜೆ ಮಾಡತಕ್ಕವರು ಯಜಮಾನನಾಗಿರದೆ ಪುರೋಹಿತರಾಗಿದ್ದರೆ ಅಥವಾ ಬೇರೆಯವರಾಗಿದ್ದರೆ "ಮಮ" ಎಂಬುದಕ್ಕೆ ಬದಲಾಗಿ ಯಜಮಾನನ ಹೆಸರನ್ನು ಹೇಳಿ ನಂತರ "ಯಜಮಾನಸ್ಯ" ಎಂದು ಅನ್ನಬೇಕು. ಉದಾಹರಣೆಗೆ- "ಶಿವಪ್ಪಾಖ್ಯಸ್ಯ ಯಜಮಾನಸ್ಯ" ಎಂದು ಹೇಳಬೇಕು.)

ಗಂಗೇಚ ಯಮುನೇ ಚೈವ ಗೋದಾವರಿ ಸರಸ್ವತಿ।
ನರ್ಮದೇ ಸಿಂಧು ಕಾವೇರಿ ಜಲೇऽಸ್ಮಿನ್ ಸನ್ನಿಧಿಂ ಕುರು॥

ಎಂದು ಉಚ್ಚರಿಸುತ್ತ ಶುದ್ಧೋದಕ ಪಾತ್ರೆ (ಥಾಲಿ) ಯಲ್ಲಿ ರುದ್ರಾದಿ ದೇವತೆಗಳನ್ನು ಆವಾಹನೆ ಮಾಡಿ ಭಸ್ಮ, ಗಂಧ, ಅಕ್ಷತೆ, ಪತ್ರಿ, ಪುಷ್ಪ, ಧೂಪ ದೀಪಗಳಿಂದ ಪೂಜಿಸಿ.

ಓಂ ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂಗತೋಪಿವಾ॥
ಯಃಸ್ಮರೇದ್ದೇವ ದೇವೇಶಾ ಸಬಾಹ್ಯಾಭ್ಯಂತರಃ ಶುಚಿಃ॥

ಎಂದು ಹೇಳುತ್ತ ಆ ಜಲದಿಂದ ತನಗೂ ಪೂಜಾ ದ್ರವ್ಯಗಳಿಗೂ ಪ್ರೋಕ್ಷಿಸಬೇಕು. ನಂತರ ದೀಪ ಪೂಜಾ ಮಾಡಬೇಕು.

ಭೋದೀಪತ್ವಂ ಬ್ರಹ್ಮರೂಪ ಅಂಧಕಾರ ನಿವಾರಕ।
ಇಮಾಂ ಮಯಾ ಕೃತಾಂ ಪೂಜಾಂ ಗೃಹ್ಣಸ್ತೇಜಃ ಪ್ರವರ್ಧಯ॥

ಎಂದು ಅನ್ನುತ್ತ ಗಂಧ, ಅಕ್ಷತೆ, ಕುಂಕುಮ, ಪತ್ರಿ, ಪುಷ್ಪಗಳಿಂದ ದೀಪಗಳನ್ನು ಪೂಜಿಸಬೇಕು.



## ಮಹಾ ಗಣಾಧಿಪತಿ ಪೂಜಾ

ಶುದ್ಧವಾದ ಭೂಮಿಯ ಒಂದು ಭಾಗದಲ್ಲಿ ರಂಗವಲ್ಲಿಯನ್ನು ಹಾಕಿ ಅದರ ಮೇಲೆ ಒಂದು ಬಾಳೆಯ ಎಲೆಯನ್ನು ಹಾಸಿ ಮೇಲೆ ಅರ್ಧ ಸೇರಿನಷ್ಟು ಅಕ್ಕಿಯನ್ನು ಚೌಕಾಗಿ ಹರವಿ ಅದರ ಮೇಲೆ ಅಷ್ಟದಳ ಕಮಲವನ್ನು ಬರೆದು ಬೆಳ್ಳಿಯ ಗಣಪತಿಯ ಮೂರ್ತಿಯನ್ನು ಸ್ಥಾಪಿಸಿ.

ಶ್ವೇತಾಂಗಂ ಶ್ವೇತವಸ್ತ್ರಂ ಸಿತಕುಸುಮ ಗಣ್ಯೈಃ ಪೂಜಿತಂ ಶ್ವೇತ ಗಂಧ್ಯೆಃ
ಕ್ಷೀರಾಬ್ಧೌ ರತ್ನದೀಪ್ತೈಃ ಸುರತರು ವಿಮಲಂ ರತ್ನಸಿಂಹಾಸನಸ್ಥಂ।
ದೋರ್ಭಿಃ ಪಾಶಾಂಕ ಶೇಷ್ಟಾಭಯಧೃತಿ ವಿಶದಂ ಚಂದ್ರಮೌಲಿಂ ತ್ರಿನೇತ್ರಂ
ಧ್ಯಾಯೇ ಚ್ಛಾಂತ್ಯರ್ಥಮೀಶಂ ಗಣಪತಿ ಮಮಲಂ ಶ್ರೀ ಸಮೇತಂ ಪ್ರಸನ್ನಃ॥

ಓಂ ಭೂರ್ಭುವಃ ಸ್ವಃ ಸಿದ್ಧಿಬುದ್ಧಿ ಸಹಿತ ಮಹಾಗಣಾಧಿಪತಯೇ ನಮಃ ಎಂದು ಗಣಪತಿಯನ್ನು ಧ್ಯಾನಿಸಿ.

ಗಣಾನಾಂ ತ್ವೇತ್ಯಸ್ಯ ಮಂತ್ರಸ್ಯ, ಗೃತ್ಸಮದಋಷಿಃ, ಬ್ರಹ್ಮಣ ಸ್ಪತಿರ್ದೇವತಾ ಜಗತೀ ಛಂದಃ, ಮಹಾಗಣಪತಿ ಆವಾಹನೇವಿನಿಯೋಗಃ।

ಗಣಾನಾಂತ್ವಾ ಗಣಪತಿಗ್ಂ ಹವಾಮಹೇ ಕವಿಂ ಕವೀನಾ ಮುಪ ಮತ್ರ ವಸ್ತವಂ।
ಜ್ಯೇಷ್ಠ ರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಃ ಶೃಣ್ವನ್ನೂತಿಭಿಃಸೀದ ಸಾದನಂ ॥
ಓಂ ಭೂಃ ಮಹಾಗಣಪತಿ ಮಾವಾಹಯಾಮಿ, ಓಂ ಭುವಃ
ಮಹಾಗಣಪತಿ ಮಾವಾಹಯಾಮಿ, ಓಗ್ಂ ಸುವ ಮಹಾಗಣಪತಿ ಮಾವಾಹಯಾಮಿ,
ಓಂ ಭೂರ್ಭುವಸ್ಸುವಃ ಸಿದ್ಧಿಬುದ್ಧಿ ಸಹಿತ ಮಹಾಗಣಪತಿ ಮಾವಾಹಯಾಮಿ ॥

ಈ ಪ್ರಕಾರ ಗಣಪತಿಯನ್ನು ಆಹ್ವಾನ ಮಾಡುತ್ತ ಆ ಮೂರ್ತಿಯ ಮೇಲೆ ಅಕ್ಷತೆಗಳನ್ನು ಹಾಕಬೇಕು.

ರಮ್ಯಂ ಸುಶೋಭನಂ ದಿವ್ಯಂ ಸರ್ವಂ ಸೌಖ್ಯಕರಂ ಶುಭಂ।
ಆಸನಂಚ ಮಯಾದತ್ತಂ ಗೃಹಾಣ ಗಣನಾಯಕ ॥

ಎಂದು ಆಸನವನ್ನು ಸಮರ್ಪಿಸಿ

ಓಂ ಭೂರ್ಭುವಃ ಸ್ವರೋಂ ಸಶಕ್ತಿ ಸಾಂಗ ಸಾಯುಧ ಸವಾಹನ
ಸಪರಿವಾರ ಮಹಾಗಣಾಧೀಶ್ವರ ಅತ್ರಾಗಚ್ಛ।
ಆವಾಹಯಾಮಿ, ಆವಾಹಿತೋಭವ। ಸ್ಥಾಪಯಾಮಿ, ಸ್ಥಾಪಿತೋಭವ।
ಸನ್ನಿಹಿತೋಭವ। ಸಮ್ಮುಖೋಭವ। ಅವಕುಂಠಿತೋಭವ। ವರದೋಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ

ಏಕದಂತಾಯ ವಿದ್ಮಹೇ ವಕ್ರತುಂಡಾಯ ಧೀಮಹಿ।
ತನ್ನೋ ವಿಘ್ನೇಶ್ವರಂ ಪ್ರಚೋದಯಾತ್ ॥

ಎಂದು ಉಚ್ಛರಿಸಿ ಎರಡೂ ಹಸ್ತಗಳಿಗೆ ಭಸ್ಮವನ್ನು ಧರಿಸಿಕೊಂಡು

ಗಾಂ ಹೃದಯಾಯ ನಮಃ। ಗೀಂ ಶಿರಸೇಸ್ವಾಹಾ। ಗೂಂ ಶಿಖಾಯೈ ವೌಷಟ್।
ಗೈಂ ಕವಚಾಯಹುಂ। ಗೌಂ ನೇತ್ರತ್ರಯಾಯ ವೌಷಟ್। ಗಃ ಅಸ್ತ್ರಾಯ ಫಟ್।

ಎಂದು ನ್ಯಾಸವನ್ನು ಮಾಡಿ "ಓಂ ಭೂರ್ಭುವಃ ಸ್ವರೋಂ" ಎಂದು ದಿಗ್ಬಂಧನವನ್ನು ಮಾಡಬೇಕು.

ರಕ್ತೋ ರಕ್ತಾಂಗ ರಾಗಃ ಶುಕಕುಸುಮಯುತ ಸ್ತುಂದಿಲಶ್ಚಂದ್ರ ಮೌಲಿ।
ರ್ನೇತ್ರೈರ್ಯುಕ್ತ ಸ್ತ್ರಿಭಿರ್ವಾಮನಕರಚರಣೋಬೀಜ ಪೂರಾತ್ತ ವಾಸಾಃ ॥
ಹಸ್ತಾಗ್ರ ಕ್ಲೃಪ್ತ ಪಾಶಾಂಕುಶಗದ ವರದೋ ನಾಗವಕ್ತ್ರೋऽಹಿ ಭೂಷೋ।
ದೇವಃ ಪದ್ಮಾಸನಸ್ಥೋ ಭವತು ನತಸುರೋ ಭೂತಯೇ ವಿಘ್ನರಾಜಃ ॥

ಈ ಪ್ರಕಾರ ಗಣಾಧಿಪತಿಯನ್ನು ಧ್ಯಾನಿಸಿ "ಗಂ ಗಣಪತಯೇ ನಮಃ" ಎಂದು 16 ಅಥವಾ 108 ಸಲ ಜಪ ಮಾಡಬೇಕು. ಬಳಿಕ,

ಸುಮುಖಾಯ ನಮಃ, ಏಕದಂತಾಯ ನಮಃ, ಕಪಿಲಾಯ ನಮಃ, ಮಹಾಗಜಕರ್ಣಾಯ ನಮಃ, ಲಂಬೋದರಾಯ ನಮಃ, ವಿಕಟಾಯ ನಮಃ, ವಿಘ್ನರಾಜಾಯ ನಮಃ, ಗಣಾಧಿಪಾಯ ನಮಃ, ಭಾಲಚಂದ್ರಾಯ ನಮಃ, ಗಜಾನನಾಯ ನಮ. ಧೂಮಕೇತವೇ ನಮಃ, ಗಣಾಧ್ಯಕ್ಷಾಯ ನಮಃ, ವಕ್ರ ತುಂಡಾಯ ನಮಃ, ಶೂರ್ಪಕರ್ಣಾಯ ನಮಃ, ಹೇರಂಬಾಯ ನಮಃ, ಸ್ಕಂದ ಪೂರ್ವಜಾಯ ನಮಃ

ಹೀಗೆ ಅನ್ನುತ್ತ ಪುಷ್ಪಗಳನ್ನು ಸಮರ್ಪಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು.

''ಶ್ರೀ ಮಹಾಗಣಾಧಿಪತಯೇ ನಮಃ ಧ್ಯಾಯಾಮಿ ಧ್ಯಾನಂಸಮರ್ಪಯಾಮಿ'' ಎಂದು ನಮಸ್ಕರಿಸಿ, ''ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ'' ಎಂದು ಆಸನವನ್ನು ಮುಟ್ಟಿ, ''ಪಾದಯೋಃಪಾದ್ಯಂಪಾದ್ಯಂ ಸಮರ್ಪಯಾಮಿ'' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ, ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ'' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ, ''ಮುಖಾಂಬುಜೇ ಆಚಮನೀಯಂ ಸಮರ್ಪಯಾಮಿ'' ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಿ,

ಕಾಮಧೇನು ಸಮುದ್ಭೂತಂ ಸರ್ವೇಷಾಂ ಜೀವನಂಪರಂ।
ಪಾವನಂ ಯಜ್ಞಹೇತುಶ್ಚ ಪಯಃಸ್ನಾನಾರ್ಥ ಮರ್ಪಿತಂ॥

ಶ್ರೀ ಮಹಾ ಗಣಪತಯೇ ನಮಃ ಕ್ಷೀರೇಣ ಸ್ನಾಪಯಾಮಿ॥

ಪಯಸಸ್ತು ಸಮುದ್ಭೂತಂ ಮಧುರಾಮ್ಲಂ ಶಶಿಪ್ರಭಂ।
ದಧ್ಯಾನೀತಂ ಮಯಾದೇವ ಸ್ನಾನಾರ್ಥಂ ಪ್ರತಿಗೃಹ್ಯತಾಂ।

ಶ್ರೀ ಮಹಾಗಣಪತಯೇ ನಮಃ ದಧ್ನಾ ಸ್ನಾಪಯಾಮಿ॥

ನವನೀತ ಸಮುತ್ಪನ್ನಂ ಸರ್ವಸಂತೋಷಕಾರಕಂ।
ಘೃತಂತುಭ್ಯಂ ಪ್ರದಾಸ್ಯಾಮಿ ಸ್ನಾನಾರ್ಥಂ ಪ್ರತಿಗೃಹ್ಯತಾಂ।

ಶ್ರೀ ಮಹಾಗಣಪತಯೇ ನಮಃ ಘೃತೇನ ಸ್ನಾಪಯಾಮಿ॥

ತರುಪುಷ್ಪಸಮುದ್ಭೂತಂ ಸುಸ್ವಾದಂ ಮಧುರಂ ಮಧುಂ।
ತೇಜಃ ಪುಷ್ಟಿಕರಂ ದಿವ್ಯಂ ಸ್ನಾನಾರ್ಥಂ ಪ್ರತಿಗೃಹ್ಯತಾಂ॥

ಶ್ರೀ ಮಹಾಗಣಪತಯೇ ನಮಃ ಮಧುನಾಸ್ನಾಪಯಾಮಿ॥

ಇಕ್ಷುಸಾರ ಸಮುದ್ಭೂತಾ ಶರ್ಕರಾ ಪುಷ್ಟಿಕಾರಿಕಾ।
ಮಲಾಪಹಾರಿಕಾ ದಿವ್ಯಾ ಸ್ನಾನಾರ್ಥಂ ಪ್ರತಿಗೃಹ್ಯತಾಂ।

ಶ್ರೀ ಮಹಾಗಣಪತಯೇ ನಮಃ ಶರ್ಕರಯಾಸ್ನಾಪಯಾಮಿ॥

ನಾನಾ ಸುಗಂಧ ದ್ರವ್ಯಂಚ ಚಂದನಂ ರಜನೀಯುತಂ।
ಉದ್ವರ್ತನಂ ಮಯಾದತ್ತಂ ಗೃಹಾಣಗಣ ನಾಯಕ॥
ಶ್ರೀ ಮಹಾಗಣಪತಯೇ ನಮಃ ಉದ್ವರ್ತನಸ್ನಾನಂ ಸಮರ್ಪಯಾಮಿ॥

ಈ ಪ್ರಕಾರ ಪಂಚಾಮೃತ ಅಭಿಷೇಕ ಮಾಡಿದ ಬಳಿಕ,

ಆಪೋಹಿಷ್ಠಾ, ಮಯೋಭುವಸ್ತಾನ ಊರ್ಜೇದಧಾತನ। ಮಹೇರಣಾಯ ಚಕ್ಷಸೇ। ಯೋವಶ್ಶಿವತಮೋ ರಸಸ್ತಸ್ಯ ಭಾಜಯತೇಹನಃ। ಉಶತೀರವ ಮಾತರಃ। ತಸ್ಮಾ ಅರಂಗಮಾಮವೋ ಯಸ್ಯ ಕ್ಷಯಾಯ ಜಿನ್ವಥ। ಆಪೋಜನ ಯಥಾಚನಃ॥

ಶ್ರೀ ಮಹಾಗಣಪತಯೇ ನಮಃ ಪಂಚಾಮೃತ ಸ್ನಾನಾ ನಂತರ ಶುದ್ಧೋದಕೇನ ಸ್ನಾಪಯಾಮಿ॥

ಯುವಂ ವಸ್ತ್ರಾಣಿ ಪೀವಸಾವಸಾಥೇ ಯುವೋರಚ್ಛಿದ್ರಾಮಂತವೋಹ ಸರ್ಗಾಃ।
ಅವಾತಿರತ ಮನೃತಾನಿ ವಿಶ್ವಋತೇನ ಮಿತ್ರಾ ವರುಣಾಸಚೇಥೇ॥
ಶ್ರೀ ಮಹಾಗಣಪತಯೇ ನಮಃ ವಸ್ತ್ರಯುಗ್ಮಂ ಸಮರ್ಪಯಾಮಿ॥

ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇ ಯತ್ಸಹಜಂ ಪುರಸ್ತಾತ್।
ಆಯುಷ್ಯ ಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ॥
ಶ್ರೀ ಮಹಾಗಣಪತಯೇ ನಮಃ ಶಿವಸೂತ್ರಂ ಸಮರ್ಪಯಾಮಿ॥

ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ।
ಉರ್ವಾರುಕ ಮಿವ ಬಂಧನಾ ನ್ಮೃತ್ಯೋರ್ಮುಕ್ಷೀಯ ಮಾಮೃತಾತ್॥
ಶ್ರೀ ಮಹಾಗಣಪತಯೇ ನಮಃ ಭಸ್ಮ ಪರಿಕಲ್ಪಯಾಮಿ॥

ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ।
ಈಶ್ವರೀಗ್‌ಂ ಸರ್ವಭೂತಾನಾಂ ತಾಮಿ ಹೋಪಹ್ವಯೇ ಶ್ರೀಯಂ॥
ಶ್ರೀ ಮಹಾಗಣಪತಯೇ ನಮಃ ದಿವ್ಯ ಪರಿಮಳ ಗಂಧಂ ಧಾರಯಾಮಿ॥

ಆಯನೇತೇ ಪರಾಯಣೇ ದೂರ್ವಾರೋಹಂತು ಪುಷ್ಪಿಣೀಃ।
ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ॥
ಶ್ರೀ ಮಹಾಗಣಪತಯೇ ನಮಃ ಅಕ್ಷತಾನ್ ಸಮರ್ಪಯಾಮಿ॥

ಯಾಭಿರದ್ಯಗ್‌ಂ ಹಜ್ಜಗತಃ ಪ್ರತಿಷ್ಠಾಂ। ಉರ್ವೀಮಿಮಾಂ ವಿಶ್ವಜನಸ್ಯ ಭರ್ತ್ರೀಂ।
ತಾನಶ್ಶಿವಾಶ್ಶರ್ಕರಾಸ್ಸಂತು ಸರ್ವಾಃ। ಅಗ್ನೇರೇತಶ್ಚಂದ್ರಗ್‌ಂ ಹಿರಣ್ಯಂ॥
ಶ್ರೀ ಮಹಾಗಣಪತಯೇ ನಮಃ ಬಿಲ್ವಪತ್ರಾಣಿ ಧಾರಯಾಮಿ॥

ಯೋಽಪಾಂ ಪುಷ್ಪಂವೇದ। ಪುಷ್ಪವಾನ್ ಪ್ರಜಾವಾನ್ ಪಶುಮಾನ್ ಭವತಿ।
ಚಂದ್ರಮಾವಾ ಅಪಾಂ ಪುಷ್ಪಂ। ಪುಷ್ಪವಾನ್ ಪ್ರಜಾವಾನ್ ಪಶುಮಾನ್ ಭವತಿ॥
ಶ್ರೀ ಮಹಾಗಣಪತಯೇ ನಮಃ ನಾನಾವಿಧ ಪುಷ್ಪಾಣಿ ಸಮರ್ಪಯಾಮಿ॥

ಧೂರ್ವಸಿ ಧೂರ್ವ ಧೂರ್ವಂತಂ ಧೂರ್ವತಂಯೋಽಸ್ಮಾನ್
ಧೂರ್ವತಿತಂ ಧೂರ್ವಯಂ ವಯಂ ಧೂರ್ವಾಮಃ॥
ಶ್ರೀ ಮಹಾಗಣಪತಯೇ ನಮಃ ಧೂಪಮಾಘ್ರಾಪಯಾಮಿ॥

ಸೋಮೋವಾ ಏತಸ್ಯ ರಾಜ್ಯಮಾದತ್ತೇ। ಯೋ ರಾಜಾಸನ್ ರಾಜ್ಯೋವಾ
ಸೋಮೇನ ಯಜತೇ। ದೇವಸುವಾ ಮೇತಾನಿ ಹವೀಗ್ಂಷಿ ಭವಂತಿ।
ಏತಾವಂತೋ ವೈದೇವಾ ನಾಗ್ಂಸವಾಃ। ತ ಏವಾ ಸ್ಮೈ ಸವಾನ್ ಪ್ರಯಚ್ಛಂತಿ।
ತ ಏನಂ ಪುನಸ್ಸುವಂತೇ ರಾಜ್ಯಾಯ। ದೇವಸೂ ರಾಜಾ ಭವತಿ॥
ಶ್ರೀ ಮಹಾಗಣಪತಯೇ ನಮಃ ದೀಪಂದರ್ಶಯಾಮಿ॥

ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯಧೀಮಹಿ॥
ಧಿಯೋ ಯೋನಃ ಪ್ರಚೋದಯಾತ್। ಸತ್ಯಂ ತ್ವರ್ತೇನ ಪರಿಷಿಂಚಾಮಿ।
ಅಮೃತೋಪಸ್ತರಣ ಮಸಿ॥
ಎಂದು ಆಪೋಶನವನ್ನು ಕೊಟ್ಟು,

ಓಂ ಪ್ರಾಣಾಯಸ್ವಾಹಾ। ಓಂ ಅಪಾನಾಯಸ್ವಾಹಾ। ಓಂ ವ್ಯಾನಾಯ ಸ್ವಾಹಾ।
ಓಂ ಉದಾನಾಯಸ್ವಾಹಾ। ಓಂ ಸಮಾನಾಯಸ್ವಾಹಾ। ಓಂ ಬ್ರಹ್ಮಣೇ ಸ್ವಾಹಾ॥
ಶ್ರೀ ಮಹಾ ಗಣಪತಯೇ ನಮಃ ನೈವೇದ್ಯಂ ಸಮರ್ಪಯಾಮಿ ॥ ಆನಂತರಂ ಆಚಮನೀಯಂ ಸಮರ್ಪಯಾಮಿ॥

ಪರಿಣೋ ರುದ್ರಸ್ಯ ಹೇತಿರ್ವೃಣಕ್ತು ಪರಿತ್ವೇಷಸ್ಯ ದುರ್ಮತಿ ರಘಾಯೋಃ।
ಅವಸ್ಥಿರಾ ಮಘವದ್ಭ್ಯಸ್ತನುಷ್ವ ಮೀಢ್ವಸ್ತೋ ಕಾಯತನಯಾಯ ಮೃಡಯ॥
ಶ್ರೀ ಮಹಾಗಣಪತಯೇ ನಮಃ ತಾಂಬೂಲಂ ಸಮರ್ಪಯಾಮಿ॥

ಹಿರಣ್ಯರೂಪಸ್ಸಹಿರಣ್ಯ ಸಂದೃಗಪಾಂ ನಪಾತ್ಸೇದು ಹಿರಣ್ಯವರ್ಣಃ।
ಹಿರಣ್ಯ ಯಾತ್ಪರಿಯೋನೇರ್ನಿಷದ್ಯಾ ಹಿರಣ್ಯದಾದ ದತ್ಯನ್ನಮಸ್ಮೈ॥
ಶ್ರೀ ಮಹಾ ಗಣಪತಯೇ ನಮಃ ದಕ್ಷಿಣಾಂ ಸಮರ್ಪಯಾಮಿ॥

ಹಿರಣ್ಯಪಾತ್ರಂ ಮಧೋಃ ಪೂರ್ಣಂ ದದಾತಿ। ಮಧವ್ಯೋಸಾ ನೀತಿ।
ಏಕಧಾ ಬ್ರಹ್ಮಣ ಉಪಹರತಿ।ಏಕಧೈವ ಯಜಮಾನ ಆಯುಸ್ತೇಜೋದಧಾತಿ॥
ಶ್ರೀ ಮಹಾ ಗಣಪತಯೇ ನಮಃ ನೀರಾಜನಂ ದರ್ಶಯಾಮಿ॥ ನೀರಾಜನಾ ನಂತರಂ ಆಚಮನೀಯಂ ಸಮರ್ಪಯಾಮಿ॥

ನಿಷುಸೀದ ಗಣಪತೇ ಗಣೇಷುತ್ವಾಮಾಹುರ್ವಿಪ್ರತಮಂ ಕವೀನಾಂ।
ನೈರುತೇತ್ವತ್ತಿಯತೇ ಕಿಂಚನಾರೇ ಮಹಮರ್ಕಂ ಮಘವಂ ಚಿತ್ರ ಮರ್ಚ॥

ಶ್ರೀ ಮಹಾ ಗಣಪತಯೇ ನಮಃ ಮಂತ್ರ ಪುಷ್ಪಂ ಸಮರ್ಪಯಾಮಿ॥

ಪ್ರಕೃಷ್ಟಪಾಪನಾಶಾಯ ಪ್ರಕೃಷ್ಟಫಲಸಿದ್ಧಯೇ।
ಪ್ರದಕ್ಷಿಣಂ ಕರೋಮೀಶ ಪ್ರಸೀದ ಗಣನಾಯಕ॥
ಸರ್ವಾರ್ಥ ಸಾಧನೋಪಾಯ ಸರ್ವೈಶ್ವರ್ಯ ಪ್ರದಾಯಕ।
ಸಮಸ್ತಾಪತ್ತ್ರೀಕಾರ ಚಂದ್ರಶೇಖರ ತೇ ನಮಃ॥

ಶ್ರೀ ಮಹಾ ಗಣಪತಯೇ ನಮಃ ಶಿರಸಾ ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ॥

ವಕ್ರತುಂಡ ಮಹಾಕಾಯ ಸೂರ್ಯಕೋಟಿ ಸಮಪ್ರಭ।
ನಿರ್ವಿಘ್ನಂ ಕುರುಮೇದೇವ ಸರ್ವಕಾರ್ಯೇಷು ಸರ್ವದಾ॥
ಯಸ್ಯಸ್ಮೃತ್ಯಾಚನಾ ಮೋಕ್ತ್ಯಾತಪಃ ಪೂಜಾ ಕ್ರಿಯಾದಿಷು।
ನ್ಯೂನಂ ಸಂಪೂರ್ಣತಾಂಯಾತಿ ಸದ್ಯೋವಂದೇ ಸದಾಶಿವಂ॥
ಮಂತ್ರ ಹೀನಂ ಕ್ರಿಯಾಹೀನಂ ಭಕ್ತಿ ಹೀನಂ ಗಣಾಧಿಪ।
ಯತ್ಪೂಜಿತಂ ಮಯಾದೇವ ಪರಿಪೂರ್ಣಂ ತದಸ್ತುತೇ॥
ಅನಯಾ ಪೂಜಯಾ ಭಗವಾನ್ ಸರ್ವಾತ್ಮಕಃ ಶ್ರೀ ಮಹಾ ಗಣಪತಿಃ
ಸುಪ್ರೀತಃ ಸುಪ್ರಸನ್ನಃ ವರದೋ ಭವತು॥

ಎಂದು ದಕ್ಷಿಣೆ, ಅಕ್ಷತೆ ಸಹಿತವಾದ ಜಲವನ್ನು ಬಿಡಬೇಕು.

ಯಜ್ಞೇನಯಜ್ಞಮಯ ಜಂತದೇವಾಃ। ತಾನಿಧರ್ಮಾಣಿ ಪ್ರಥಮಾನ್ಯಾಸನ್।
ತೇಹನಾಕಂ ಮಹಿಮಾನಸ್ಸಚಂತೇ। ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ॥

ಶ್ರೀ ಮಹಾಗಣಪತಯೇ ನಮಃ ಯಥಾಸ್ಥಾನಂ ಪ್ರತಿಷ್ಠಾಪಯಾಮಿ ಶೋಭನಾರ್ಥಂ ಪುನರಾಗಮನಾಯಚ॥

ಎಂದು ಉಚ್ಚರಿಸಿ ಗಣಪತಿ ಮೂರ್ತಿಯನ್ನು ಮೇಲಕ್ಕೆತ್ತಿ ಪುನಃ ಅಲ್ಲಿಯೇ ಇಡುವದು.

ದೇವಾಲಯದಲ್ಲಿ ಅಥವಾ ತನ್ನ ಮನೆಯ ಪವಿತ್ರ ಸ್ಥಾನದಲ್ಲಿ ರಂಗವಲ್ಲಿಯನ್ನು ಹಾಕಿ ಅಲ್ಲಿ ಒಂದು ವರ್ತುಲವನ್ನು ಬರೆದು ಅದರ ಮೇಲೆ ಒಂದು ಸೇರು ಭತ್ತವನ್ನು ಚಚ್ಚೌಕಾಗಿ ಹರವಿ ಅದರ ಮೇಲೆ ಗೋಧಿಯ ರಾಶಿಯನ್ನು ಹಾಕಿ ಅದರ ಮೇಲೆ ತಾಮ್ರದ ಕಲಶ (ತಂಬಿಗೆ)ವನ್ನು ಸ್ಥಾಪಿಸಬೇಕು. (ಕಲಶ ಸ್ಥಾಪನೆ ಮಾಡುವದನ್ನು ನಮ್ಮ "ಶಾಂತಿ ಪ್ರಯೋಗ ರತ್ನ" ಗ್ರಂಥ ನೋಡಿರಿ) ಆ ಕಲಶದಲ್ಲಿ ಜಲವನ್ನು ತುಂಬಿ ಗಂಧ,

ಪಂಚಪಲ್ಲವ, ಬಂಗಾರ, ತಾಮ್ರ, ದರ್ಭೆಗಳನ್ನು ಹಾಕಿ ಆ ಕಲಶಕ್ಕೆ ಕೆಂಪುದಾರ (ಸೂತ್ರ) ವನ್ನು ಸುತ್ತಿ ಕಲಶದ ಮೇಲೆ ಹರವಾದ ತಾಮ್ರದ ಪಾತ್ರೆಯನ್ನು ಇಟ್ಟು ಅದರಲ್ಲಿ ಗೋದಿಯನ್ನು ಹಾಕಿ ಆ ಗೋದಿಯ ಮೇಲೆ ಕೆಂಪು ವಸ್ತ್ರವನ್ನು ಹರವಿ ಅದರಲ್ಲಿ ಬಂಗಾರದ ಅಷ್ಟದಳ ಕಮಲವನ್ನೂ (ಸುವರ್ಣ ಪದ್ಮ) ಕಮಲದ ಮಧ್ಯದಲ್ಲಿ ಬಂಗಾರದ ಸೂರ್ಯ ಪ್ರತಿಮೆಯನ್ನೂ ಇಟ್ಟು (ಮೊದಲಿಗೆ ಸೂರ್ಯ ಪ್ರತಿಮೆ ಹಾಗೂ ಬಂಗಾರದ ಕಮಲಗಳಿಗೆ ಪಂಚಾಮೃತ, ಪಂಚಗವ್ಯಗಳಿಂದಲೂ ಶ್ರೀ ರುದ್ರಾಭಿಷೇಕದಿಂದಲೂ ಪೂಜಿಸಿರಬೇಕು.) ಆ ಕಮಲ ಹಾಗೂ ಸೂರ್ಯ ಪ್ರತಿಮೆಗಳನ್ನು ಸ್ಥಾಪಿಸುವದು.

"ಆಸತ್ಯೇನ ಹಿರಣ್ಯ ಸ್ತೋಪ ಸ್ಸವಿತಾ ತ್ರಿಷ್ಟುಪ್ । ಆಸತ್ಯೇನ ಇತಿ ಮಂತ್ರಸ್ಯಹಿರಣ್ಯ ಸ್ತೋಪ ಋಷಿಃ (ಮಸ್ತಕದಲ್ಲಿ) ಸವಿತಾ ದೇವತಾ । ತ್ರಿಷ್ಟುಪ್ ಛಂದಃ । (ಮುಖದಲ್ಲಿ) ಸೂರ್ಯಗ್ರಹ ದೇವತಾ (ಹೃದಯದಲ್ಲಿ) ಪ್ರೀತ್ಯರ್ಥಂ।.... ಯಜಮಾನಸ್ಯ ಸರ್ವಾರಿಷ್ಟ ಪರಿಹಾರದ್ವಾರಾ ಸೂರ್ಯ ಗ್ರಹ ಪ್ರಸಾದ ಸಿದ್ಧ್ಯರ್ಥೇ ಸೂರ್ಯಗ್ರಹಾರಾಧನೇ ವಿನಿಯೋಗಃ"

ಎಂದು ಹೇಳಿ ಕರನ್ಯಾಸವನ್ನು ಮಾಡಬೇಕು.

"ಆ ಸತ್ಯೇನ-ಅಂಗುಷ್ಠಾಭ್ಯಾಂ ನಮಃ। ರಜಸಾ ವರ್ತಮಾನಃ- ತರ್ಜನೀಭ್ಯಾಂ ನಮಃ । ನಿವೇಶಯನ್-ಮಧ್ಯಮಾಭ್ಯಾಂ ನಮಃ । ಅಮೃತಂ ಮರ್ತ್ಯಂಚ- ಅನಾಮಿಕಾಭ್ಯಾಂ ನಮಃ । ಹಿರಣ್ಯಯೇನ ಸವಿತಾ ರಥೇನ- ಕನಿಷ್ಠಿಕಾಭ್ಯಾಂ ನಮಃ । ಆದೇವೋ ಯಾತಿ ಭುವನಾನಿ ಪಶ್ಯನ್-ಕರತಲ ಕರಪೃಷ್ಠಾಭ್ಯಾಂ ನಮಃ"

ಅಂಗನ್ಯಾಸ :- "ಆ ಸತ್ಯೇನ-ಹೃದಯಾಯ ನಮಃ । ರಜಸಾ ವರ್ತಮಾನಃ- ಶಿರಸೇಸ್ವಾಹಾ । ನಿವೇಶಯನ್-ಶಿಖಾಯೈ ವಷಟ್ । ಅಮೃತಂ ಮರ್ತ್ಯಂಚ ಕವಚಾಯ ಹುಂ। ಹಿರಣ್ಯಯೇನ ಸವಿತಾ ರಥೇನ-ನೇತ್ರತ್ರಯಾಯ ವೌಷಟ್ । ಆದೇವೋ ಯಾತಿ ಭುವನಾನಿ ಪಶ್ಯನ್-ಅಸ್ತ್ರಾಯ ಫಟ್ । ಓಂ ಭೂರ್ಭುವಸ್ಸುವರೋಂ ಇತಿ ದಿಗ್ಬಂಧಃ।

ಎಂದು ಹೇಳಿ ಕರನ್ಯಾಸ, ಅಂಗನ್ಯಾಸಗಳನ್ನು ಮಾಡಿ ದಶದಿಕ್ಕುಗಳಿಗೂ ನೀರು ಸಿಂಪಡಿಸಿ ಚಟಿಗೆ ಹೊಡೆದು ದಿಗ್ಬಂಧನವನ್ನು ಮಾಡಬೇಕು.

ಧ್ಯಾನಂ :- "ವೇದೀಮಧ್ಯೇಲಲಿತ ಕಮಲೇ ಕರ್ಣಿಕಾಯಾಂ ರಥಸ್ಥಃ।
ಸಪ್ತಾಶ್ವಾರ್ಕೋ ಋಣ ರುಚಿವಪುಃ ಸಪ್ತರಜ್ಜುರ್ದ್ವಿಬಾಹುಃ॥
ಗೋತ್ರೇರಮ್ಯೇ ಬಹುವಿಧ ಗುಣೇ ಕಾಶ್ಯ ಪಾಖ್ಯೇ ಪ್ರಸೂತಃ।
ಕಾಳಿಂಗಾಖ್ಯೇ ವಿಷಯಜನಿತಃ ಪ್ರಾಙ್ಮುಖಃ ಪದ್ಮ ಹಸ್ತಃ॥
ಪದ್ಮಾಸನಃ ಪದ್ಮಕರೋ ದ್ವಿಬಾಹುಃ ಪದ್ಮದ್ಯುತಿಃ ಸಪ್ತ ತುರಂಗಬಾಹುಃ॥

ದಿವಾಕರೋ ಲೋಕ ಗುರುಃ ಕಿರೀಟೀ ಮಯಿ ಪ್ರಸಾದಂ
ವಿದಧಾತು ದೇವಃ'' ॥
''ಆ ಸತ್ಯೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂಚ।
ಹಿರಣ್ಯಯೇನ ಸವಿತಾರಥೇನಾ ದೇವೋಯಾತಿ ಭುವನಾನಿ ಪಶ್ಯನ್'' ॥

ಎಂದು ಸೂರ್ಯನನ್ನು ಧ್ಯಾನಿಸಬೇಕು. ನಂತರ,

''ಸೂರ್ಯ ರಕ್ತವರ್ಣಂ। ರಕ್ತಮಾಲ್ಯಾಂಬರಧರಂ। ರಕ್ತಗಂಧಾನುಲೇಪನಂ। ರಕ್ತಾಶ್ವಃ ರಕ್ತಛತ್ರಃ ಧ್ವಜಪತಾಕೋಪಂ ಶೋಭಿತಂ। ದಿವ್ಯರಥಮಾರೂಢಂ। ಮೇರುಂ ಪ್ರದಕ್ಷಿಣೇ ಕುರ್ವಾಣಂ। ಗ್ರಹಮಂಡಲೇ ಪ್ರವಿಷ್ಟಂ ಸಾಂಗಂ। ಸಾಯುಧಂ। ಸವಾಹನಂ। ಸರಾಷ್ಟ್ರಂ। ಸಶಕ್ತಿ ಸಪತ್ನೀಸಪುತ್ರ ಸಪರಿವಾರ ಸಮೇತಂ। ಸರ್ವಾಲಂಕಾರಭೂಷಿತಂ। ಅಧಿ ದೇವತಾ ಪ್ರತ್ಯಧಿದೇವತಾ ಸಹಿತಂ। ವರ್ತುಲಾಕಾರ ಮಂಡಲ ಮಧ್ಯೇ। ಗೋಧೂಮ ಧಾನ್ಯ ಸ್ಯೋಪರಿ ಭಗವಂತಂ। ಓಂ ಭೂಃ। ಸೂರ್ಯಗ್ರಹ ಮಾವಾಹಯಾಮಿ। ಓಂ ಭುವಃ। ಸೂರ್ಯ ಗ್ರಹಮಾವಾಹಯಾಮಿ। ಓಂ ಸುವಃ। ಸೂರ್ಯಗ್ರಹಮಾವಾಹಯಾಮಿ। ಓಂ ಭೂರ್ಭುವಃ ಸ್ವಃ ಸೂರ್ಯಗ್ರಹ ಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಎಂದು ಉಚ್ಚರಿಸಿ ಆವಾಹನೆ ಮಾಡಿ ಸ್ಥಾಪಿಸಿ ಕೆಂಪು ವಸ್ತ್ರವನ್ನು ಹೊದಿಸಿ ಕೆಂಪು ಗಂಧ, ಕುಂಕುಮ, ಕೆಂಪು ಅಕ್ಷತೆ, ಎಕ್ಕೆಯ ಹೂ, ಪತ್ರಿ, ಧೂಪ, ದೀಪಗಳಿಂದ ಪೂಜಿಸಿ ಪಾಯಸದ ನೈವೇದ್ಯವನ್ನು ಮಾಡಿ ಅರ್ಘ್ಯವನ್ನು ಕೊಟ್ಟು ತಾಂಬೂಲ, ದಕ್ಷಿಣೆಗಳನ್ನು ಸಮರ್ಪಿಸಿ ಕೆಳಗಿನ ಮಂತ್ರದಿಂದ ಪ್ರಾರ್ಥಿಸಬೇಕು.

ಮಂತ್ರ :- ದ್ವಿಭುಜಂ ಪದ್ಮಹಸ್ತಂಚ ವರದಂ ಮುಕುಟಾನ್ವಿತಂ।
ಧ್ಯಾಯೇದ್ದಿವಾಕರಂ ದೇವಂ ಸರ್ವಾಭೀಷ್ಟ ಪ್ರದಾಯಕಂ॥
ಸೂರ್ಯಃ ದಿವಾಕರಶ್ಚೈವ ತೇಜೋಮೂರ್ತಿರ್ಜಗತ್ಪತಿಃ।
ಶಂಕರೋ ವರದಶ್ಶಾಂತಃ ಹಂಸಶ್ಚೇತ್ಯಷ್ಟ ನಾಮಭಿಃ॥

ಈ ಪ್ರಕಾರ ಸೂರ್ಯದೇವ... ನ್ನ ಧ್ಯಾನಿಸಿ, ಕಮಲದ ಎಂಟು ದಳಗಳಿಗೂ ಸೂರ್ಯಃ, ದಿವಾಕರಃ, ತೇಜೋಮೂರ್ತಿಃ, ಜಗತ್ಪತಿಃ, ಶಂಕರಃ, ವರದಃ, ಶಾಂತಃ, ಹಂಸಃ ಈ ನಾಮಗಳಿಂದ ಕ್ರಮವಾಗಿ ಪ್ರತಿಯೊಂದು ದಳವನ್ನೂ ಪೂಜಿಸಿ ಬಳಿಕ ಓರ್ವ ಜಂಗಮ ಮೂರ್ತಿಯನ್ನು ಅಥವಾ ಸದಾಚಾರ ಸಂಪನ್ನನಾದ ಬ್ರಾಹ್ಮಣನನ್ನು ಕೆಂಪು ವಸ್ತ್ರ, ಕೆಂಪು ಗಂಧ, ಅಕ್ಷತೆ, ಕೆಂಪು ಹೂಗಳಿಂದ ಪೂಜಿಸಿ ''ಓಂ ಸೂರ್ಯಾಯ ಸ್ವಾಹಾ'' ಈ ಮಂತ್ರದಿಂದ 108 ಸಾರೆ ಹೋಮವನ್ನು ಮಾಡಿ ರಕ್ತಧೇನು (ಕೆಂಪು ಆಕಳು) ವನ್ನು ಪೂಜಿಸಬೇಕು. ನಂತರ ತಾಮ್ರದ ಕಲಶದಲ್ಲಿಯ ಜಲದಿಂದ

ಯಜಮಾನನಿಗೆ ಪ್ರೋಕ್ಷಣೆ ಮಾಡಬೇಕು ಮತ್ತು ಕೆಳಗಿನ ಮಂತ್ರವನ್ನು ಪಠಿಸುತ್ತ ಸುವರ್ಣ ಪದ್ಮ, ಸೂರ್ಯ ಪ್ರತಿಮಾ, ಕಲಶ, ಕೆಂಪುವಸ್ತ್ರ ಹಾಗೂ ರಕ್ತಧೇನು (ಕೆಂಪು ಆಕಳು) ವನ್ನು ದಕ್ಷಿಣೆ, ತಾಂಬೂಲ ಸಹಿತ ದಾನ ಕೊಡಬೇಕು.

ಮಂತ್ರ :- ಗೋಧೂಮಸ್ಥಂ ರವಿಂ ಭಕ್ತ್ಯಾ ಸ್ವರ್ಚಿತಂ ಸುಮನೋಹರಂ।
ದದಾಮಿ ಫಲ ಸಿದ್ಧ್ಯರ್ಥಂ ಪೀಡ್ಯಾಂ ದಹತು ಮೇ ರವಿಃ॥
ಅನೇಕ ವಿಧಿ ನಾಯಸ್ತು ಸ್ವರ್ಣ ಪದ್ಮಂ ನಿವೇದಯಾತ್।
ಸರ್ವಪಾಪ ವಿನಿರ್ಮುಕ್ತಃ ಸರ್ವರೋಗ ವಿವರ್ಜಿತಃ॥
ದುಷ್ಟಸ್ಥಾನ ಸ್ಥಿತಾದಿತ್ಯ ಸೂಚಿತಾರಿಷ್ಟಮೋಚಿತಃ।
ರಾಜಕ್ಷೋಭಾರ್ಥ ನಾಶಾದಿ ಸರ್ವೋಪದ್ರವ ವರ್ಜಿತಃ॥
ಇಹಭುಕ್ತ್ವಾಖಿಲಾನ್ ಭೋಗಾನಂತ್ಯೇ ಸೂರ್ಯಪದಂ ಲಭೇತ್॥

ಈ ಮಂತ್ರವನ್ನು ಪಠಿಸುತ್ತ ದಾನ ಮಾಡಿ ಪೂಜ್ಯರಿಂದ ಆಶೀರ್ವಾದ ಪಡೆಯಬೇಕು. ಈ ಪ್ರಕಾರ ಯಾಮಳ ತಂತ್ರದಲ್ಲಿ ಸೂರ್ಯ ಪ್ರೀತಿಕರ ಸುವರ್ಣ ಪದ್ಮ ಸೂರ್ಯ ಪ್ರತಿಮಾ ದಾನವು ವಿವರಿಸಲ್ಪಟ್ಟಿದೆ.



## ಸೂರ್ಯದಶಾ ಸೂರ್ಯಭುಕ್ತಿಯಲ್ಲಿ ಸೂರ್ಯ ಪ್ರೀತಿಕರ ರಕ್ತಧೇನು ದಾನ

ಹಾಲು ಕರೆಯುತ್ತಿರುವ, ಕರು ಸಹಿತವಾಗಿರುವ ಕೆಂಪು ಬಣ್ಣದ ಆಕಳನ್ನು ಕೊಂಬು, ಕುತ್ತಿಗೆ, ಬಾಲ, ಕಾಲು, ಕೊಳಗಗಳಿಗೆ ಬೆಳ್ಳಿ, ಬಂಗಾರ, ತಾಮ್ರ, ಮುತ್ತುಗಳಿಂದಲೂ, ಕೆಂಪು ಹೂವು, ಕೆಂಪು ಬಣ್ಣದ ಬಟ್ಟೆಗಳಿಂದಲೂ ಅಲಂಕರಿಸಬೇಕು (ಕೋಡುಗಳಿಗೆ ಬಂಗಾರ, ಖುರ (ಕೊಳಗ) ಗಳಿಗೆ ಬೆಳ್ಳಿ, ಆಕಳ ಹಿಂದಿನ ಭಾಗಕ್ಕೆ ತಾಮ್ರ, ಕೊರಳಿಗೆ ಬಂಗಾರದ ಗಂಟೆ, ಬಾಲಕ್ಕೆ ಮುತ್ತುಗಳ ಗೊಂಚಲು ಮುಖಕ್ಕೆ ಕನ್ನಡಿ ಈ ಪ್ರಕಾರ ಆಕಳದ ವಿವಿಧ ಅವಯವಗಳನ್ನು ನಾನಾ ಭೂಷಣಗಳಿಂದ ಶೃಂಗರಿಸಬೇಕು) ಈ ಪ್ರಕಾರ ಅಲಂಕಾರ ಮಾಡಿದ ಆಕಳನ್ನು ಷೋಡಶೋಪಚಾರಗಳಿಂದ ಪೂಜಿಸಿ ನಂತರ ಜಂಗಮ ಮೂರ್ತಿಯನ್ನು ಅಥವಾ ಬ್ರಾಹ್ಮಣನನ್ನು ಪೂಜಿಸಿ ಆತನಿಗೆ ವಸ್ತ್ರ, ಪುಷ್ಪಹಾರ, ದಕ್ಷಿಣೆ, ತಾಂಬೂಲ ಆಭರಣಗಳನ್ನು ಸಮರ್ಪಿಸಿ, ಆಕಳನ್ನು ಕರು ಸಹಿತವಾಗಿ ದಕ್ಷಿಣೆ, ತಾಂಬೂಲದೊಂದಿಗೆ ದಾನ ಕೊಡಬೇಕು ಮತ್ತು ಆಕಳ ಸಂಗಡ ಹಾಲು ಕರೆಯುವ

ಒಂದು ಕಂಚಿನ ಪಾತ್ರೆ ಮತ್ತು ತುಪ್ಪದ ಕೊಡವನ್ನೂ ದಾನ ಮಾಡಬೇಕು. ದಾನ ಮಾಡುವಾಗ ಈ ಕೆಳಗಿನ ಮಂತ್ರವನ್ನು ಪಠಿಸಬೇಕು.

ಮಂತ್ರ :- ಪೀನಸಾದಿ ಶಿರೋರೋಗ ಗ್ರಸ್ತಂ ಮಾಂ ಪಾಹಿ ಭಾಸ್ಕರ
ರಕ್ತಧೇನು ಪ್ರದಾನೇನ ಸರ್ವರೋಗಾನ್ ಹರಸ್ವಮೇ ॥
ತತಸ್ತು ದಕ್ಷಿಣಾಂ ದದ್ಯಾದ್ಯ ಥಾವಿಭವ ಸಾರತಃ।
ನಿರೋಗೀ ನಾತ್ರ ಸಂದೇಹೋ ದೀರ್ಘಮಾಯುರ್ಭವೇದ್ಧ್ರುವಂ ॥

ಈ ಮಂತ್ರವನ್ನು ಪಠಿಸುತ್ತ ದಾನ ಮಾಡುವದರಿಂದ ಸರ್ವ ರೋಗಗಳು ಪರಿಹಾರವಾಗಿ ಆರೋಗ್ಯವೂ, ಆಯುಷ್ಯವೂ ವೃದ್ಧಿಯಾಗುವವು. ಈ ಪ್ರಕಾರ ಆರ್ಣವ ತಂತ್ರದಲ್ಲಿ ರಕ್ತಧೇನು ದಾನ ವಿಧಾನವು ವಿವರಿಸಲ್ಪಟ್ಟಿರುವದು.



## ಸೂರ್ಯದಶಾ ಚಂದ್ರಭುಕ್ತಿಯಲ್ಲಿ ಚಂದ್ರ ಪ್ರೀತಿಕರ ಗೋದಾನವು

ಜನನ ಲಗ್ನ ಕುಂಡಲಿಯಲ್ಲಿ ಚಂದ್ರನು ಕ್ರೂರ ಸ್ಥಾನಗಳಲ್ಲಿದ್ದರೆ, ಆ ದಶಾಭುಕ್ತಿಗಳಲ್ಲಿ ದುಷ್ಟ ಫಲಗಳುಂಟಾಗುವವು. ಅದಕ್ಕಾಗಿ ಕರು ಸಹಿತವಾದ ಬಿಳಿಯ ಬಣ್ಣದ ಆಕಳನ್ನು ದಾನ ಮಾಡಬೇಕು.

ಸೂರ್ಯ–ಚಂದ್ರರ ಗ್ರಹಣಾದಿ ಪುಣ್ಯ ಕಾಲಗಳಲ್ಲಿ ಅಥವಾ ಗ್ರಹಚಾರದ ಅನಿಷ್ಟ ಸಮಯದಲ್ಲಿ ದೇವಾಲಯದೊಳು ಅಥವಾ ತನ್ನ ಮನೆಯಲ್ಲಿಯ ಪವಿತ್ರ ಸ್ಥಾನದೊಳು ರಂಗವಲ್ಯಾದಿಗಳಿಂದ ಅಲಂಕರಿಸಲ್ಪಟ್ಟ ಭೂಭಾಗದಲ್ಲಿ ಹಾಲು ಕರೆಯುವ, ಕರು ಸಹಿತವಾಗಿರುವ ಬಿಳಿಯಬಣ್ಣದ ಆಕಳನ್ನು ಕೊಂಬು, ಕುತ್ತಿಗೆ, ಬಾಲ, ಕಾಲುಗಳಿಗೆ ಬೆಳ್ಳಿ, ಬಂಗಾರ, ತಾಮ್ರ, ಮುತ್ತುಗಳ ಆಭರಣಗಳಿಂದಲೂ, ಬಿಳಿಯ ವಸ್ತ್ರಗಳಿಂದಲೂ ಮಲ್ಲಿಗೆಯ ಹೂಗಳ ಮಾಲೆಗಳಿಂದಲೂ ಅಲಂಕರಿಸಿ ಆಕಳನ್ನು ಪೂರ್ವಾಭಿಮುಖವಾಗಿ ನಿಲ್ಲಿಸಿ, ಯಜಮಾನನು ಉತ್ತರ ದಿಕ್ಕಿಗೆ ಮುಖಮಾಡಿ ನಿಂತುಕೊಂಡು ಬಲಗೈಯಲ್ಲಿ ಅಕ್ಷತೆ, ಪತ್ರಿ, ಪುಷ್ಪಗಳನ್ನು ಜಲ ಸಹಿತವಾಗಿ ಹಿಡಿದುಕೊಂಡು ಸಂಕಲ್ಪ ಮಾಡಬೇಕು– ದೇಶ ಕಾಲಾದಿಗಳನ್ನು ಉಚ್ಚರಿಸಿ ''ಅಸ್ಯಾಂಶುಭತಿಥೌ ಮಮ ಇಹಜನ್ಮನಿ ಜನ್ಮಾಂತರೇಷು ಜ್ಞಾನ, ಅಜ್ಞಾನ ಕೃತ ಮಹಾ ಪಾತಕಾದಿ ಸಕಲ ಪಾತಕ ಸಂಕ್ಷಯ ದ್ವಾರಾ ಸರ್ವಮಂಗಳ ಪ್ರಾಪ್ತ್ಯರ್ಥಂ ವಾತಶ್ಲೇಷ್ಮ ಕಫೋದ್ಭವಾದಿ ನಾನಾರೋಗ ನಿವಾರಣಾರ್ಥಂ ಶತಾಯುಷ್ಯ ಸಿದ್ಧ್ಯರ್ಥಂ ಚಂದ್ರಗ್ರಹ ಪ್ರೀತ್ಯರ್ಥಂ ಶ್ವೇತಧೇನು ದಾನಂ ಕರಿಷ್ಯೇ'' ಎಂದು ಸಂಕಲ್ಪವನ್ನು ಮಾಡಿ ಆಕಳನ್ನು ಪೂಜಿಸಬೇಕು.

ಶೃಂಗ ಮೂಲಯೋಃ ಬ್ರಹ್ಮವಿಷ್ಣೂನ್, ಶೃಂಗಾಗ್ರಯೋಃ ಸರ್ವ ತೀರ್ಥಾನಿ, ಲಲಾಟೇ ಮಹಾದೇವಂ, ಲಲಾಟಾಗ್ರೇ ಮಹಾದೇವಿಂ, ನಾಸಾವಂಶೇ ಷಣ್ಮುಖಂ, ಕರ್ಣಯೋಃ ಅಶ್ವಿನೌ, ಚಕ್ಷುಷೋಃ ಶಶಿಭಾಸ್ಕರೌ, ದಂತೇಷು ವಾಯುಂ, ಜಿಹ್ವಾಯಾಂ ವರುಣಂ ಹುಂಕಾರೇ ಸರಸ್ವತೀಂ, ಗಂಡಯೋಃ ಯಮ ಧರ್ಮೌ, ಓಷ್ಠಯೋಃ ಸಂಧ್ಯಾದ್ವಯಂ ಗ್ರೀವಾಯಾಂ ಇಂದ್ರಂ, ಕುಕ್ಷಿದೇಶೇ ರಕ್ಷಾಂಸಿ, ಉರಸಿ ಸಾಧ್ಯಾನ್, ಚತುಷ್ಪಾದೇಷು ಧರ್ಮಂ, ಖುರಮಧ್ಯೇ ಗಂಧರ್ವಾನ್, ಖುರಾಗ್ರೇ ಪನ್ನಗಾನ್, ಖುರಪಾರ್ಶ್ವೇಷು ಅಪ್ಸರಸಃ ಪೃಷ್ಠೇ ಏಕಾದಶ ರುದ್ರಾನ್, ಸರ್ವಸಂದಿಷು ವಸೂನ್, ಶ್ರೋಣಿತಟೇ ಪಿತ್ರೂನ್, ಲಾಂಗೂಲೇ ಸೋಮಂ, ವಾಲೇಷು ಆದಿತ್ಯರಸ್ಮೀನ್, ಗೋಸೂತ್ರೇ ಗಂಗಾಂ, ಕ್ಷೀರೇ ಸರಸ್ವತೀಂ, ದಧ್ನಿನರ್ಮದಾಂ ಸರ್ಪಿಷು ಹುತಾಶನಂ, ರೋಮಸುತ್ರಯ ಸ್ತ್ರೀಂಶತೋ[illegible] ದೇವಾನಾಂ ಉದರೇಪೃಥಿವೀಂ ಪಯೋಧರೇಷು ಚತುಃ ಸಾಗರಾನ್ ನ್ಯಸಾಮಿ.

ಪಾದ್ಯ- ಸೌರಭೇಯಿ ಸರ್ವಹಿತೇ ಪವಿತ್ರೇ ಪಾಪನಾಶಿನಿ।
ಗೃಹ್ಣೀಷ್ವ್ವತ ನ್ಮಯಾದತ್ತಂ ಪಾದ್ಯಂ ತ್ರೈಲೋಕ್ಯ ವಂದಿತೇ॥
ಓಂ ಭೂರ್ಭುವಃ ಸ್ವಃ ಶ್ವೇತಧೇನವೇ ನಮಃ ಪಾದ್ಯಂ ಸಮರ್ಪಯಾಮಿ

ಅರ್ಘ್ಯ- ಸರ್ವದೇವಮಯೇ ದೇವಿ ಸರ್ವತೀರ್ಥಮಯೇ ಶುಭೇ।
ಗ್ರಹಾಣಾರ್ಘ್ಯಂ ಮಯಾದತ್ತಂ ಸೌರಭೇಯಿ ನಮೋಸ್ತುತೇ॥
ಶ್ವೇತಧೇನವೇ ನಮಃ ಅರ್ಘ್ಯಂ ಸಮರ್ಪಯಾಮಿ

ಆಚಮನ- ದೇಹಸ್ಥಿತಾಸಿ ರುದ್ರಾಣೀ ಶಂಕರಸ್ಯ ಸದಾಪ್ರಿಯಾ।
ಧೇನುರೂಪೇಣ ಸಾದೇವೀ ಮಮಪಾಪಂ ವ್ಯಪೋಹತು॥
ಶ್ವೇತಧೇನವೇ ನಮಃ ಆಚಮನೀಯಂ ಸಮರ್ಪಯಾಮಿ

ಸ್ನಾನ- ಯಾಲಕ್ಷ್ಮೀಃ ಸರ್ವಲೋಕೇಷು ಯಾ ಚ ದೇವೇಷ್ವವಸ್ಥಿತಾ।
ಧೇನುರೂಪೇಣ ಸಾದೇವೀ ಮಮಪಾಪಂ ವ್ಯಪೋಹತು॥
ಸವತ್ಸಾಯೈ ಶ್ವೇತಧೇನವೇ ನಮಃ ಸ್ನಾನಂ ಸಮರ್ಪಯಾಮಿ

ವಸ್ತ್ರ- ಆಚ್ಛಾದನಂ ಗವೇ ದದ್ಯಾಂ ಸಮ್ಯಕ್ ಶುದ್ಧಂ ಸುಶೋಭನಂ।
ಸುರಭಿರ್ವಸ್ತ್ರದಾನೇನ ಪ್ರೀಯತಾಂ ಪರಮೇಶ್ವರೀ॥
ಸವತ್ಸಾಯೈ ಶ್ವೇತಧೇನವೇ ನಮಃ ವಸ್ತ್ರಯುಗ್ಮಂ ಸಮರ್ಪಯಾಮಿ

ಭಸ್ಮ- ಅನಾದಿ ಶಾಶ್ವತಂ ಶಾಂತಂ ಚೈತನ್ಯಂ ಚಿತ್ಸರೂಪಕಂ।
ಚಿದಂಗಂ ವೃಷಭಾಕಾರಂ ಚಿದ್ಭಸ್ಮ ಲಿಂಗಧಾರಣಂ॥

ಸವತ್ಸಾಯೈ ಶ್ವೇತಧೇನವೇ ನಮಃ ಭಸ್ಮಧಾರಯಾಮಿ

ಗಂಧ- ಸರ್ವದೇವಮಯೇ ದೇವಿ ಚಂದನಂ ಚಂದ್ರಸನ್ನಿಭಂ।
ಕಸ್ತೂರಿ ಕುಂಕುಮಾಢ್ಯಂ ಚ ಸುಗಂಧಿ ಪ್ರತಿಗೃಹ್ಯತಾಂ॥

ಸವತ್ಸಾಯೈ ಶ್ವೇತಧೇನವೇ ನಮಃ ಗಂಧ, ಕಸ್ತೂರಿ, ಕುಂಕುಮಾದೀನಿ ಧಾರಯಾಮಿ.

ಅಂಗಪೂಜಾ- ಶ್ವೇತಧೇನೋ ಸವತ್ಸಾಯಾ ಧೇನೋಃ ಅಗ್ರಪಾದಾಭ್ಯಾಂ ನಮಃ, ಆಸ್ಯಾಯ ನಮಃ, ನಾಸಾವಂಶಾಯ ನಮಃ, ನೇತ್ರಾಭ್ಯಾಂ ನಮಃ, ಕರ್ಣಾಭ್ಯಾಂ ನಮಃ, ಶೃಂಗಾಭ್ಯಾಂ ನಮಃ, ಕಕುದೇ ನಮಃ, ಪೃಷ್ಠಾಯ ನಮಃ, ಪಶ್ಚಿಮ ಪಾದಾಭ್ಯಾಂ ನಮಃ, ಪುಚ್ಛಾಯ ನಮಃ, ಸರ್ವಾಂಗೇಭ್ಯೋ ನಮಃ

ಈ ಪ್ರಕಾರ ಉಚ್ಚರಿಸುತ್ತ ಆಯಾ ಅವಯವಗಳನ್ನು ಅಲಂಕರಿಸಬೇಕು ಹಾಗೂ ಪೂಜಿಸಬೇಕು.

ಕೋಡು (ಶೃಂಗ) ಗಳಿಗೆ ಬಂಗಾರ, ಪಾದ (ಖುರ) ಗಳಿಗೆ ಬೆಳ್ಳಿ, ಕಣ್ಣುಗಳಿಗೆ ಕಾಡಿಗೆ, ಕಂಠದಲ್ಲಿ ಗಂಟೆ, ಪುಷ್ಪಹಾರ; ಪೃಷ್ಠಕ್ಕೆ ತಾಮ್ರ, ಪುಚ್ಛಕ್ಕೆ ಮುತ್ತಿನ ಗೊಂಚಲು, ಸಂಪೂರ್ಣ ದೇಹಕ್ಕೆ ಪೀತಾಂಬರ, ಕುಂಕುಮ, ಕಸ್ತೂರಿ, ಶ್ರೀಗಂಧ ಹಾಗೂ ಪುಷ್ಪಹಾರಗಳಿಂದ ಅಲಂಕರಿಸಿ ಪೂಜಿಸಬೇಕು.

ಧೂಪ- ದೇವ ದ್ರುಮರಸೋದ್ಭೂತೋ ಗೋಘೃತೇನ ಸಮನ್ವಿತಃ।
ಪ್ರಯಚ್ಛಾಮಿ ಮಹಾಭಾಗೋ ಧೂಪೋಽಯಂ ಪ್ರತಿಗೃಹ್ಯತಾಂ॥

ಸವತ್ಸಾಯೈ ಶ್ವೇತಧೇನವೇ ನಮಃ, ಧೂಪ ಮಾಘ್ರಾಪಯಾಮಿ

ದೀಪ- ಆನಂದ ಕೃತ್ಸರ್ವಲೋಕೇ ದೇವಾನಾಂ ಚ ಸದಾಪ್ರಿಯಃ।
ಗೌಸ್ತ್ವನ್ಮಾದಿ ಜಗನ್ನಾಥೋ ದೀಪೋಽಯಂ ಪ್ರತಿಗೃಹ್ಯತಾಂ॥

ಸವತ್ಸಾಯೈ ಶ್ವೇತಧೇನವೇ ನಮಃ ದೀಪಂ ದರ್ಶಯಾಮಿ

ನೈವೇದ್ಯ- ಸುರಭಿಸ್ತ್ವಂ ಜಗನ್ಮಾತರ್ದೇವಿ ವಿಷ್ಣು ಪದೇಸ್ಥಿತಾ।
ಸರ್ವದೇವಮಯೇ ಗ್ರಾಸಂ ಮಯಾದತ್ತಾಮಿ ಮಂಗ್ರಸ॥
ಸೌರಭೇ ಯ್ಯಃ ಸರ್ವಹಿತಾಃ ಪವಿತ್ರಾಃ ಪುಣ್ಯರಾಶಯಃ।
ಪ್ರತಿಗೃಹ್ಣಂತ್ವಿಮಂ ಗ್ರಾಸಂಗಾವಸ್ತ್ರೈ ಲೋಕ್ಯಮಾತರಃ॥

ಸವತ್ಸಾಯೈ ಶ್ವೇತಧೇನವೇ ನಮಃ ಗೋಗ್ರಾಸ ನೈವೇದ್ಯಂ ಸಮರ್ಪಯಾಮಿ

ಅನಂತರಂ ಆಚಮನೀಯಂ ಸಮರ್ಪಯಾಮಿ, ನಂತರ ಫಲ, ತಾಂಬೂಲ, ದಕ್ಷಿಣಾದಿಗಳನ್ನು ಸಮರ್ಪಿಸಿ ನೀರಾಜನವನ್ನು ಬೆಳಗಿದ ಬಳಿಕ,

ಪ್ರದಕ್ಷಿಣ- ಗಾವೋಮಮಾಗ್ರತಃ ಸಂತುಗಾವೋಮೇ ಸಂತು ಪೃಷ್ಠತಃ।
ಗಾವೋಮೇ ಹೃದಯೇ ನಿತ್ಯಂ ಗವಾಂ ಮಧ್ಯೇ ವಸಾಮ್ಯಹಂ॥
ಸವತ್ಸಾಯೈ ಶ್ವೇತಧೇನವೇ ನಮಃ ಪ್ರದಕ್ಷಿಣಂ ಸಮರ್ಪಯಾಮಿ

ನಮಸ್ಕಾರ- ಪಂಚಗಾವಃ ಸಮುತ್ಪನ್ನಾ ಮಧ್ಯಮಾನೇ ಮಹೋದಧೌ।
ತಾಸಾಂ ಮಧ್ಯೇತುಯಾನಂ ದಾತಸ್ಯೈ ದೇವ್ಯೈ ನಮೋ ನಮಃ॥
ಸವತ್ಸಾಯೈ ಶ್ವೇತಧೇನವೇ ನಮಃ ಸಾಷ್ಟಾಂಗ ನಮಸ್ಕಾರಂ ಸಮರ್ಪಯಾಮಿ

ಪುಷ್ಪಾಂಜಲಿ- ಯಜ್ಞೇನಯಜ್ಞ ಮಯ ಜಂತ ದೇವಾಃ। ತಾನಿಧರ್ಮಾಣಿ
ಪ್ರಥಮಾನ್ಯಾಸನ್। ತೇಹನಾಕಂ ಮಹಿಮಾನಃ, ಸಚಂತ ಯತ್ರ
ಪೂರ್ವೇ ಸಾಧ್ಯಾಃ ಸಂತಿದೇವಾಃ॥
ಸವತ್ಸಾಯೈ ಶ್ವೇತಧೇನವೇ ನಮಃ ಪುಷ್ಪಾಂಜಲಿಂ ಸಮರ್ಪಯಾಮಿ

ಪ್ರಾರ್ಥನಾ- ಪೃಷ್ಠೇ ಬ್ರಹ್ಮಾಗಲೇ ವಿಷ್ಣುಃ ಮುಖೇರುದ್ರಃ ಪ್ರತಿಷ್ಠಿತಃ।
ಮಧ್ಯೇ ದೇವಗಣಾಃ ಸರ್ವೇ ರೋಮಕೂಪೇ ಮಹರ್ಷಯಃ॥
ನಾಗಾಃ ಪುಚ್ಛೇ ಖುರಾಗ್ರೇಷುಯೇ ಚಾಕ್ಟೌ ಕುಲಪರ್ವತಾಃ।
ಮೂತ್ರೇ ಗಂಗಾದಯೋ ನದ್ಯೋ ನೇತ್ರಯೋಃ ಶಶಿಭಾಸ್ಕರೌ॥
ಏತೇ ಅಸ್ಯಾ ಸ್ತನೌದೇವಾಃ ಸಾಧೇನು ರ್ವರದಾಸ್ತುಮೇ॥

ಎಂದು ಉಚ್ಚರಿಸುತ್ತ ಗೋವನ್ನು ಪ್ರಾರ್ಥಿಸಿ ಜಂಗಮ ಮೂರ್ತಿಯನ್ನು ಅಥವಾ ಬ್ರಾಹ್ಮಣನನ್ನು ಚಂದ್ರಸ್ವರೂಪನೆಂದು ಭಾವಿಸಿ ವಸ್ತ್ರ, ಪುಷ್ಪಹಾರ, ಆಭರಣ, ದಕ್ಷಿಣೆ, ತಾಂಬೂಲಗಳನ್ನು ಆತನಿಗೆ ಸಮರ್ಪಿಸಿ, ಸತ್ಕರಿಸಿ ಆಕಳ ಬಾಲವನ್ನು ಹಿಡಿದು ಮೂರು ವರಹ (ಹನ್ನೆರಡು ರೂಪಾಯಿ) ದಕ್ಷಿಣೆ ಸಹಿತವಾಗಿ ಆಕಳನ್ನು ಪೂಜ್ಯರಿಗೆ ದಾನ ಕೊಡಬೇಕು.

ದಾನ ಮಂತ್ರ- ಶ್ವೇತಗೌ ಸ್ಸರ್ವಭೂತಾನಾಂ ಪೂಜನೀಯಾ ಸರೋಹಿಣೀ।
ತೀರ್ಥದೇವ ಮಯೀಯಸ್ಮಾದತಶ್ಯಾಂತಿಂ ಪ್ರಯಚ್ಛಮೇ॥
ಅಸ್ಟ್ರೈ ಅಹಮಿಮಾಂ ಸ್ವರ್ಣ ಶೃಂಗಾದಿ ವಿಭೂಷಿತಾಂ।
ಸ್ವರ್ಚಿತಾಂ ಸವತ್ಸಾಂ ಶ್ವೇತಾಂಗಾಂ ಪೂರ್ವೋಕ್ತ ಫಲ।
ಕಾಮಯಮಾನಸ್ತುಭ್ಯಮಹಂ ಸಂಪ್ರದದೇ ನಮಮ ನಮಮ॥
ಪುಚ್ಛ ದೇಶೇ ದಾನಸಾದ್ಗುಣ್ಯಾರ್ಥಂ ಸುವರ್ಣಂ ದಕ್ಷಿಣಾಂ ದದ್ಯಾತ್॥

ಎಂದು ಪಠಿಸುತ್ತ ಇದಂ ಗೋದಾನಂ, ಸದಕ್ಷಿಣಾಕಂ, ಸತಾಂಬೂಲಂ ತುಭ್ಯಂ ಸಂಪ್ರದದೇ ನಮಮಃ ನಮಮಃ ಈ ಪ್ರಕಾರ ದಾನ ಮಾಡುವದರಿಂದ ಸಮಸ್ತಗ್ರಹಚಾರ ಪೀಡೆಗಳು ಪರಿಹಾರವಾಗುವದೆಂದು ಹೇಮಾದ್ರಿ ತಂತ್ರದಲ್ಲಿ ಶ್ವೇತಧೇನು ದಾನವು ನಿರೂಪಿತವಾಗಿದೆ.

# ಸೂರ್ಯದಶಾ ಕುಜ ಭುಕ್ತಿಯಲ್ಲಿ ಕುಜ ಪ್ರೀತಿಕರ ಅನಡ್ವಾಹ (ಎತ್ತು) ದಾನವು

ಜನನ ಲಗ್ನ ಕುಂಡಲಿಯಲ್ಲಿ ಕುಜನು 1–7–8–9–12 ಅಥವಾ ಬೇರೆ ದುಷ್ಟ ಸ್ಥಾನಗಳಲ್ಲಿದ್ದು ಕ್ರೂರನಾಗಿದ್ದರೆ ಆ ಜಾತಕನಿಗೆ ದೇಹದಲ್ಲಿ ಭಯಂಕರವಾದ ಹುಣ್ಣುಗಳ ಬಾಧೆಯು, ಮಾನಹಾನಿಯು, ಧನಹಾನಿಯು, ರಾಜಭಯವು, ಸ್ಥಾನಬಿಟ್ಟು ಹೋಗುವಿಕೆಯು, ದಾರಿದ್ರ್ಯವು, ದುಃಖವು ಇತ್ಯಾದಿ ದುಷ್ಟ ಫಲಗಳುಂಟಾಗುವವು. ಈ ಕ್ರೂರ ಫಲ ನಿವಾರಣೆಗಾಗಿ ಕುಜಗ್ರಹ ಪ್ರೀತಿಕರವಾದ ಅನಡ್ವಾಹ ದಾನವನ್ನು ಮಾಡಬೇಕು. ಅದು ಹೇಗೆಂದರೆ– ಜನ್ಮನಕ್ಷತ್ರ, ಕೃಷ್ಣಪಕ್ಷದ ಚತುರ್ಥಿ, ನವಮಿ, ಚತುರ್ದಶಿ ತಿಥಿಗಳು ಸಂಕ್ರಾಂತಿ ಮೊದಲಾದ ಪರ್ವಕಾಲ ಇವುಗಳು ಮಂಗಳವಾರ ಕೂಡಿದ ದಿವಸ ದೇವಾಲಯ ಅಥವಾ ತನ್ನ ಮನೆಯಲ್ಲಿಯ ಪವಿತ್ರ ಸ್ಥಳವನ್ನು ಗೋಮಯದಿಂದ ಸಾರಿಸಿ ರಂಗವಲ್ಲಿಯನ್ನು ರಚಿಸಿದ ಶುದ್ಧಸ್ಥಳದಲ್ಲಿ ಭದ್ರಾಸನದ ಮೇಲೆ ಪೂರ್ವ ಅಥವಾ ಉತ್ತರಾಭಿಮುಖವಾಗಿ ಕುಳಿತು ಆಚಮನ, ಪ್ರಾಣಾಯಾಮಗಳನ್ನು ಮಾಡಿ ಸಂಕಲ್ಪ ಮಾಡಬೇಕು. ದೇಶ ಕಾಲಾದಿಗಳನ್ನು ಉಚ್ಚರಿಸಿ ''ಅಸ್ಯಾಂ ಶುಭತಿಥೌ ಮಮ ದಾರಿದ್ರ್ಯ, ದುಃಖ, ಕ್ಲೇಶ ನಿವಾರಣಾರ್ಥಂ, ಸಕಲಾರಿಷ್ಟ ನಿರಸನಪೂರ್ವಕ ಆಯುರಾರೋಗ್ಯ ಸಿದ್ಧ್ಯರ್ಥಂ ಕುಜಗ್ರಹ ಪ್ರೀತಿಕರ ಅನಡ್ವಾಹ ದಾನಂ ಕರಿಷ್ಯೇ ತದಾದೌ ಶ್ರೀ ಗಣಾಧಿಪತಿ ಪೂಜಾಂ ಗುರು ಪೂಜಾಂಚ ಕರಿಷ್ಯೇ'' ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಿದ ಬಳಿಕ ಎಲ್ಲ ಅವಯವಗಳು ಸರಿಯಾಗಿ ಇರುವ 2–3 ವರ್ಷ ವಯಸ್ಸಿನ ಕೆಂಪು ಬಣ್ಣದ ಒಂದು ವೃಷಭವನ್ನು ಸ್ನಾನಮಾಡಿಸಿ ಕೊಂಬು, ಕುತ್ತಿಗೆ, ಬಾಲ, ಕಾಲುಗಳಿಗೆ ಬೆಳ್ಳಿ, ಬಂಗಾರ, ತಾಮ್ರ, ಹವಳ, ಮುತ್ತುಗಳಿಂದಲೂ; ಕೆಂಪು ಕಣಗಿಲ ಹೂಗಳಿಂದಲೂ, ಕೆಂಪುಬಣ್ಣದ ವಸ್ತ್ರಗಳಿಂದಲೂ ಅಲಂಕರಿಸಿ ಅದನ್ನು ತೊಗರಿ ಧಾನ್ಯದ ಗಂಟಿನೊಂದಿಗೆ ತಂದು ಪೂರ್ವ ದಿಕ್ಕಿಗೆ ಮುಖಮಾಡಿ ನಿಲ್ಲಿಸಿ ಯಜಮಾನನು ಕೈಮುಗಿದುಕೊಂಡು ನಿಂತು ಧ್ಯಾನ ಮಾಡಬೇಕು.

ಧ್ಯಾನ– ಅನಡ್ವಾಹ ಬಲೀವರ್ದ ರುದ್ರವಾಹನ ವೃಷಾಹ್ವಯಾ।
ಧರ್ಮ ಮೂರ್ತೇ ನಮಸ್ತುಭ್ಯಂ ಪೂಜಾಂ ಗೃಹ್ಣೀಷ್ವಪಾಹಿಮಾಂ॥

ಈ ಪ್ರಕಾರ ಪ್ರಾರ್ಥಿಸಿ ಕುಜಗ್ರಹವನ್ನು ಆವಾಹನೆ ಮಾಡಿ ಆ ವೃಷಭನನ್ನು ಪೂಜಿಸಬೇಕು.

ಪಾದ್ಯ- ವೃಷಭೋ ಧುರ್ಯ ಏವಸ್ಯಾನ್ಮಹಾದೇವ ಪ್ರಿಯಃ ಸದಾ।
ಸಂಪ್ರದಾನೇನ ಚೈವಾಸ್ಯ ಮಮ ಶಾಂತಿ ಕರೋಭವೇತ್ ॥
ಓಂ ಭೂರ್ಭುವಃ ಸ್ವಃ ವೃಷಭಾಯ ನಮಃ, ಪಾದ್ಯಂ ಸಮರ್ಪಯಾಮಿ

ಅರ್ಘ್ಯ- ಗವಾ ಮಾಂಗೇಷು ತಿಷ್ಠಂತಿ ಭುವನಾನಿ ಚತುರ್ದಶ।
ಯಸ್ಮಾತ್ತಸ್ಮಾಚ್ಛಿವಂ ಮೇಸ್ಯಾದಿಹ ಲೋಕೇ ಪರತ್ರಚ॥
ಶ್ರೀ ವೃಷಭಾಯ ನಮಃ, ಅರ್ಘ್ಯಂ ಸಮರ್ಪಯಾಮಿ

ಆಚಮನ- ಧರ್ಮಸ್ತ್ವಂ ವೃಷರೂಪೇಣ ಜಗದಾನಂದ ಕಾರಕ।
ಅಷ್ಟಮೂರ್ತೇ ರಧಿಷ್ಠಾನ ಮತಃ ಶಾಂತಿಂ ಪ್ರಯಚ್ಛಮೇ॥
ಶ್ರೀ ವೃಷಭಾಯ ನಮಃ ಆಚಮನೀಯಂ ಸಮರ್ಪಯಾಮಿ

ಸ್ನಾನ- ಗಾವಃ ಸುರಭಯೋನಿ ತ್ಯಂಗಾವೋ ಗುಗ್ಗುಲ ಸನ್ನಿಭಾಃ।
ಗಾವಃ ಪ್ರತಿಷ್ಠಾ ಭೂತಾನಾಂ ಗಾವಃ ಶರಣ ಮುತ್ತಮಂ॥
ಶ್ರೀ ವೃಷಭಾಯ ನಮಃ, ಸ್ನಾನಂ ಸಮರ್ಪಯಾಮಿ

ವಸ್ತ್ರ- ಆಚ್ಛಾದನಂ ಗವೇದದ್ಯಾಂ ಸಮ್ಯಕ್ ಶುದ್ಧಂ ಸುಶೋಭನಂ।
ವೃಷಭೋ ವಸ್ತ್ರದಾನೇನ ಪ್ರೀಯತಾಂ ಶಂಕರಪ್ರಿಯಃ॥
ಶ್ರೀ ವೃಷಭಾಯ ನಮಃ, ವಸ್ತ್ರಯುಗ್ಮಂ ಸಮರ್ಪಯಾಮಿ

ಭಸ್ಮ- ಅನಾದಿ ಶಾಶ್ವತಂ ಶಾಂತಂ ಚೈತನ್ಯಂ ಚಿತ್ಸರೂಪಕಂ।
ಚಿದಂಗಂ ವೃಷಭಾಕಾರಂ ಚಿದ್ಭಸ್ಮ ಲಿಂಗಧಾರಣಂ॥
ಶ್ರೀ ವೃಷಭಾಯ ನಮಃ, ಭಸ್ಮಧಾರಯಾಮಿ

ಗಂಧ- ಶ್ರೀಖಂಡಂ ಶೀತಲಂ ದಿವ್ಯಂ ಸರ್ವಸಂತಾಪ ಹಾರಕಂ।
ಕಸ್ತೂರೀ ಕುಂಕುಮಾಢ್ಯಂಚ ಚಂದನಂ ಪ್ರತಿಗೃಹ್ಯತಾಂ॥
ಶ್ರೀ ವೃಷಭಾಯ ನಮಃ, ಗಂಧಂ ಕಸ್ತೂರಿ, ಕುಂಕುಮಾದೀನಿ ಧಾರಯಾಮಿ

ಅಲಂಕಾರ- ಕೋಡುಗಳಿಗೆ ಬಂಗಾರ, ಪಾದಗಳಿಗೆ ಬೆಳ್ಳಿ, ಹಣೆಗೆ ಕನ್ನಡಿ, ಕಣ್ಣುಗಳಿಗೆ ಹವಳ, ಕೊರಳಿಗೆ ಗಂಟೆ ಮತ್ತು ಚಾಮರ; ಪೃಷ್ಠಕ್ಕೆ ತಾಮ್ರ, ಪುಚ್ಛಕ್ಕೆ ಮುತ್ತು ಮೈಮೇಲೆ ಪೀತಾಂಬರ ಈ ಪ್ರಕಾರ ಆಯಾ ಅವಯವಗಳಿಗೆ ಆಯಾ ಭೂಷಣಗಳಿಂದ ಶೃಂಗರಿಸಬೇಕು. ಈ ಅಲಂಕಾರಗಳು ಇರದಿದ್ದರೆ ಬಂಗಾರವನ್ನಾದರೂ ತನ್ನ ಶಕ್ತ್ಯಾನುಸಾರ ಧರಿಸಬೇಕು.

ಪುಷ್ಪ- ಮಾಲತೀ ಚಂಪಕಾದೀನಿ ಮಾಲ್ಯಾನಿ ವೃಷಭೇಶ್ವರ।
ಮಯಾಹೃತಾನಿ ಪೂಜಾರ್ಥ ಮಂಗೀಕುರು ನಮೋಸ್ತುತೇ॥
ಶ್ರೀ ವೃಷಭಾಯ ನಮಃ, ನಾನಾವಿಧ ಪುಷ್ಪಾಣಿ ಧಾರಯಾಮಿ

ಧೂಪ- ದೇವದ್ರುಮ ರಸೋದ್ಭೂತಂ ಗೋಘೃತೇನ ಸಮನ್ವಿತಂ।
ಭಕ್ತ್ಯಾ ಸಮರ್ಪಯೇತುಭ್ಯಂ ಧೂಪಂ ವೃಷಭಸತ್ತಮ॥
ಶ್ರೀ ವೃಷಭಾಯ ನಮಃ, ಧೂಪಮಾಘ್ರಾಪಯಾಮಿ

ದೀಪ- ಆನಂದಕೃತ್ ಸರ್ವಲೋಕೇ ದೇವಾನಾಂ ಚ ಸದಾಪ್ರಿಯಃ।
ಸರ್ವಾಂಧಕಾರ ನಾಶಾಯ ದೀಪೋಽಯಂ ಪ್ರತಿಗೃಹ್ಯತಾಂ॥
ಶ್ರೀ ವೃಷಭಾಯ ನಮಃ ದೀಪಂ ದರ್ಶಯಾಮಿ

ಘಂಟಾನಾದ- ಆಗಮಾರ್ಥಂತು ದೇವಾನಾಂ ಗಮನಾರ್ಥಂತು ರಕ್ಷಸಾಂ।
ಕುರ್ವೇ ಘಂಟಾರವಂ ಭಕ್ತ್ಯಾದೇವತಾಹ್ವಾನ ಲಾಂಛನಂ॥
ಶ್ರೀ ವೃಷಭಾಯ ನಮಃ ಘಂಟಾನಾದಂ ಶ್ರಾವಯಾಮಿ

ನೈವೇದ್ಯ- ಆಹರೇಣಾಖಿಲಾ ಲೋಕ ಜೀವಂತಿ ಪ್ರಭವಂತಿ ಚ।
ಅತಃ ಸಮರ್ಪಯೇ ತುಭ್ಯ ಮಾಹಾರಂ ವೃಷಸತ್ತಮ॥

ಶ್ರೀ ವೃಷಭಾಯ ನಮಃ ನೈವೇದ್ಯಂ ಸಮರ್ಪಯಾಮಿ. ಅನಂತರ ಆಚಮನೀಯಂ ಸಮರ್ಪಯಾಮಿ. ನಂತರ ಫಲ, ತಾಂಬೂಲ, ದಕ್ಷಿಣಾದಿಗಳನ್ನು ಸಮರ್ಪಿಸಿ ನೀರಾಜನವನ್ನು ಬೆಳಗಿದ ಬಳಿಕ,

ಪ್ರದಕ್ಷಿಣಾ- ಮಂಗಳೋ ಭೂಮಿಪುತ್ರಶ್ಚ ರುಣಹರ್ತಾ ಧನಪ್ರದಃ।
ಸ್ಥಿರಾಸನೋ ಮಹಾಕಾಯ ಸ್ಸರ್ವಕರ್ಮಾ ವರೋಧಕಃ॥
ಧರ್ಮಾತ್ಮಜಃ ಕುಜೋ ಭೌಮೋ ಭೂತಿದೋ ಭೂಮಿನಂದನಃ।

ನಮಸ್ಕಾರ- ಅಂಗಾರಕೋ ಯಮಶ್ಚೈವ ಸರ್ವರೋಗಾಪಹಾರಕಃ।
ವೃಷ್ಟಿಕರ್ತಾ ವೃಷ್ಟಿಹರ್ತಾ ಸರ್ವಕಾಮ ಫಲಪ್ರದಃ॥
ವೃಷೋಸಿ ಭಗವನ್ ಧರ್ಮಶ್ಚತುಷ್ಪಾದಃ ಪ್ರಕೀರ್ತಿತಃ।
ನಮಾಮಿ ತಮಹಂ ಭಕ್ತ್ಯಾಸಮಾಂ ರಕ್ಷತು ಸರ್ವತಃ॥
ಶ್ರೀ ವೃಷಭಾಯ ನಮಃ 'ಪ್ರದಕ್ಷಿಣ, ನಮಸ್ಕಾರಾನ್ ಸಮರ್ಪಯಾಮಿ

ಮಂತ್ರ ಪುಷ್ಪ- ವರ್ಷಣಾ ದ್ಧರ್ಮಕಾ ಮಾನಾಂ ವೃಷೋ ಲೋಕೇನುಗೀಯತೇ।
ತಸ್ಮಾತ್ ಪೂರಯ ಮೇಕಾಮಾಂ ಧರ್ಮಾತ್ಮ ವೃಷಸತ್ತಮ॥
ಭೂಮಿಪುತ್ರ ಮಹಾಕಾಯ ಸ್ವೇದೋದ್ಭವ ಪಿನಾಕಿನಾ।
ಶ್ರೇಯೋರ್ಥಿತ್ವಾತ್ವತ್ಪ್ರಪನ್ನೋಽಸ್ಮಿ ಗೃಹಾಣಾರ್ಘ್ಯಂ ನಮೋಸ್ತುತೇ॥
ಶ್ರೀ ವೃಷಭಾಯ ನಮಃ, ಮಂತ್ರ ಪುಷ್ಪಂ ಸಮರ್ಪಯಾಮಿ

ಮಂತ್ರ- ಅನಡ್ವಾಹ ಕ್ಷಮೇದತ್ರ ಕೃಷ್ಯಾದೀನಾಂ ಕೃತಶ್ರಮಂ।

ಶಿವವಾಹ ಪಶುಶ್ರೇಷ್ಠ ಭಾರವಾಹಿನ್ ನಮೋಸ್ತುತೇ ||
ಖಲಪುಷ್ಟಿಮಹಾಸತ್ವರೋಗಾದಿ ಭಯಸಂಚಯ |
ಕೃಷ್ಯಾದಿ ಸರ್ವಕಾರ್ಯೇಷು ಶಕ್ತಸ್ತ್ವಂಕ್ಷಂತು ಮರ್ಹಸಿ ||

ಈ ಪ್ರಕಾರ ಸ್ತೋತ್ರ ಮಾಡಿದ ನಂತರ ಓರ್ವ ಜಂಗಮ ಮೂರ್ತಿ ಅಥವಾ ಬ್ರಾಹ್ಮಣನನ್ನು ಭದ್ರಾಸನದಲ್ಲಿ ಕೂಡ್ರಿಸಿ ಆತನನ್ನು ಗಂಧ, ಅಕ್ಷತೆ, ಕೆಂಪು ಹೂವು, ಕೆಂಪು ಬಣ್ಣದ ವಸ್ತ್ರಗಳಿಂದ ಅಲಂಕರಿಸಿ, ಪೂಜಿಸಿ ಆ ವೃಷಭವನ್ನು ಆತನಿಗೆ ದಕ್ಷಿಣೆ ಸಹಿತವಾಗಿ ದಾನ ಮಾಡಬೇಕು.

ಮಂತ್ರ- ಧರ್ಮಸ್ತ್ವಂ ವೃಕ್ಷರೂಪೇಣ, ಜಗದಾನಂದ ಕಾರಕ |
ಅಷ್ಟಮೂರ್ತೇ ರಧಿಷ್ಠಾನಾ ದತಃ ಪಾಹಿ ಸನಾತನ |
ತುವರೀ ಭಾರ ಸಂಯುಕ್ತ ಮನಡ್ವಾಹಂ ಮಹಾಬಲಂ |
ದದಾ ಮ್ಯಾಯುಷ್ಯ ವೃದ್ಧ್ಯರ್ಥಂ ಭೌಮಪೀಡಾ ಪನುತ್ತನುತ್ತಯೇ ||

ಈ ಪ್ರಕಾರ ಉಚ್ಚರಿಸುತ್ತ 3 ವರಹ (12 ರೂಪಾಯಿ) ದಕ್ಷಿಣೆ ಸಹಿತ ಎತ್ತನ್ನು ದಾನ ಕೊಡಬೇಕು. ದಾನ ಮಾಡಿದ ಬಳಿಕ 6 ತಿಂಗಳವರೆಗೆ ದಾನ ತೆಗೆದುಕೊಂಡವರ ಮುಖವನ್ನು ನೋಡಕೂಡದು. ಬಳಿಕ ಸೂರ್ಯ ದೇವನನ್ನು ನಿರೀಕ್ಷಿಸಿ 'ಶಾಂತಿಸೂಕ್ತ' ವನ್ನು ಪಠಿಸಬೇಕು (ಶಾಂತಿ ಸೂಕ್ತವು ನಮ್ಮ "ಶಾಂತಿ ಪ್ರಯೋಗ ರತ್ನಂ" ಗ್ರಂಥದಲ್ಲಿ ಇದೆ ತರಿಸಿ ನೋಡಿರಿ). ಈ ಪ್ರಕಾರ ಅನಡ್ವಾಹ ದಾನ ಮಾಡುವದರಿಂದ ಸರ್ವ ದೋಷಗಳು ನಿವಾರಣೆಯಾಗಿ, ಸರ್ವಕ್ಷೋಭೆಗಳು ದೂರಾಗಿ ಪುತ್ರ, ಪೌತ್ರರಿಂದ ಕೂಡಿಕೊಂಡು ಸುಖ ಜೀವಿಯಾಗುವನು. ಈ ರೀತಿಯಾಗಿ ಯಾಮಳ ತಂತ್ರದಲ್ಲಿ ಅನಡ್ವಾಹ ದಾನ ವಿಧಾನವು ಹೇಳಲ್ಪಟ್ಟಿದೆ.



## ಸೂರ್ಯದಶಾ ರಾಹುಭುಕ್ತಿಯಲ್ಲಿ ರಾಹುಪ್ರೀತಿಕರ ಮಹಿಷಿ ದಾನವು

ಜನನ ಕುಂಡಲಿಯಲ್ಲಿ ರಾಹು ಜನ್ಮ, ಅಷ್ಟಮ, ದ್ವಾದಶ ಸ್ಥಾನಗಳಲ್ಲಿ ಕ್ರೂರನಾಗಿದ್ದರೆ ಅಪಮೃತ್ಯು ಭಯವು, ಕ್ಷಯರೋಗಾದಿ ಅಸಾಧ್ಯ ರೋಗಬಾಧೆಯು, ರಾಜಭಯ, ಉತ್ಪಾತಭಯ, ಗುಲ್ಮ ಭಯಗಳುಂಟಾಗುವವು. ಇವುಗಳ ನಿವಾರಣೆಗಾಗಿ ಯಮದೇವನ ಪ್ರೀತ್ಯರ್ಥವಾಗಿ ಎಮ್ಮೆಯನ್ನು ದಾನ ಮಾಡಬೇಕು.

ಸಂಕ್ರಮಣಾದಿ ಪರ್ವಕಾಲಗಳಲ್ಲಿ, ಯಜಮಾನನ ಜನ್ಮ ನಕ್ಷತ್ರಗಳಲ್ಲಿ ಕರು ಸಹಿತವಾಗಿರುವ ಕರೇ ಎಮ್ಮೆಯನ್ನು ಸ್ನಾನ ಮಾಡಿಸಿ ಮೈಗೆಲ್ಲ ಎಣ್ಣೆಯನ್ನು ಹಚ್ಚಿ ಎಮ್ಮೆಗೆ

ಕೆಂಪು ಬಟ್ಟೆಯನ್ನು ಹೊದಿಸಿ ಶುದ್ಧಪ್ರದೇಶದಲ್ಲಿ ದರ್ಭೆಗಳನ್ನು ಹರವಿ ಅವುಗಳ ಮೇಲೆ ದಕ್ಷಿಣಾಭಿಮುಖವಾಗಿ ಎಮ್ಮೆಯನ್ನು ನಿಲ್ಲಿಸಿ ದರ್ಭೆಗಳ ಮೇಲೆ ಕರೇ ಎಳ್ಳಿನ ಪುಡಿಯ ರಾಶಿಯನ್ನು ಹಾಕಿ ಎಮ್ಮೆಯ ಬಾಲಕ್ಕೆ ಗಂಟೆಯನ್ನು ಕಟ್ಟಿ ಕೊಂಬು, ಕುತ್ತಿಗೆ, ಕಾಲು, ಹಣೆ, ಪುಚ್ಛ, ಬಾಲಗಳಿಗೆ ಬೆಳ್ಳಿ, ಬಂಗಾರ, ಕುಂಕುಮ, ಕೆಂಪುಗಂಧ, ಕೆಂಪು ಕಣಗಿಲ ಹೂಗಳಿಂದ ಅಲಂಕಾರ ಮಾಡಬೇಕು. ಬಳಿಕ ಯಜಮಾನನು ಶುದ್ಧಪ್ರದೇಶದಲ್ಲಿ ಭದ್ರಾಸನದಲ್ಲಿ ಕುಳಿತುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ ''ಅಸ್ಯಾಂ ಶುಭತಿಥೌ ಮಮಸರ್ವಾರಿಷ್ಟ ನಿವಾರಣಾರ್ಥಂ ಅಪಮೃತ್ಯು ಅಸಾಧ್ಯರೋಗ, ಪರಿಹಾರಾರ್ಥಂ, ರಿಪು, ರಾಜಭಯ ವಿಮೋಚನಾರ್ಥಂ, ದೃಢಕಾಯ, ದೃಢೇಂದ್ರಿಯ, ಪುತ್ರ ಪೌತ್ರೈಃಪರಿವೃತಃ ಭುಕ್ತಾಭೋಗ ಪರಂಪರಾಂ ಪ್ರಾಪ್ತ್ಯರ್ಥಂ ರವಿದಶಾ ರಾಹು ಭುಕ್ತೌ ಯಮದೇವ ಪ್ರೀತಿಕರ ಮಹಿಷೀ ದಾನಂ ಕರಿಷ್ಯೇ ತದಾದೌ ಗಣಪತಿ ಪೂಜಾಂ ಗುರು ಪೂಜಾಂಚಕರಿಷ್ಯೇ'' ಎಂದು ಸಂಕಲ್ಪವನ್ನು ಮಾಡಿ ಗಣಪತಿಯನ್ನು ಪೂಜಿಸಿ ದಕ್ಷಿಣ ದಿಕ್ಕಿಗೆ ಮುಖ ಮಾಡಿ ನಿಂತ ಆ ಎಮ್ಮೆಯಲ್ಲಿ ಮೃತ್ಯು ದೇವತೆಯನ್ನು ಆವಾಹನೆ ಮಾಡಿ ಎಮ್ಮೆಯ ಸುತ್ತಲೂ ಎಂಟು ದಿಕ್ಕುಗಳಲ್ಲಿ ಎಂಟು ದೀಪಗಳನ್ನು ಇಟ್ಟು ಮತ್ತು ಪೂರ್ವ ದಿಕ್ಕಿನಲ್ಲಿ ಉಪ್ಪು, ಆಗ್ನೇಯಕ್ಕೆ ಬೆಲ್ಲ, ದಕ್ಷಿಣದಲ್ಲಿ ಹತ್ತಿ ನೈರುತ್ಯದಲ್ಲಿ ಬೆಣ್ಣೆ, ಪಶ್ಚಿಮದಲ್ಲಿ 7 ಪ್ರಕಾರದ ಧಾನ್ಯಗಳು, ವಾಯುವ್ಯದಲ್ಲಿ ಅಕ್ಕಿ, ಉತ್ತರದಲ್ಲಿ ಬಂಗಾರ, ಈಶಾನ್ಯದಲ್ಲಿ ಹೋಗುವ ದ್ವಾರ ಎಂದು ತಿಳಿದು ಏನನ್ನೂ ಇಡಕೂಡದು. ಈ ಪ್ರಕಾರ ಏಳು ದಿಕ್ಕುಗಳಲ್ಲಿ ಆಯಾ ವಸ್ತುಗಳನ್ನು ಇಟ್ಟು.

ಧ್ಯಾನ- ಮಹಿಷಾರೂಢಂ ನೃಕಪಾಲಹಸ್ತಂ ದಂಡಾಯುಧಂ ಭಸ್ಮಸಿತಾಂಗ ಯಷ್ಟಿಂ।
ಉಲೂಕ ಚಿಹ್ನಂ ನರಮುಂಡಮಾಲಂ ನಿರ್ಮಾಂಸ ದೇಹಂ ರುಧಿರಂ ಪಿಬಂತಂ॥
ಅಸೃಗ್ವಸಾಚರ್ಚಿತ ಕೃಷ್ಣ ಕಾಯಂಕಪೀಂದ್ರಪಂಚಾನನ ಚರ್ಮವಸ್ತ್ರಂ।
ಬಿಬೀತಕಸ್ಥಿತ್ವಿತಭೀಮರೂಪಂ ಕಾಲಂತವಾಂಗೇ ವಿನಿಯೋಜಯಿಷ್ಯೇ॥

ಮಹಾಕಾಲತ್ವ ಮೃಷಿರಸಿ ಪ್ರಾಣೋತ್ಕ್ರಾಂತಿ ಶಕ್ತಿಮಾನ ಸಿಅತಸ್ತ್ವಾಂ ಪ್ರತಾಪಿನಂ ಬಹುಮಾನಯೇ ಏವಂ ಭೂತಸ್ತ್ವ ಮಿಹಾಗಚ್ಛೇಹ ತಿಷ್ಠಪೂಜಾಂ ಗೃಹಾಣ ಸುಪ್ರಸನ್ನೋ ವರದೋಮಮಾಪದ್ವಿನಾಶಕೋಭವೇತಿ ಬ್ರಾಹ್ಮಣ (ಜಂಗಮಮೂರ್ತಿ) ಶರೀರಕೀ ಯಮದೇವಂ ಭಾವಯಿತ್ವಾ

ಭೋಭೋ ಕಾಲಜಗದ್ಭೂತ ಯಮಮಹಿಷವಾಹನ।
ದಿನೇಶ ಪ್ರಾಣ ರಾಜೇಂದ್ರ ದಂಡಹಸ್ತ ಧನುರ್ಧರ॥
ಬ್ರಹ್ಮಾಚ್ಯುತ ಮಹೇಶಾನಾಂ ಸೇನಾಧೀಶ್ವರ ವಲ್ಲಭ।

ಯಜ್ಞಭುಗ್ದಕ್ಷಿಣೇಯಸ್ತ್ವಂ ಸರ್ವಭೋಗ ಸುಖಾವಹ ॥
ಗೃಹ್ಣೀಷ್ವಮಹಿಷೀದಾನಂ ಜೀವಿತಾಯ ಮಮಪ್ರಭೋ ।
ಪಂಚಭೂತಾತ್ಮಕೇದೇಹೇ ಸಪ್ತಧಾತು ಸಮನ್ವಿತೇ ॥
ವಿಪ್ರಸ್ಯಾಗತ್ಯತಿಷ್ಠೇ ಹಸಮ್ಮುಖೋಭವ ಮೇಸದಾ ॥

ಎಂದು ಪ್ರಾರ್ಥಿಸಿ,

'ಯಮಾಯಸೋಮ' ಮಂತ್ರದಿಂದ ಆಸನವನ್ನೂ, ಇದೇ ಮಂತ್ರದಿಂದ ಪಾದ್ಯವನ್ನೂ 'ಸುಗನ್ನಃ ಪಂಥಾ' ಈ ಮಂತ್ರದಿಂದ ಅರ್ಘ್ಯವನ್ನೂ, ಯಮಾಯಮಧುಮತ್ತಂ' ಈ ಮಂತ್ರದಿಂದ ಆಚಮನವನ್ನೂ ಸಮರ್ಪಿಸಿ,

ಸ್ನಾನ- ಯಸ್ಮಾತ್ತ್ವಂ ಸರ್ವಧರ್ಮಾಣಾಂ ಮಂಗಲಾನಾಂ ಚಮಂಗಲಂ ।
ಮಹಾಕಾಲಜಗದ್ಭೂತ ಧರ್ಮರಾಜ ನಮೋಸ್ತುತೇ ॥
ಓಂ ಮೃತ್ಯುದೇವಾ ನಮಃ ಸ್ನಾನಂ ಸಮರ್ಪಯಾಮಿ

ವಸ್ತ್ರ ಕಾಮರೂಪಕರಾ ಲಾಸ್ಯ ಕೃತಾಂತ ಕರುಣಾನಿಧೇ ।
ಪ್ರೇತರಾಜ ಶಿರೋರತ್ನ ಸುಖಂ ದೇಹಿ ನಮೋಸ್ತುತೇ ॥
ಓಂ ಮೃತ್ಯುದೇವಾಯ ನಮಃ ವಸ್ತ್ರಯುಗ್ಮಂ ಸಮರ್ಪಯಾಮಿ

ಯಜ್ಞೋಪವೀತ- ದೇವದಾನವ ಗಂಧರ್ವದಕ್ಷಿಣಃ ಸರಿತಾಂಪತೇ ।
ಸೂರ್ಯಾದಿ ಖೇಚರಾಣಾಂಚ ಜೀವಿತೇಶ ನಮೋಸ್ತುತೇ ॥
ಓಂ ಮೃತ್ಯುದೇವಾಯ ನಮಃ ಯಜ್ಞೋಪವೀತಂ ಸಮರ್ಪಯಾಮಿ ತದ ಭಾವೇ ಪುಷ್ಪಂ ಸಮರ್ಪಯಾಮಿ

ಭಸ್ಮ- ಅನಾದಿ ಶಾಶ್ವತಂ ಶಾಂತಂ ಚೈತನ್ಯಂಚಿತ್ಸರೂಪಕಂ ।
ಚಿದಂಗಂ ವೃಷಭಾಕಾರಂ ಚಿದ್ಭಸ್ಮ ಲಿಂಗಧಾರಣಂ ॥
ಓಂ ಮೃತ್ಯುದೇವಾಯ ನಮಃ ಭಸ್ಮಧಾರಯಾಮಿ.

ಗಂಧ- ಕಾಲರೂಪ ಕರಾಲಾಸ್ಯ ಮಹಾದಂಷ್ಟ್ರ ಸುರಪ್ರಿಯ ।
ಶಬಲಾಸ್ಯಾಶಮಯಿ[illegible]ೇಂದ್ರ [illegible]ವಿತೇಶ ನಮೋಸ್ತುತೇ ॥
ಓಂ ಮೃತ್ಯುದೇವಾಯ ನಮಃ ಗಂಧಂ ಧಾರಯಾಮಿ

ರಕ್ತ ಗಂಧ- ಕೃತಾಂತ ಧರ್ಮರಾಜೇಂದ್ರ ಮೃತ್ಯೋಂತಕವಿ ಮರ್ದನ ।
ಪ್ರಲಯಾಗ್ನಿ ಸಮಾಭಾಸ ದಕ್ಷಿಣೇಶ ನಮೋಸ್ತುತೇ ॥
ಓಂ ಮೃತ್ಯುದೇವಾಯ ನಮಃ ರಕ್ತ ಗಂಧಂ ಧಾರಯಾಮಿ

ಪುಷ್ಪ- ಧರ್ಮರಾಜಕರಾಲಾಸ್ಯ ಪುಣ್ಯ ಪಾಪವಿಮರ್ದನ ।
ಯಾಮ್ಯೇಶ ಮಹಿಷಾರೂಢ ಪ್ರಜಂಚ ಪ್ರತಿಗೃಹ್ಯತಾಂ ॥

ಓಂ ಮೃತ್ಯುದೇವಾಯ ನಮಃ ನಾನಾವಿಧ ಪುಷ್ಪಾಣಿಧಾರಯಾಮಿ

ಧೂಪ- ವಿದ್ಯುತ್ಕ ಪಿಶ ಕೇಶಾಗ್ರ ಕೋಟಕಿಲಾಂಜನ ಸನ್ನಿಭ।
ದಕ್ಷಿಣೇತ ಸುರಶ್ರೇಷ್ಠ ಧೂಪೋಯಂ ಪ್ರತಿಗೃಹ್ಯತಾಂ॥

ಓಂ ಮೃತ್ಯುದೇವಾಯ ನಮಃ ಧೂಪ ಮಾ ಘ್ರಾಪಯಾಮಿ

ದೀಪ- ತಪ್ತಹಾಟಕ ಕೇಶಾಗ್ರ ಜಟಿಲಾರಕ್ತ ಲೋಚನ।
ನಂದ್ಯಾವರ್ತಕವದ್ವರ್ಣ ಶ್ರಾದ್ಧದೇವ ನಮೋಸ್ತುತೇ॥

ಓಂ ಮೃತ್ಯುದೇವಾಯ ನಮಃ ದೀಪಂ ದರ್ಶಯಾಮಿ

ನೈವೇದ್ಯ- ಮಹಾಕಾಲ ಮಹಾವಾಹೋ ಜಗತ್ಪ್ರಾಣ ವಿನಾಶನ।
ಧರ್ಮಾಲಯ ತಪೋರಾಶೇ ನೈವೇದ್ಯಂ ಪ್ರತಿಗೃಹ್ಯತಾಂ॥

ಓಂ ಮೃತ್ಯುದೇವಾಯ ನಮಃ ಕೃಸರಾನ್ನ ನೈವೇದ್ಯಂ ಸಮರ್ಪಯಾಮಿ

ಆಚ್ಛಾದನ- ವಿಪ್ರವರ್ಯ ಜಗದ್ದಷ್ಟ ಕಾಲಾಂತಕ ಶರೀರಗ।
ಕಾಲರೂಪ ಮಹಾದೇವ ಧರ್ಮರಾಜ ನಮೋಸ್ತುತೇ॥

ಓಂ ಮೃತ್ಯುದೇವಾಯ ನಮಃ ಆಚ್ಛಾದನಂ ಕರೋಮಿ

ನಂತರ ಆಚಮನಂ ಸಮರ್ಪಯಾಮಿ, ತದನಂತರ ತಾಂಬೂಲ, ದಕ್ಷಿಣೆಗಳನ್ನು ಸಮರ್ಪಿಸಿ ನೀರಾಜನವನ್ನು ಬೆಳಗಿದ ನಂತರ,

ಪ್ರದಕ್ಷಿಣ- ಶಶ್ವದೇತಿ ತ್ವಯಾಜ್ಞಪ್ತೋಧಾತಾ ದೇವತ್ವ ದಾಜ್ಞಯಾ।
ಬ್ರಹ್ಮಾಚ್ಯುತ ಮಹೇಶೇಂದ್ರೈಃ ಸ್ಥೀಯತೇಚತವಾಜ್ಞಯಾ॥

ಓಂ ಮೃತ್ಯುದೇವಾಯ ನಮಃ ಪ್ರದಕ್ಷಿಣಂ ಸಮರ್ಪಯಾಮಿ

ನಮಸ್ಕಾರ- ದಿಗಂತರ ಮಹಾರಾಜ ಸರ್ವಭೂತ ಕ್ಷಯಾಂತಕ।
ಶವಾರೂಢ ಶವಾಧೀಶ ಮಾಂಸಶೋಣಿತಭಕ್ಷಕ॥
ದಂಡಹಸ್ತಪರಂಮೃತ್ಯೋ ಧರ್ಮರಾಜ ನಮೋಸ್ತುತೇ॥

ಓಂ ಮೃತ್ಯುದೇವಾಯ ನಮಃ ನಮಸ್ಕಾರಂ ಸಮರ್ಪಯಾಮಿ

ಪ್ರಾರ್ಥನಾ- ಆದಿವ್ಯಾಧಿ ಮಹಾಮೃತ್ಯು ಮಹಾಭಯಯತಂತುಮಾಂ।
ತ್ರಾಹಿದೇಹಿ ಸುಖಾರೋಗ್ಯಂಮೃತ್ಯೋತ್ವನ್ಮೂರ್ತಿ ಪೂಜಯಾ॥

ಈ ಪ್ರಕಾರ ಪ್ರಾರ್ಥಿಸಿ ಮಂತ್ರಪುಷ್ಪಗಳನ್ನು ಸಮರ್ಪಿಸಿ ಸದಾಚಾರಿಯೂ, ಸುಶೀಲನೂ, ಪೂಜ್ಯನೂ ಆದ ಓರ್ವ ಮಾಹೇಶ್ವರ ಅಥವಾ ಬ್ರಾಹ್ಮಣನನ್ನು ಉತ್ತರಕ್ಕೆ ಮುಖಮಾಡಿ ಕೂಡ್ರಿಸಿ ನೀಲಿ ಗಂಧ, ನೀಲಿ ಅಕ್ಷತೆ, ನೀಲಿ ಪುಷ್ಪ, ನೀಲಿ ಬಣ್ಣದ ವಸ್ತ್ರಗಳಿಂದ ಪೂಜಿಸಿ ಯಜಮಾನನು ಪೂರ್ವದಿಕ್ಕಿಗೆ ಮುಖ ಮಾಡಿ ನಿಂತುಕೊಂಡು

ಯಥಾ ಶಕ್ತಿ ದಕ್ಷಿಣೆ ಸಹಿತ (ಒಂದುನೂರಾ ಒಂದು ನಾಣ್ಯಗಳು) ದಾನ ಮಾಡಬೇಕು. ಅದು ಹೇಗೆಂದರೆ- ಯಜಮಾನನು ಕೈಯಲ್ಲಿ ದರ್ಭೆ, ಅಕ್ಷತೆ, ಪುಷ್ಪಗಳನ್ನು ಹಿಡಿದುಕೊಂಡು ಎಮ್ಮೆಯ ಬಾಲವನ್ನು ಹಿಡಿದು ಕೆಳಗಿನ ಮಂತ್ರವನ್ನು ಪಠಿಸುತ್ತ ದಾನಕೊಟ್ಟು ಆಶೀರ್ವಾದ ಪಡೆಯಬೇಕು.

ಮಂತ್ರ- ಇಂದ್ರಾದಿ ಲೋಕಪಾಲಾನಾಂ ಯಾರಾಜ ಮಹಿಷೀ ಶುಭಾ।
ಮಹಿಷೀ ದಾನ ಮಾಹಾತ್ಮ್ಯಾತ್ಸಾಸ್ತುಮೇ ಸರ್ವ ಕಾಮದಾ॥
ಧರ್ಮರಾಜಸ್ಯ ಸಾಹಾಹ್ಯಂ ಯಸ್ಯಾಃ ಪುತ್ರ ಪ್ರತಿಷ್ಠಿತಃ।
ಮಹಿಷಾಸುರಸ್ಯ ಜನನಂ ಯಾಸಾಸ್ತು ವರದಾ ಮಮ॥
ಕಾಲಮೃತ್ಯು ಸ್ವರೂಪಾಂತಾಂ ಮಹಿಷೀಂ ರಕ್ತ ಭೂಷಣಾಂ।
ಮೃತ್ಯು ಭೀತ್ಯಾಪ್ರಯಚ್ಛಾಮಿ ಹ್ಯತಶ್ಯಾಂತಿಂ ಪ್ರಯಚ್ಛಮೇ॥
ದಾನಂದತ್ವಾತು ವಿಪ್ರಾಯ ಮಹಿಷೀಂ ಮೃತ್ಯುರೂಪಿಣೀಂ।
ಶತನಿಷ್ಕಂ ತದರ್ಧಂ ವಾ ತದರ್ಧಂ ವಾಪಿಶಕ್ತಿತಃ।
ದದ್ಯಾದ್ದಾನ ಪ್ರತಿಷ್ಠಾರ್ಥಂ ದಕ್ಷಿಣಾಂ ಪ್ರೀತಿ ಮಾನಸಃ।
ತತಃ ಪ್ರತಿ ಗೃಹೀತ್ವಾಚ ದೇವಸ್ಯೇತ್ಯಾದಿ ಸಂಪದನ್।
ದಾತಾಮೃತ್ಯುಶ್ಚ ದೇಯಂಚ ಮೃತ್ಯುಮೃತ್ಯುರಹಂ ಪುನಃ।
ದಾತುರ್ಮೃತ್ಯುರ್ವಿನಾಶಾಯ ಮೃತ್ಯುಂ ಗೃಹ್ಣಾಮ್ಯ ಸಂಶಯಃ॥

ಹೀಗೆ ಎಮ್ಮೆಯನ್ನು ದಾನಕೊಟ್ಟು ಕಳಿಸಿದ ನಂತರ ದಾನ ತೆಗೆದುಕೊಂಡವರ ಮುಖವನ್ನು ನೋಡದೆ ಶುದ್ಧನಾಗಬೇಕು ಮತ್ತು ಆತನ ಮುಖವನ್ನು 1 ವರ್ಷದವರೆಗೆ ನೋಡಕೂಡದು. ಅದು ಹೇಗೆಂದರೆ- ಯಜಮಾನನು ಪುನಃ ಸ್ನಾನ ಮಾಡಿಕೊಂಡು ತನ್ನ ಇಷ್ಟದೇವತಾ ಪೂಜೆಯನ್ನು ಮಾಡಿ ಪರಿಶುದ್ಧ ಪ್ರದೇಶದಲ್ಲಿ ಕುಳಿತು ಆಚಮನ, ಪ್ರಾಣಾಯಾಮಗಳನ್ನು ಮಾಡಿ ಸಂಕಲ್ಪದೊಂದಿಗೆ ಗಣಪತಿ ಪೂಜಾ, ಸ್ವಸ್ತಿವಾಚನಗಳನ್ನು ಮಾಡಿಸಿ ಪೂಜ್ಯರಿಗೆ ವಸ್ತ್ರ, ದಕ್ಷಿಣೆಗಳನ್ನು ತನ್ನ ಶಕ್ತ್ಯಾನುಸಾರ ದಾನ ಕೊಟ್ಟು ಅವರನ್ನು ತೃಪ್ತಿಪಡಿಸಬೇಕು. ಇದರಿಂದ ಅಪಮೃತ್ಯು ಭಯ, ವಿಷಭಯ, ವ್ಯಾಧಿಯ ತಂತ್ರ ಭಯಗಳು ದೂರಾಗಿ ಮಹಾಮೃತ್ಯು ಭಯವು ಪರಿಹಾರವಾಗುವದು ಮತ್ತು ಅವನು ದೃಢಕಾಯನಾಗಿ ಪುತ್ರ, ಪೌತ್ರರೊಡನೆ ಸುಖಭೋಗಿಯಾಗುವನು. ಈ ಪ್ರಕಾರ ಯಾಮಳ ತಂತ್ರದಲ್ಲಿ ಉಲ್ಲೇಖಿಸಲ್ಪಟ್ಟಿದೆ.



# ಸೂರ್ಯದಶಾ ಗುರು ಭುಕ್ತಿಯಲ್ಲಿ ಗುರು ಪ್ರೀತಿಕರ ಸುವರ್ಣ ದಾನವು

ಜನನ ಕುಂಡಲಿಯಲ್ಲಿ ಗುರು ಬಲಹೀನನಾಗಿ ಜನ್ಮರಾಶಿಯಲ್ಲಿದ್ದರೆ ರೋಗ ಭಯವು. ತೃತೀಯದಲ್ಲಿದ್ದರೆ ಮಾನಹಾನಿಯು, ಭಯವು. ಚತುರ್ಥದಲ್ಲಿದ್ದರೆ ಬಂಧುಗಳಿಗೆ ಪೀಡೆಯು, ಕಲಹವು. ಅಷ್ಟಮದಲ್ಲಿದ್ದರೆ ಸ್ಥಾನಬಿಟ್ಟು ತಿರುಗಾಡುವಿಕೆಯು. ಮನೋವ್ಯಥೆಯು, ರಾಜ್ಯ ಹಾನಿಯು, ಪಶುಹಾನಿಯು. ದಶಮದಲ್ಲಿದ್ದರೆ ಧನಹಾನಿಯು, ದ್ವಾದಶದಲ್ಲಿದ್ದರೆ ಸರ್ವ ಹಾನಿಯು, ಪೀಡೆಯು ಇತ್ಯಾದಿ ದುಷ್ಟಫಲಗಳುಂಟಾಗುವವು.

ಗುರುವಾರ ದಿವಸ ಅಥವಾ ಯಾವದಾದರೊಂದು ಪರ್ವಕಾಲದಲ್ಲಿ ಗೋಮಯದಿಂದ ಸಾರಿಸಿ ಶುದ್ಧಗೊಳಿಸಲ್ಪಟ್ಟ ಭೂಮಿಯಲ್ಲಿ ರಂಗವಲ್ಯಾದಿಗಳಿಂದ ಅಲಂಕಾರ ಮಾಡಿ ಅಲ್ಲಿ ಯಜಮಾನನು ಭದ್ರಾಸನದ ಮೇಲೆ ಕುಳಿತುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಾದಿಗಳನ್ನು ಉಚ್ಚರಿಸಿ "ಅಸ್ಯಾಂ ಶುಭತಿಥೌ ಮಮ ಸರ್ವ ಅನಿಷ್ಟ ನಿವೃತ್ಯರ್ಥಂ ಸರ್ವಾಭೀಷ್ಟ ಪ್ರಾಪ್ತ್ಯರ್ಥಂ ಗುರುಗ್ರಹ ಪ್ರೀತಿಕರ ಸುವರ್ಣ ದಾನಂಕರಿಷ್ಯೇ" ತದಾದೌ "ಮಹಾಗಣಪತಿ ಪೂಜಾಂ ಚಕರಿಷ್ಯೇ" ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಿ ಅರಿಷಿಣದಿಂದ ಅಷ್ಟದಳ ಕಮಲವನ್ನು ಬರೆದು ಅದರ ಮೇಲೆ 2 ಸೇರು ಅಕ್ಕಿಯನ್ನು ಹಾಕಿ ಅದರ ಮೇಲೆ ಒಂದು ಬೆಳ್ಳಿಯ ಕಲಶ (ತಂಬಿಗೆ) ವನ್ನು ಸ್ಥಾಪಿಸಿ ಮೇಲೆ ಒಂದು ತಾಟು ಇಟ್ಟು ಅದರ ಮೇಲೆ ಹಳದಿ ಬಣ್ಣದ ರೇಶಿಮೆಯ ವಸ್ತ್ರವನ್ನು ಹಾಸಿ ಮಧ್ಯದಲ್ಲಿ ಬಂಗಾರದ ಗುರು ಪ್ರತಿಮೆಯನ್ನೂ, ಅದರ ಮಗ್ಗುಲದಲ್ಲಿ ವಿಷ್ಣು ಪ್ರತಿಮೆಯನ್ನೂ ಸ್ಥಾಪಿಸಿ ಪೂಜಿಸಬೇಕು. ಹಳದಿ ವಸ್ತ್ರ, ಹಳದಿ ಯಜ್ಞೋಪವೀತ, ಪಾದುಕೆಗಳು ಛತ್ರ, ಕಮಂಡಲುಗಳನ್ನು ಸಮರ್ಪಿಸಿ ಹಳದಿ ಗಂಧ, ಅಕ್ಷತೆ, ಹಳದಿ ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ, ದಕ್ಷಿಣೆ ಪ್ರದಕ್ಷಿಣ, ನಮಸ್ಕಾರಗಳನ್ನು ಸಮರ್ಪಿಸಿ ಕೆಳಗಿನ ಮಂತ್ರವನ್ನು ಪಠಿಸಬೇಕು.

ಮಂತ್ರ- ನಮಸ್ತೇ ದೇವ ದೇವೇಶ ಕೃಪಾಮಯ ಜಗತ್ಪ್ರಭೋ।
ಸ್ವರ್ಣ ದಾನೇನ ಸತತಂ ಮಮಸಂತು ಮನೋರಥಾಃ।
ಆಯುರಾರೋಗ್ಯ ಮೈಶ್ವರ್ಯ ವಿಜಯಂ ವಿಮಲಂಯಶಃ।
ಸ್ವರ್ಣದಾನೇನ ಲಕ್ಷ್ಮೀಶ ದೇಹಿ ಜನ್ಮನಿ ಜನ್ಮನಿ॥

ಈ ಪ್ರಕಾರವಾಗಿ ಧ್ಯಾನಿಸಿ ಗುರು ಪ್ರತಿಮಾ, ವಿಷ್ಣು ಪ್ರತಿಮೆಗಳನ್ನು ದಕ್ಷಿಣೆ, ತಾಂಬೂಲ ಸಹಿತ ಪೂಜ್ಯರಿಗೆ ದಾನಕೊಟ್ಟು ಅವರ ಆಶೀರ್ವಾದ ಪಡೆದರೆ ಎಲ್ಲ ಅನಿಷ್ಟಗಳೂ ನಿವೃತ್ತಿಯಾಗಿ ಮನೋಭಿಷ್ಟವು ಪ್ರಾಪ್ತಿಯಾಗುವದು ಎಂದು ವಿಷ್ಣುಯಾಮಳ

ತಂತ್ರದಲ್ಲಿ ವಿವರಿಸಲ್ಪಟ್ಟಿದೆ. (ಕೃಷ್ಣಪಕ್ಷದ ಅಷ್ಟಮಿ, ಚತುರ್ದಶಿ, ಅಮವಾಸಿ, ಹುಣ್ಣಿವೆ, ಸೂರ್ಯ ಸಂಕ್ರಾಂತಿ ಇವು ಪರ್ವ ಕಾಲಗಳೆಂದು ಋಷಿಗಳಿಂದ ಪರಿಗಣಿಸಲ್ಪಟ್ಟಿವೆ.)



## ಸೂರ್ಯದಶಾ ಶನಿಭುಕ್ತಿಯಲ್ಲಿ ಶನಿಪ್ರೀತಿಕರ ಛಾಗ ದಾನವು

ಜನನ ಕುಂಡಲಿಯಲ್ಲಿ ಶನಿಯು ದುಷ್ಟ ಸ್ಥಾನಗಳಲ್ಲಿದ್ದರೆ ಭಯವು, ಉನ್ಮಾದವು, ಉತ್ಪಾತ ಭಯವು, ಶತ್ರುಗಳ ಉಪದ್ರವವು. ಈ ಸರ್ವದೋಷ ಪರಿಹಾರಕ್ಕಾಗಿ ಛಾಗ (ಮೇಕೆ) ದಾನವನ್ನು ಮಾಡುವದರಿಂದ ಆಯುಷ್ಯ, ಆರೋಗ್ಯಗಳು ವೃದ್ಧಿಯಾಗಿ ಸರ್ವ ಸಂಪತ್ ಸಮೃದ್ಧಿಯಾಗುವವು.

ಕೃಷ್ಣಪಕ್ಷದ ಅಷ್ಟಮಿ, ಚತುರ್ದಶಿ, ದ್ವಾದಶಿ, ಸಂಕ್ರಮಣ ಇತ್ಯಾದಿ ಪರ್ವಕಾಲಗಳಲ್ಲಿ ರವಿ, ಮಂಗಳ, ಶುಕ್ರವಾರಗಳಲ್ಲಿ ಯಜಮಾನನಿಗೆ ಚಂದ್ರ ಬಲ ಇರುವ ದಿವಸದಲ್ಲಿ ದೇವಾಲಯ ಅಥವಾ ನದೀ ತೀರದಲ್ಲಿ ಇಲ್ಲವೆ ಶುದ್ಧ ಪ್ರದೇಶದಲ್ಲಿ ಮೂರು ಮೊಳ ನೆಲವನ್ನು ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿ ಯಜಮಾನನು ಶುಚಿರ್ಭೂತನಾಗಿ ಭದ್ರಾಸನದಲ್ಲಿ ಕುಳಿತು–

ಯದತ್ರಸಂಸ್ಥಿತಂ ಭೂತಂ ಸ್ಥಾನಮಾಶ್ರಿತ್ಯ ಸರ್ವದಾ।
ಸ್ಥಾನಂತ್ಯಕ್ತ್ವಾ ತು ತತ್ಸರ್ವಂ ಯತ್ರಸ್ಥ ತತ್ರಗಚ್ಛತು॥

ಈ ಮಂತ್ರವನ್ನು ಉಚ್ಚರಿಸುತ್ತ ಸುತ್ತಲೂ ಬಿಳಿ ಸಾಸಿವೆಗಳನ್ನು ಎರಚಬೇಕು. ನಂತರ ಆಚಮನ ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ ''ಮಮ, ಸರ್ವಾರಿಷ್ಟ ಪರಿಹಾರಾರ್ಥಂ, ಪೂರ್ವೋಪಾರ್ಜಿತ ದುರಿತ ಪಾಪೋದರ್ಕಜನ್ಯ ದೋಷತ್ರಯ ಕಲುಷಿತಾ ಮಯೋತ್ಪನ್ನ ಅಪಮೃತ್ಯು ಪರಿಹಾರಾರ್ಥಂ ಸರ್ವಾರ್ಥ ಸುಖಾರೋಗ್ಯಾದಿ ಸಿದ್ಧ್ಯರ್ಥಂ ಶನಿ ಪ್ರೀತಿಕರ ಛಾಗದಾನಂ ಕರಿಷ್ಯೇ ತದಾದೌ ಶ್ರೀಗಣಾಧಿಪತಿ ಪೂಜಾಂ ಕರಿಷ್ಯೇ'' ಎಂದು ಸಂಕಲ್ಪ ಮಾಡಿ ಗಣಪತಿ ಪೂಜೆಯನ್ನು ಮಾಡಿ ಚಚ್ಚೌಕಾದ ಮೂರು ಮೊಳ ಭೂಮಿಯಲ್ಲಿ ದರ್ಭೆಗಳನ್ನು ಹರವಿ, ಅಲ್ಲಿ ಸ್ನಾನ ಮಾಡಿಸಿ ಸ್ವಚ್ಛಗೊಳಿಸಿದ ಸದೃಢವಾದ ಕರೇ ಗಂಡು ಮೇಕೆಯನ್ನು ತಂದು ನಿಲ್ಲಿಸಿ ಹಣೆಗೆ ಗೋರೋಜನ, ಕೋಡುಗಳಿಗೆ ಭಸ್ಮ, ಕಂಠಕ್ಕೆ ಕುಂಕುಮ, ಹೊಟ್ಟೆಗೆ ಅರಿಷಿಣವನ್ನು ಲೇಪನ ಮಾಡಿ, ಕೋಡುಗಳಿಗೆ ಬಂಗಾರ, ಕೊಳಗಗಳಿಗೆ ಬೆಳ್ಳಿಯ ಆಭರಣಗಳನ್ನು ಹಾಕಿ ಕುತ್ತಿಗೆಗೆ ಎಲ್ಲ ಬಣ್ಣ ಕೂಡಿದ ವಸ್ತ್ರ, ಪೃಷ್ಠಕ್ಕೆ ಕಪ್ಪು ವಸ್ತ್ರವನ್ನು ಸುತ್ತಿ ಹೂಮಾಲೆಗಳಿಂದ ಅಲಂಕರಿಸಿ ಮೇಕೆಯ ಮುಂದಿನ ಎಡ ಕಾಲಿನ ಹತ್ತಿರ ಗೋದಿ, ಬಲಕಾಲಿನ ಹತ್ತಿರ ಉದ್ದು ಮುಂದಿನ ಎಡಕಾಲಿನ ಹತ್ತಿರ

ಕಡಲೆ, ಬಲಕಾಲಿನ ಹತ್ತಿರ ಕರೇ ಎಳ್ಳು ಈ ಪ್ರಕಾರ ಆಯಾ ಧಾನ್ಯಗಳ ಗುಂಪೆಗಳನ್ನು ಹಾಕಿ ಕರೇ ಎಳ್ಳು, ಹತ್ತಿಗಳನ್ನು ಮೇಕೆಯ ಹತ್ತಿರ ಇಟ್ಟು ಮತ್ತು ಮೇಕೆಯು ತಿನ್ನುವದಕ್ಕಾಗಿ ಕೋಮಲವಾದ ಎಲೆಗಳನ್ನು ಮುಂದಿಟ್ಟು ತಾನು ಪೂರ್ವಾಭಿಮುಖವಾಗಿ ನಿಂತುಕೊಂಡು,

ಧ್ಯಾನ- ತ್ವಂ ಛಾಗಹವ್ಯವಾಹಸ್ಯ ವಾಹನಾರ್ಥಂ ಪ್ರಕಲ್ಪಿತಃ।
ಹವ್ಯವಾಹಸ್ತುದೇ ವಾನಾಂ ಮುಖಮಗ್ರೇ ಪ್ರಕಲ್ಪಿತಂ॥
ತವಪೂಜನತೋ ದೇವಾ ಸ್ತುಪಾಃ ಸರ್ವೇಭವಂತಿಹಿ।
ಅತಸ್ತ್ವಾಂ ಪೂಜಯಿಷ್ಯಾಮಿ ಕ್ಷಿಪ್ರಾರೋಗ್ಯಂ ಪ್ರಯಚ್ಛಮೇ॥

ಹೀಗೆ ಪ್ರಾರ್ಥನೆಯನ್ನು ಮಾಡಿ ಕೆಂಪು ಗಂಧ, ಕೆಂಪು ಅಕ್ಷತೆ, ನೀಲಿ ಹೂಗಳಿಂದ ಮೇಕೆಯನ್ನು ಪೂಜಿಸಿ ಮೇಕೆಯ ಅಂಗ ಪೂಜೆಯನ್ನು ಮಾಡಬೇಕು. ಮೇಷಾಯ ನಮಃ ಪಾದೌ (ಪಾದ) ಪೂಜಯಾಮಿ, ಅಗ್ನಿವಾಹನಾಯ ನಮಃ, ಜಾನುನಿ (ಮೊಳಕಾಲು) ಪೂಜಯಾಮಿ, ಉರಣಾಯ ನಮಃ ಕಟಿಂ (ನಡು) ಪೂಜಯಾಮಿ, ಛಾಗಾಯ ನಮಃ ಉದರಂ (ಹೊಟ್ಟೆ) ಪೂಜಯಾಮಿ, ಚಂಚಲಗ್ರೀವಾಯ ನಮಃ, ಕಂಠಂ (ಕುತ್ತಿಗೆ) ಪೂಜಯಾಮಿ ಊರ್ಣವತೇ ನಮಃ ಹೃದಯಂ (ಎದೆ) ಪೂಜಯಾಮಿ, ದೀರ್ಘಕೂರ್ಚಾಯ ನಮಃ ಮುಖಂ (ಮುಖ) ಪೂಜಯಾಮಿ, ದೃಢಶೀರ್ಷ್ಣೇ ನಮಃ ಶಿರಃ (ತಲೆ) ಪೂಜಯಾಮಿ, ಶಕ್ತಿ ಧರಾಯ ನಮಃ, ಸರ್ವಾಂಗಂ (ಎಲ್ಲ ದೇಹ) ಪೂಜಯಾಮಿ.

ಈ ಪ್ರಕಾರ ಉಚ್ಚರಿಸುತ್ತ ಆಯಾ ಅವಯವಗಳನ್ನು ಗಂಧಾಕ್ಷತೆ, ಪತ್ರಿ, ಪುಷ್ಪಗಳಿಂದ ಪೂಜಿಸಿ ಧೂಪ, ದೀಪಗಳನ್ನು ಬೆಳಗಿದ ನಂತರ ಉಳ್ಳು ಕೂಡಿಸಿದ ಅನ್ನವನ್ನು ನೈವೇದ್ಯ ಮಾಡಿ ಮೇಕೆಗೆ ಮೂರುಸಾರೆ ಪ್ರದಕ್ಷಿಣೆ ಹಾಕಿ ನಮಸ್ಕರಿಸಬೇಕು ಮತ್ತು ದಾನ ತೆಗೆದುಕೊಳ್ಳತಕ್ಕ ಜಂಗಮಮೂರ್ತಿ ಅಥವಾ ಬ್ರಾಹ್ಮಣನನ್ನು ಗಂಧ, ಪುಷ್ಪ, ವಸ್ತ್ರಾದಿಗಳಿಂದ ಪೂಜಿಸಿ ಆತನನ್ನು ದಕ್ಷಿಣಾಭಿಮುಖವಾಗಿ ನಿಲ್ಲಿಸಿ ಅವನನ್ನು ಮೃತ್ಯುಂಜಯನೆಂದು ಭಾವಿಸಿ ತಾನು ಪೂರ್ವಾಭಿಮುಖವಾಗಿ ನಿಂತು,

ವಿಪೇಂದ್ರ ವೇದ ವೇದಾಂಗ ಪವಿತ್ರ ಕರುಣಾಕರ।
ಗೃಹಾಣ ಮೇಷಂ ಸದೃಢಂ ಸುಂದರಂ ಸ್ವರ್ಣಭೂಷಿತಂ।
ಶ್ಯಾಮಂ ಸುನೇತ್ರಂ ಸುಮುಖ ಮಂಗೈಃ ಸಂಪೂರ್ಣ ವಿಗ್ರಹಂ।
ಹೇಮ ಶೃಂಗಂ ರೌಪ್ಯ ಖುರಂ ಕಾಂಸ್ಯ ಘಂಟಾ ಸಮನ್ವಿತಂ।
ಚಿತ್ರವಸ್ತ್ರಾವೃತಂ ಚಾಹಂ ದಾಸ್ಯೇ ಮೃತ್ಯೂಪ ಶಾಂತಯೇ।

ಕೃಶಾನು ವಾಹನೋ ಮೇಷೋ ಮೃತ್ಯು ರೂಪೇಣ ಸಂಸ್ಥಿತಃ।
ಸರ್ವವ್ಯಾಧಿ ಹರೋ ನಿತ್ಯ ಮತಃ ಶಾಂತಿಂ ಪ್ರಯಚ್ಛಮೇ।
ಸ್ವರ್ಜಿತಂ ನೀಲ ವಸ್ತ್ರಾಢ್ಯಂ ಮೃತ್ಯು ವಕ್ತ್ರ ಸಮುದ್ಭವಂ।
ಶಿವರೂಪಾಯ ವಿಪ್ರಾಯ ತಥಾ ಮೃತ್ಯುಂಜಯಾಯಚ।
ಭಾಗಂ ದದಾಮಿ ಸರ್ವಾರ್ಥ ಸುಖಾರೋಗ್ಯಾದಿ ಸಿದ್ಧಯೇ।
ತತಸ್ತು ದಕ್ಷಿಣಾದಾನಂ ಶತನಿಷ್ಕ ಪ್ರಮಾಣತಃ।
ದರಿದ್ರಕೃತ ದೋಷೇಣ ಸ್ವರ್ಣ ಪಂಚಕ ಮೇವವಾ।
ಸುವರ್ಣ ದ್ವಯಮೇ ವಾಪಿ ದದ್ಯಾದ್ಭಕ್ತಿ ಸಮನ್ವಿತಃ॥

ಎಂದು ಪಠಿಸುತ್ತ ಮೇಕೆಯನ್ನು ದಾನ ಮಾಡಿ ಗುರುಮೂರ್ತಿಯನ್ನು ನಮಸ್ಕರಿಸಬೇಕು ಮತ್ತು ಮೇಕೆ ಸಹಿತವಾಗಿ ಗುರುಮೂರ್ತಿಯು ಹೋದ ಬಳಿಕ 1 ತಿಂಗಳವರೆಗೆ ಆತನ ಮುಖವನ್ನು ನೋಡಕೂಡದು. ನಂತರ ಯಜಮಾನನು ಪುನಃ ಸ್ನಾನ ಮಾಡಿ ಇಷ್ಟದೇವತಾ ಪೂಜೆಯನ್ನು ಪೂರೈಸಿ ರುದ್ರಾಭಿಷೇಕವನ್ನು ಮಾಡಿಸಿ ತನ್ನ ಶಕ್ತ್ಯಾನುಸಾರವಾಗಿ ಗಣಾರಾಧನೆಯನ್ನು ಮಾಡಿಸುವದರಿಂದ ಶನಿಮಹಾರಾಜನ ಪೀಡಾ ನಿವೃತ್ತಿಯಾಗಿ ಮೃತ್ಯು ಪರಿಹಾರವಾಗುವದಲ್ಲದೆ ಆರೋಗ್ಯ, ಆಯುಷ್ಯಗಳು ವೃದ್ಧಿಯಾಗುವವು ಎಂದು ಯಾಮಳ ತಂತ್ರದಲ್ಲಿ ಹೇಳಲ್ಪಟ್ಟಿದೆ.



## ಸೂರ್ಯದಶಾ ಬುಧಭುಕ್ತಿಯಲ್ಲಿ ಬುಧ ಪ್ರೀತಿಕರ ರಜತ ದಾನವು

ಜನನ ಲಗ್ನಕುಂಡಲಿಯಲ್ಲಿ ಬುಧನು ದುಷ್ಟ ಸ್ಥಾನಗಳಲ್ಲಿದ್ದರೆ ಬಂಧು ದ್ವೇಷವು, ಕಾರ್ಯ ಹಾನಿಯು, ಬುದ್ಧಿ ಭ್ರಂಶವು, ಧನಹಾನಿಯು, ಪಿತ್ತ ರೋಗ ಭಯ, ಸರ್ವತ್ರ ಭಯ ಉಂಟಾಗುವದು.

ಯಜಮಾನನು ಬುಧವಾರ ದಿವಸ ಶುಚಿರ್ಭೂರ್ತನಾಗಿ ದೇವಾಲಯ ಅಥವಾ ತನ್ನ ಮನೆಯ ಪವಿತ್ರ ಸ್ಥಳವನ್ನು ಗೋಮಯದಿಂದ ಸಾರಿಸಿ ರಂಗವಲ್ಲ್ಯಾದಿಗಳಿಂದ ಅಲಂಕರಿಸಿದ ಸ್ಥಳದಲ್ಲಿ ಭದ್ರಾಸನದ ಮೇಲೆ ಕುಳಿತುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ,

''ಅಸ್ಯಾಂಶುಭತಿಥೌ ಮಮ ಸರ್ವಾರಿಷ್ಟ ನಿವಾರಣಾರ್ಥಂಚ ಆಯುರಾರೋಗ್ಯಸಿದ್ಧ್ಯರ್ಥಂ ಬುಧ ಪ್ರೀತಿಕರ ರಜತ ದಾನಂ ಕರಿಷ್ಯೇ ತದಾದೌ ಶ್ರೀ ಗಣಾಧಿಪತಿ ಪೂಜಾಂ ಕರಿಷ್ಯೇ'' ಎಂದು ಸಂಕಲ್ಪ ಮಾಡಿ ಗಣಪತಿ ಪೂಜೆಯನ್ನು ಮಾಡಿದ ಬಳಿಕ

11 ತೊಲೆ ಬೆಳ್ಳಿಯಿಂದ ಮಾಡಿಸಿದ ಬುಧನ ಪ್ರತಿಮೆ (ಅವನು ಸಿಂಹವಾಹನ ನಾಲ್ಕು ಕೈಗಳು, ಕೈಯಲ್ಲಿ ಖಡ್ಗ ಗದೆ ಹಿಡಿದಿರಬೇಕು.) ಯನ್ನು ಸ್ಥಾಪಿಸಿ ಪೂಜಿಸಬೇಕು.

ಯದತ್ರ ಸಂಸ್ಥಿತಂ ಭೂತಂ ಸ್ಥಾನ ಮಾಶ್ರಿತ್ಯ ಸರ್ವದಾ।
ಸ್ಥಾನಂ ತಕ್ತ್ವಾತು ತ್ಯತ್ಸರ್ವಂ ಯತ್ರಸ್ಥಂ ತತ್ರಗಚ್ಛತು ॥

ಈ ಮಂತ್ರದಿಂದ ಸುತ್ತಲೂ ಬಿಳಿಯ ಸಾಸಿವೆಗಳನ್ನು ಎರಚಿ,

ಆಪೋಹಿಷ್ಠಾ ಮಯೋಭುವ ಸ್ತಾನ ಊರ್ಜೇದಧಾತನ।
ಮಹೇರಣಾಯ ಚಕ್ಷಸೇ ಯೋವಶ್ಶಿವ ತಮೋ ರಸಸ್ತಸ್ಯ ಭಾಜಯತೇಹನಃ
ಉಶ ತೀರಿವ ಮಾತರಃ। ತಸ್ಮಾ ಅರಂಗಮಾಮವೋ ಯಸ್ಯಕ್ಷ
ಯಾಯ ಜನ್ವಥ। ಆಪೋಜನ ಯಥಾ ಚನಃ॥

ಈ ಮಂತ್ರದಿಂದ ಜಲವನ್ನು ಸಿಂಪಡಿಸಿ ಪರಿಶುದ್ಧಸ್ಥಳದಲ್ಲಿ,

ಮಹೀದ್ಯೌಃ ಪೃಥಿವೀಚನ ಇಮಂ ಯಜ್ಞ ಮಿಮಿಕ್ಷತಾಂ ಪೀಪೃತಾನ್ನೋ ಭರೀಮಭಿಃ॥

ಈ ಮಂತ್ರವನ್ನು ಉಚ್ಚರಿಸುತ್ತ ತನ್ನ ಎರಡೂ ಕೈಗಳಿಂದ ಆ ಪ್ರದೇಶದ ದಕ್ಷಿಣೋತ್ತರ ಭೂಮಿಯನ್ನು ಮುಟ್ಟಿ ಅಲ್ಲಿ ಒಂದು ಬಾಳೆಯ ಎಲೆಯನ್ನು ಹಾಸಿ,

ಓಷಧಯಃ ಸಂವದಂತೇ ಸೋಮೇನ ಸಹರಾಜ್ಞಾ।
ಯಸ್ಮೈ ಕೃಣೋತಿ ಬ್ರಾಹ್ಮಣ ಸ್ತಗ್ಂ ರಾಜನ್ ಪಾರಯಾಮಸಿ॥

ಎಂದು ಉಚ್ಚರಿಸುತ್ತ ಬಾಳೆಯ ಎಲೆಯ ಮೇಲೆ ಹೆಸರು ಧಾನ್ಯದ ಗುಂಪೆಯನ್ನು ಚೌಕಾಗಿ ಹರವಿ ಅದರ ಮೇಲೆ ಅಷ್ಟದಳ ಕಮಲವನ್ನು ಬರೆದು,

ಆಕಲಶೇಷು ಧಾವತಿ ಶ್ಯೇನೋ ವರ್ಮ ವಿಗಾಹತೇ। ಅಭಿದ್ರೋಣಾ
ಕನಿಕ್ರದತ್ ಪವಿತ್ರೇಷು ಪರಿಷಿಚ್ಯತೇ ಉಕ್ಥೈರ್ಯಜ್ಞೇಷುವರ್ಧತೇ॥

ಎಂದು ಒಂದು ತಾಮ್ರ ಇಲ್ಲವೆ ಬೆಳ್ಳಿಯ ಕಲಶವನ್ನು ಸ್ಥಾಪಿಸಿ,

"ಇಮಂಮೇ ಗಂಗೇಯಮುನೇ ಸರಸ್ವತಿ ಶುತುದ್ರಿಸ್ತೋಮಗ್ಂ ಸಚತಾ
ಪರುಷ್ಣಿಯಾ। ಅಸಿ ಕ್ನಿಯಾಮರುದ್ವೃಧೇವಿತಸ್ತಯಾರ್ಜೀಕೀಯೇ
ಶೃಣುಹ್ಯಾಸುಷೋ ಮಯಾ"

ಎಂದು ಉಚ್ಚರಿಸುತ್ತ ಆಕಾಶದಲ್ಲಿ ಜಲವನ್ನು ತುಂಬಿ,

ಗಂಧದ್ವಾರಾಂ ದುರಾರ್ಧರ್ಷಾಂ ನಿತ್ಯ ಪುಷ್ಟಾಂ ಕರೀಷಿಣೀಂ।
ಈಶ್ವರೀಗ್ಂ ಸರ್ವಭೂತಾನಾಂ ತಾಮಿ ಹೋಪ ಹ್ವಯೇ ಶ್ರಿಯಂ॥

ಈ ಮಂತ್ರದಿಂದ ಕಲಶದಲ್ಲಿ ಗಂಧವನ್ನು ಹಾಕಿ ಹಾಗೂ ಮೇಲೆಯೂ ಧರಿಸಿ ಪುಷ್ಪ ಮಾಲಿಕೆಗಳಿಂದ ಅಲಂಕರಿಸಿ,

ಕಾಂಡಾತ್ಕಾಂಡಾ ತ್ಪರ್ರೋಹಂತಿ ಪರುಷಃ ಪರುಷಃಪರಿ।
ಏವಾನೋ. ದೂರ್ವೇ ಪ್ರತನು ಸಹಸ್ರೇಣ ಶತೇನಚ॥

ಈ ಮಂತ್ರದಿಂದ ದರ್ಭೆಗಳನ್ನಿಟ್ಟು,

ಹಿರಣ್ಯರೂಪ ಸ್ಸಹಿರಣ್ಯ ಸಂದೃಗಪಾನ್ನಪಾತ್ಸೇದು ಹಿರಣ್ಯ ವರ್ಣಃ।
ಹಿರಣ್ಯ ಯಾತ್ಪರಿಯೋ ನೇರ್ನಿಷದ್ಯಾ ಹಿರಣ್ಯದಾದದತ್ಯನ್ನಮಸ್ಮೈ॥

ಈ ಮಂತ್ರದಿಂದ ಕಲಶದಲ್ಲಿ ಶಕ್ತ್ಯಾನುಸಾರ ಬಂಗಾರವನ್ನು ಹಾಕಿ,

ತಂತುಂತನ್ವನ್ ರಜಸೋ ಭಾನುಮನ್ವಿಹಿ। ಜ್ಯೋತಿಷ್ಮತಃ ಪಥೋ
ರಕ್ಷಧಿಯಾಕೃತಾನ್। ಅನುಲ್ಬಣಂ ಪಯಸ ಜೋಗುವಾಮ
ಪೋಮನುರ್ಭವ ಜನಯಾದೈವ್ಯಂಜನಂ॥

ಈ ಮಂತ್ರದಿಂದ ಕಲಶಕ್ಕೆ ಹಸಿರು ಬಣ್ಣದ ದಾರವನ್ನು ಸುತ್ತಬೇಕು.

"ಪೂರ್ಣಾದರ್ವಿಪರಾಪತ ಸುಪೂರ್ಣಾಪುನರಾಪತ ವಸ್ನೇವ ವಿಕ್ರೀಣಾವಹ
ಇಷಮೂರ್ಜಗ್ಂ ಶತಕ್ರತೋ"

ಈ ಮಂತ್ರವನ್ನು ಅನ್ನುತ್ತ ಕಲಶದ ಮೇಲೆ ಹರವಾದ ಕಂಚಿನ ಪಾತ್ರೆಯನ್ನು ಇಟ್ಟು ಅದರಲ್ಲಿ ಹೆಸರು ಧಾನ್ಯವನ್ನು ತುಂಬಿ ಅದರಲ್ಲಿ ಬಾಣಾಕಾರ ಮಂಡಲವನ್ನು ರಚಿಸಿ ಅದರ ಮೇಲೆ ಹಸಿರು ಬಣ್ಣದ ರೇಶಿಮೆ ವಸ್ತ್ರವನ್ನು ಹರವಿ ಅದರಲ್ಲಿ ಬೆಳ್ಳಿಯ ಬುಧನ ಪ್ರತಿಮೆಯನ್ನು ಸ್ಥಾಪಿಸಿ (ಪ್ರತಿಮೆಯನ್ನು ಸ್ಥಾಪಿಸುವದಕ್ಕಿಂತ ಮೊದಲು ಪ್ರತಿಮೆಗೆ ಪಂಚಗವ್ಯ, ಪಂಚಾಮೃತಗಳಿಂದ ಅಭಿಷೇಕ ಮಾಡಿ ಸಂಕ್ಷೇಪವಾಗಿ ಪೂಜೆ ಮಾಡಿರಬೇಕು.) ಕರನ್ಯಾಸ, ಅಂಗನ್ಯಾಸಗಳನ್ನು ಮಾಡಬೇಕು.

"ಉದ್ಬುಧ್ಯಸ್ವಬುಧೋ ಬುಧ ಸ್ತ್ರಿಷ್ಟುಪ್। ಉದ್ಬುಧ್ಯಸ್ವೇತ್ಯಸ್ಯ ಮಂತ್ರಸ್ಯ। ಬುಧಋಷಿಃ। (ಮಸ್ತಕದಲ್ಲಿ), ಬುಧೋದೇವತಾ ತ್ರಿಷ್ಟುಪ್ ಛಂದಃ। (ಮುಖದಲ್ಲಿ) ಬುಧದೇವತೆ ಪ್ರೀತ್ಯರ್ಥಂ। ಯಜಮಾನಸ್ಯ। ಅಧಿದೇವತಾ ಪ್ರತ್ಯಧಿದೇವತಾ ಸಹಿತ ಸರ್ವರೋಗ ಪರಿಹಾರದ್ವಾರಾ। ಬುಧ ಗ್ರಹ ಪ್ರಸಾದ ಸಿದ್ಧ್ಯರ್ಥೇ। ಬುಧ ಗ್ರಹಾರಾಧನೇ ವಿನಿಯೋಗಃ"

ಎಂದು ಹೇಳಿ ಕರನ್ಯಾಸವನ್ನು ಮಾಡಬೇಕು,

"ಉದ್ಬುಧ್ಯಸ್ವಾಗ್ನೇ-ಅಂಗುಷ್ಠಾಭ್ಯಾಂ ನಮಃ। ಪ್ರತಿಜಾಗೃಹ್ಯೇನ ತರ್ಜನೀಭ್ಯಾಂ ನಮಃ। ಇಷ್ಟಾಪೂರ್ತೇಸಗ್ಂ ಸೃಜೇಥಾಂ-ಮಧ್ಯಮಾಭ್ಯಾಂ ನಮಃ। ಅಯಂಚ ಅನಾಮಿಕಾಭ್ಯಾಂ ನಮಃ। ಕೃಣ್ವಗ್ಂ ಸ್ತ್ವಾಷಿತರಂ ಯುವಾನಂ- ಕನಿಷ್ಠಿಕಾಭ್ಯಾಂ ನಮಃ। ಅಸ್ಮಾತ್‌ಗ್ಂ ಸೀತ್ವಯಿತಂತು ಮೇತಂ- ಕಲತಲಕರ ಪೃಷ್ಠಾಭ್ಯಾಂ ನಮಃ॥
ಅಂಗನ್ಯಾಸ- ಉದ್ಬುಧ್ಯಸ್ವಾಗ್ನೇ- ಹೃದಯಾಯ ನಮಃ। ಪ್ರತಿಜಾಗೃಹ್ಯೇನ-ಶಿರಸೇಸ್ವಾಹಾ।

ಇಷ್ಟಾಪೂರ್ತೇಸಗ್‌ಂ ಸೃಜೇಥಾಂ-ಶಿಖಾಯೈವಷಟ್ । ಅಯಂಚ-ಕವಚಾಯಹುಂ । ಕೃಣ್ವಗ್‌ಂ ಸ್ತ್ವಾಪಿತರಂ ಯುವಾನಂ ನೇತ್ರತ್ರಯಾಯವೌಷಟ್ । ಅಸ್ವಾತಾಗ್‌ಂ ಸೀತ್ವಯಿತಂತು ಮೇತಂ ಅಸ್ತ್ರಾಯಫಟ್ । ಓಂ ಭೂರ್ಭುವಸ್ಸುವರೋ ಮಿತಿ ದಿಗ್ಬಂಧಃ।

ಎಂದು ಹೇಳಿ ಕರನ್ಯಾಸ–ಅಂಗನ್ಯಾಸಗಳನ್ನು ಮಾಡಿ ಹತ್ತುದಿಕ್ಕುಗಳಿಗೂ ನೀರು ಸಿಂಪಡಿಸಿ ಚಟಿಗೆ ಹೊಡೆದು ದಿಗ್ಬಂಧನವನ್ನು ಮಾಡಬೇಕು.

ಧ್ಯಾನಂ- ಉದಜ್ಮುಖೋ ಮಾಗಧ ಜೋಹರಿಸ್ಥಾತ್ರೇಯ ಗೋತ್ರಶ್ಶರ ಮಂಡಲಸ್ಥಃ।
ಸಖಡ್ಗಚರ್ಮೋರುಗದಾಧರೋಽಜ್ಞ ಸ್ತ್ವೀಶಾನಭಾಗೇ ವರದಸ್ಸು ಪೀತಃ॥
ಪೀತಾಂಬರಃ ಪೀತವಪುಃ ಕಿರೀಟೀ ಚತುರ್ಭುಜೋ ದಂಡಧರಶ್ಚ ಸೌಮ್ಯಃ।
ಚರ್ಮಾಸಿ ದೃಕ್ಸೋಮಸುತಸ್ಸುಮೇರುಃ ಸಿಂಹಾಧಿರೂಢೋವರದೋಬುಧಶ್ಚ॥

"ಉದ್ಬುಧ್ಯ ಸ್ವಾಗ್ನೇಪ್ರತಿಜಾ ಗೃಹ್ಯೇನ ಮಿಷ್ಟಾಪೂರ್ತೇ ಸಗ್‌ಂ ಸೃಜೇಥಾ ಮಯಂಚ ಪುನಃ ಕೃಣ್ವಗ್‌ಂಸ್ತ್ವಾಪಿತರಂ ಯುವಾನ ಮನ್ವಾತಾಗ್‌ಂ ಸೀತ್ವಯಿ ತಂತುಮೇತಂ॥"

ಎಂದು ಬುಧನನ್ನು ಧ್ಯಾನಿಸಿ ನಂತರ

"ಬುಧಂ ಪೀತವರ್ಣಂ। ಪೀತಮಾಲ್ಯಾಂಬರಧರಂ। ಪೀತಗಂಧಾನುಲೇಪನಂ ಪೀತಾಶ್ವ। ಪೀತ ಛತ್ರ। ಧ್ವಜಪತಾಕೋಪಶೋಭಿತಂ। ದಿವ್ಯರಥ ಮಾರೂಢಂ ಮೇರುಂ ಪ್ರದಕ್ಷಿಣೀಕುರ್ವಾಣಂ। ಗ್ರಹಮಂಡಲೇ ಪ್ರವಿಷ್ಟಂ ಸಾಂಗಂ। ಸಾಯುಧಂ। ಸವಾಹನಂ। ಸರಾಷ್ಟ್ರಂ। ಸಶಕ್ತಿ ಸಪತ್ನೀ ಸಪುತ್ರ ಸಪರಿವಾರ ಸಮೇತಂ। ಸರ್ವಾಲಂಕಾರ ಭೂಷಿತಂ॥ ಬಾಣಾಕಾರ ಮಂಡಲೇ। ಮುದ್ಗಧಾನ್ಯಸ್ಯೋಪರಿ। ಭಗವಂತಂ। ಓಂ ಭೂಃ। ಭುದ ಗ್ರಹಮಾವಾಹಯಾಮಿ । ಓಂಭುವಃ । ಬುಧಗ್ರಹಮಾವಾಹಯಾಮಿ ಓಂ ಸುವಃ । ಬುಧಗ್ರಹಮಾವಾಹಯಾಮಿ। ಓಂ ಭೂರ್ಭುವಃ ಸುವಃ ಬುಧಗ್ರಹಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಎಂದು ಅನ್ನುತ್ತಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು. ನಂತರ ಜಲ, ಭಸ್ಮ ಗಂಧ, ಅಕ್ಷತೆ, ಪತ್ರಿ (ಉತ್ತರಾಣಿ) ಜಾಜಿ ಪುಷ್ಪ, ಹಸಿರು ವಸ್ತ್ರ, ಧೂಪ, ದೀಪಗಳಿಂದ ಪೂಜಿಸಿ ಹೆಸರು ಮಿಶ್ರ ಅನ್ನದ ನೈವೇದ್ಯ ಮಾಡಿ ದಕ್ಷಿಣೆ, ತಾಂಬೂಲಗಳನ್ನು ಸಮರ್ಪಿಸಿ ಕೆಳಗಿನ ಮಂತ್ರದಿಂದ ಸ್ತೋತ್ರ ಮಾಡಬೇಕು–

ಮಂತ್ರ- ಸಿಂಹಾರೂಢಂ ಚತುರ್ಬಾಹುಂ ಖಡ್ಗ ಚರ್ಮ ಗದಾಧರಾನ್।
ಧಾರಯಂತಂ ಮಹಾಸೌಮ್ಯಂ ಧ್ಯಾಯೇತ್ಸರ್ವಾರ್ಥಸಿದ್ಧಯೇ॥

ಎಂದು ಧ್ಯಾನಿಸಿ,

ಉದ್ಬುಧ್ಯಸ್ವಾಗ್ನೇ ಪ್ರತಿಜಾಗೃಹ್ಯೇನ ಮಿಷ್ಟಾ ಪೂರ್ತೇಸಗ್‌ಂ ಸೃಜೇಥಾ । ಮಯಂಚ ಪುನಃ ಕೃಣ್ವಗ್‌ಂಸ್ತ್ವಾಪಿತರಂ ಯುವಾನ ಮನ್ವಾತಾಗ್‌ಂ ಸೀತ್ವಯಿ ತಂತುಮೇತಂ॥

ಎಂದು ಉಚ್ಚರಿಸಿ ಮಂತ್ರ ಪುಷ್ಪಗಳನ್ನು ಸಮರ್ಪಿಸಿ ಬಳಿಕ ಓರ್ವ ಜಂಗಮ ಮೂರ್ತಿಯನ್ನು ಅಥವಾ ಬ್ರಾಹ್ಮಣನನ್ನು ಪೂಜಿಸಿ ಆತನಿಗೆ ಹಸಿರು ಬಣ್ಣದ ವಸ್ತ್ರಾದಿಗಳನ್ನು ಸಮರ್ಪಿಸಿ ಪ್ರಾರ್ಥಿಸಬೇಕು.

ಮಂತ್ರ- ರುದ್ರನೇತ್ರ ಸಮುದ್ಭೂತಂ ರಂಜಿತಂ ಪಿತೃವಲ್ಲಭಂ।
ತಸ್ಮಾದಸ್ಯ ಪ್ರದಾನೇನ ಅತಶ್ಯಾಂತಿಂ ಪ್ರಯಚ್ಛಮೇ॥

ಈ ಪ್ರಕಾರ ಉಚ್ಚರಿಸುತ್ತದಕ್ಷಿಣೆ, ತಾಂಬೂಲ ಸಹಿತ ಬುಧ ಪ್ರತಿಮೆಯನ್ನು ಆ ಗುರುಮೂರ್ತಿಗೆ ದಾನ ಮಾಡುವದರಿಂದ ಆತನು ಸರ್ವ ಅರಿಷ್ಟಗಳಿಂದ ಮುಕ್ತನಾಗಿ ಸೌಭಾಗ್ಯ ಸಂಪನ್ನನಾಗಿ, ದೀರ್ಘಾಯುಷಿಯಾಗಿ ಸುಖದಿಂದ ಬಾಳುವನು ಎಂಬುದಾಗಿ ಹೇಮಾದ್ರಿ ತಂತ್ರದಲ್ಲಿ ನಿರೂಪಿತವಾಗಿದೆ.



## ಸೂರ್ಯದಶಾ ಕೇತುಭುಕ್ತಿಯಲ್ಲಿ ಕೇತು ಪ್ರೀತಿಕರ ಛಾಗ ದಾನವು

ಜನನ ಲಗ್ನ ಕುಂಡಲಿಯಲ್ಲಿ ಕೇತು 2–7 ಸ್ಥಾನಗಳಲ್ಲಿದ್ದರೆ ಅಥವಾ ಆ ಸ್ಥಾನಾಧಿಪತಿಗಳಿಂದ ಕೂಡಿದ್ದರೆ ಕ್ರೂರನಾಗಿದ್ದರೆ ಅಪಮೃತ್ಯು ಭಯವು. ಆದಕ್ಕಾಗಿ ದುರ್ಗಾ ಜಪ ಅಥವಾ 41 ದಿವಸ ದೇವಿಪುರಾಣ ಪಾರಾಯಣ, ಮೃತ್ಯುಂಜಯ ಜಪಮಾಡಿಸಿ ಹಿಂದೆ ರವಿದಶಾ ಶನಿಭುಕ್ತಿಯಲ್ಲಿ ತಿಳಿಸಿದಂತೆ ಛಾಗ (ಮೇಕೆ) ದಾನ ಮಾಡುವದರಿಂದ ಮಾಟ, ಮಸಣ ಶೂನ್ಯ ಪೊಂಪು, ರೋಗ ಗಂಡಗಳಿಂದ ಉಂಟಾದ ಅಪಮೃತ್ಯು ಭಯ ಮೊದಲಾದವು ಪರಿಹಾರವಾಗುವವು (ಮೇಕೆಯ ಬಣ್ಣ ಮಿಶ್ರವಾಗಿರಬಹುದು) ಎಂದು ಯಾಮಳ ತಂತ್ರದಲ್ಲಿ ವಿವರಿಸಲ್ಪಟ್ಟಿದೆ. (ಮೃತ್ಯುಂಜಯ ಜಪ ಶಾಂತಿಗಾಗಿ ನಮ್ಮ ''ಶಾಂತಿ ಪ್ರಯೋಗ ರತ್ನ'' ತರಿಸಿ ನೋಡಿರಿ)



## ಸೂರ್ಯದಶಾ ಶುಕ್ರಭುಕ್ತಿಯಲ್ಲಿ ಶುಕ್ರ ಪ್ರೀತಿಕರ ಬಿಳಿಯ ಆಕಳ ದಾನವು

ಜನನ ಲಗ್ನ ಕುಂಡಲಿಯಲ್ಲಿ ಶುಕ್ರನು ದುಷ್ಟ ಸ್ಥಾನಗಳಲ್ಲಿದ್ದರೆ ದೇಹಪೀಡೆಯು. ಸ್ತ್ರೀ–ಪುತ್ರರ ನಾಶವು, ಕಲಹವು, ಸ್ಥಾನ ನಾಶವು ಇತ್ಯಾದಿ ಪೀಡೆಗಳುಂಟಾಗುವವು. ಈ ದೋಷ ಪರಿಹಾರಕ್ಕಾಗಿ ಏಕಾದಶ ರುದ್ರಾಬಿಷೇಕ, ಮೃತ್ಯುಂಜಯ ಜಪಶಾಂತಿ

ಮಾಡಿಸಿ ರವಿದಶಾ ಚಂದ್ರಭುಕ್ತಿಯಲ್ಲಿ ತಿಳಿಸಿದ ಪ್ರಕಾರ ಬಿಳಿಯ ಬಣ್ಣದ ಆಕಳನ್ನು ವಿಧಾನೋಕ್ತವಾಗಿ ದಾನ ಮಾಡಿದರೆ ಸಮಸ್ತಅರಿಷ್ಟಗಳು ನಿವೃತ್ತಿಯಾಗುವವು ಎಂಬುದಾಗಿ ಹೇಮಾದ್ರಿ ತಂತ್ರದಲ್ಲಿಹೇಳಲ್ಪಟ್ಟಿದೆ. (ಏಕಾದಶ ರುದ್ರ ಮಾಡಿಸುವ ವಿಧಾನಕ್ಕೆ ನಮ್ಮ "ರುದ್ರಾಭಿಷೇಕ ವಿಧಾನ" ನೋಡಿರಿ).



## ಚಂದ್ರದಶಾದಲ್ಲಿ ಚಂದ್ರಪ್ರೀತಿಕರ ರಜತಪದ್ಮ ದಾನ

ಜನ್ಮಕುಂಡಲಿಯಲ್ಲಿ ಚಂದ್ರನು ಬಲಹೀನನಾಗಿ ಅಷ್ಟಮ ದ್ವಾದಶ ಸ್ಥಾನಗಳಲ್ಲಿ ಕ್ರೂರನಾಗಿದ್ದರೆ ಬೆಳ್ಳಿಯ ಕಮಲವನ್ನು ದಾನ ಮಾಡುವದರಿಂದ ದೋಷ ಪರಿಹಾರವಾಗುವದು.

ಶುಕ್ಲಪಕ್ಷದ ಸೋಮವಾರ ದಿವಸ ಯಜಮಾನನು ಶುಚಿರ್ಭೂತನಾಗಿ ದೇವಾಲಯ ಅಥವಾ ತನ್ನ ಮನೆಯಲ್ಲಿಯ ಪವಿತ್ರ ಸ್ಥಳವನ್ನು ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಸ್ಥಾನದಲ್ಲಿ ಭದ್ರಾಸನದ ಮೇಲೆ ಕುಳಿತುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ "ಅಸ್ಯಾಂ ಶುಭತಿಥೌ ಮಮ ಸರ್ವ ಭಯನಿವಾರಣಾರ್ಥಂ; ಆಯುಶ್ರೀ ಸುತ ಸಂಪತ್ ಪ್ರಾಪ್ತ್ಯರ್ಥಂ ಚಂದ್ರ ಪ್ರೀತಿಕರ ರಜತ ಪದ್ಮದಾನಂ ಕರಿಷ್ಯೇ ತದಾದೌ ಶ್ರೀ ಗಣಾಧಿಪತಿ ಪೂಜಾಂ ಕರಿಷ್ಯೇ" ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಿ ಬಳಿಕ ರಂಗವಲ್ಲಿಯಿಂದ □ ಚೌರಸಾಕಾರದ ಆಕೃತಿಯನ್ನು ಹಾಕಿ ಅದರ ಮಧ್ಯದಲ್ಲಿ ಅಷ್ಟದಳ ಕಮಲವನ್ನು ಬರೆದು, ಅದರ ಮೇಲೆ ಅಕ್ಕಿಯ ಗುಂಪೆಯನ್ನು ಚಚ್ಚೌಕಾಗಿ ಹರವಿ ಅದರ ಮೇಲೆ ಬೆಳ್ಳಿಯ ಕಮಲವನ್ನು ಸ್ಥಾಪಿಸಿ ಮುತ್ತಿನ ಆಭರಣ, ಜಲಭಸ್ಮ, ಬಿಳಿಯ ಗಂಧ, ಶ್ರೀಗಂಧ, ಬಿಳಿಯ ಅಕ್ಷತೆ, ಬಿಳಿಯ ವಸ್ತ್ರ, ಬಿಳಿಯ ಕಣಗಿಲ ಹೂ, ಮಲ್ಲಿಗೆಯ ಹೂಗಳಿಂದಲೂ, ಧೂಪ, ದೀಪಗಳಿಂದಲೂ ಪೂಜಿಸಿ ಪಾಯಸವನ್ನು ನೈವೇದ್ಯ ಮಾಡಿ ದಕ್ಷಿಣೆ, ತಾಂಬೂಲಗಳನ್ನು ಸಮರ್ಪಿಸಿ ಕೆಳಗಿನ ಮಂತ್ರದಿಂದ ಸ್ತೋತ್ರ ಮಾಡಬೇಕು.

ಮಂತ್ರ- ಗದಾವರಧರಂ ದೇವಂ ಶ್ವೇತ ವರ್ಣಂ ನಿಶಾಕರಂ।
ಧ್ಯಾಯೇದಮೃತ ಸಂಭೂತಂ ಸರ್ವ ಕಾಮಫಲಪ್ರದಂ।

ಎಂದು ಪ್ರಾರ್ಥಿಸಿ,

ಸೋಮೋನಿಶಾಕರಶ್ಚಂದ್ರಃ ಕ್ಷೀರೋದಾರ್ಣವ ಸಂಭವಃ।
ಅತ್ರಿಗೋತ್ರ ಸಮುದ್ಭೂತಃ ತಾರಕೇಶ ಸ್ತಥೈವಚ॥
ಸುಧಾಮೂರ್ತಿರೌಷಧೀನಾಂ ಪ್ರಾಣರೂಪೇತಿ ನಾಮಭಿಃ

ಈ ನಾಮಗಳನ್ನು ಉಚ್ಚರಿಸುತ್ತ ಪುಷ್ಪಗಳನ್ನು ಸಮರ್ಪಿಸಿ ಬಳಿಕ ಒಬ್ಬ ಜಂಗಮ ಮೂರ್ತಿ ಅಥವಾ ಬ್ರಾಹ್ಮಣನನ್ನು ಪೂಜಿಸಿ ಆತನನ್ನು ಬಿಳಿಯ ವಸ್ತ್ರಾದಿಗಳಿಂದ ಸತ್ಕರಿಸಿ, ಕೆಳಗಿನ ಮಂತ್ರವನ್ನು ಪಠಿಸುತ್ತ ತನ್ನ ಶಕ್ತ್ಯಾನುಸಾರ ದಕ್ಷಿಣೆ ಸಹಿತ ಆ ಬೆಳ್ಳಿಯ ಕಮಲವನ್ನು ದಾನ ಕೊಡಬೇಕು.

ಮಂತ್ರ- ತಂಡುಲೋಪರಿ ವಿನ್ಯಸ್ತ ಚಂದ್ರಮೂರ್ತಿಂ ದಾದಮ್ಯಹಂ।
ರಜತಂ ಭೂತಾನಾಂ ಪಿತ್ರೂಣಾಂ ಪರಮಂ ಹಿತಂ।
ಶಿವನೇತ್ರೋದ್ಭವಂ ಯಸ್ಮಾದತಶ್ಶಾಂತಿಂ ಪ್ರಯಚ್ಛಮೇ॥
ಆಯುಶ್ಶ್ರೀಸುತ ಸಂಪತ್ತಿಂ ಸದಾ ಶಾಂತಿಂ ಪ್ರಯಚ್ಛತು।
ಅನೇನವಿಧಿನಾ ಯಸ್ತು ಚಂದ್ರಪ್ರೀತಿ ಕರಂ ಪರಂ॥
ಪದ್ಮದಾನಂತು ಕುರುತೇ ಸಸ್ಸರ್ವ ಭಯವರ್ಜಿತಃ।
ರೂಪವಾನ್, ಧನವಾನ್ ವಾಗ್ಮಿ ಪುತ್ರಪೌತ್ರ ಸಮನ್ವಿತಂ।
ಇಹ ಭುಕ್ತ್ವಾಖಿಲಾನ್ ಭೋಗಾನಂತ್ಯೇ ಚಂದ್ರಪುರಂ ವ್ರಜೇತ್॥

ಈ ಪ್ರಕಾರ ದಾನ ಮಾಡುವದರಿಂದ ಚಂದ್ರನು ಸಂತುಷ್ಟನಾಗಿ ಸಕಲ ಭೋಗ ಭಾಗ್ಯಗಳನ್ನು ದಯಪಾಲಿಸುವನು ಎಂದು ಯಾಮಳ ತಂತ್ರದಲ್ಲಿ ಉಲ್ಲೇಖಿಸಲ್ಪಟ್ಟಿದೆ.



## ಚಂದ್ರದಶಾ ಚಂದ್ರಭುಕ್ತಿಯಲ್ಲಿ ಚಂದ್ರಪ್ರೀತಿಕರ ಶ್ವೇತ ಗೋದಾನವು

ಜನನ ಲಗ್ನ ಕುಂಡಲಿಯಲ್ಲಿ ಚಂದ್ರನು 6–8–12 ಸ್ಥಾನಗಳಲ್ಲಿದ್ದು ಕ್ರೂರವಾಗಿ ಕಾಡುತ್ತಿದ್ದರೆ ಮನೋ ವ್ಯಥೆಯು, ಮನಸ್ತಾಪವು, ಶೀತಜ್ವರ ಬಾಧೆಯು, ಧನನಾಶವು, ನೇತ್ರರೋಗವು, ಜಲಗಂಡವು, ಸ್ಥಾನ ನಷ್ಟವು ಇತ್ಯಾದಿ ಪೀಡೆಗಳುಂಟಾಗುವವು. ಈ ದೋಷ ಪರಿಹಾರಕ್ಕಾಗಿ ಸೂರ್ಯದಶಾ ಚಂದ್ರಭುಕ್ತಿಯಲ್ಲಿ ತಿಳಿಸಿದ ಪ್ರಕಾರ ಶ್ವೇತ ಗೋದಾನ (ಬಿಳಿಯ ಆಕಳದಾನ) ವನ್ನು ಮಾಡಬೇಕು. ಒಂದು ವೇಳೆ ಸನ್ನಿಪಾತ ಜ್ವರ ಉಂಟಾದರೆ ಸದಾಚಾರಿಯೂ, ಸುಶೀಲನೂ, ಬ್ರಹ್ಮಚಾರಿಯೂ, ಶ್ರೋತ್ರಿಯನೂ ಆದ ಗುರುಮೂರ್ತಿಯಿಂದ ಮೃತ್ಯುಂಜಯ ಜಪ ಮಾಡಿಸಿ ಸೂರ್ಯದಶಾ ರಾಹುಭುಕ್ತಿಯಲ್ಲಿ ತಿಳಿಸಿದಂತೆ ಎಮ್ಮೆಯನ್ನು ದಾನ ಮಾಡುವದರಿಂದ ಕ್ಷೇಮವಾಗುವದೆಂದು ಯಾಮಳ ತಂತ್ರದಲ್ಲಿ ಉಲ್ಲೇಖವಾಗಿದೆ.



## ಚಂದ್ರದಶಾ ಕುಜಭುಕ್ತಿಯಲ್ಲಿ ಕುಜ ಪ್ರೀತಿಕರ ನಾಗದಾನವು

ಜನನ ಕುಂಡಲಿಯಲ್ಲಿ ಕುಜನು 6–8–12 ಸ್ಥಾನಗಳಲ್ಲಿದ್ದರೆ ಅಥವಾ ಚಂದ್ರ ಲಗ್ನದಿಂದ ಕುಜನು 2–7 ಸ್ಥಾನಗಳಲ್ಲಿದ್ದರೆ ಪಾಪಗ್ರಹಗಳಿಂದ ಕೂಡಿದ್ದರೆ ಅಥವಾ ನೋಡಲ್ಪಟ್ಟರೆ ದೇಹ ಪೀಡೆಯು, ಸಂತಾಪವು, ಜ್ವರ, ಅತಿಸಾರ ರೋಗ ಪೀಡೆಯು, ಧನನಾಶವು, ಭ್ರಾತೃನಾಶವು, ಅಪಮೃತ್ಯು ಭಯವು. ಈ ದೋಷ ಪರಿಹಾರಕ್ಕಾಗಿ ನಾಗದಾನವನ್ನು ಮಾಡಬೇಕು.

ನಾಗದಾನ ವಿಧಾನ- ದೇವಾಲಯ ಅಥವಾ ನದೀ ತೀರ ಇತ್ಯಾದಿ ಸ್ಥಳ ಅಥವಾ ತನ್ನ ಮನೆಯಲ್ಲಿ ಗೋಮಯದಿಂದ ಸಮ್ಮಾರ್ಜನೆ ಮಾಡಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಪವಿತ್ರ ಸ್ಥಳದಲ್ಲಿ ಶುಚಿರ್ಭೂತನಾಗಿ ಭದ್ರಾಸನದಲ್ಲಿ ಕುಳಿತುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ "ಅಸ್ಯಾಂ ಶುಭತಿಥೌ ಮಮ ಇಹ ಜನ್ಮನಿ ಜನ್ಮಾಂತರೇಷು ಸರ್ವಾಲಂಕಾರ ಬಾಲಕವಧ, ಆಭರಣಾದಿ ಸಂಗ್ರಹ ದೋಷೇಣ ವಿಸರ್ಪರೋಗ, ನಿಧಾನ ಭೂತಾನಾಂ ಸರ್ವೇಷಾಂ ಪಾಪಾನಾಂ ಸಂಕ್ಷಯ ದ್ವಾರಾ ಶರೀರೇ ವರ್ತಮಾನ ವಿಸರ್ಪ ರೋಗಾದಿ ಸರ್ವರೋಗ ನಿವೃತ್ಯರ್ಥಂ ಆರೋಗ್ಯ ದೃಢಕಾಯ ತಯಾ ಶತ ವರ್ಷ ಜೀವಿತ್ವ ಸಿದ್ಧ್ಯರ್ಥಂ ಸರ್ವ ದೇವತಾ ಪ್ರೀತ್ಯರ್ಥಂ ಬೋಧಾಯನೋಕ್ತ ಪ್ರಕಾರೇಣ ನಾಗದಾನಂ ಕರಿಷ್ಯೆ. ನಾಗದಾನಾಂಗ ಪೂಜಾ, ವಾರುಣ ಪೂಜಾಹೋಮಂಚ ಕರಿಷ್ಯೇ ತದದೌ ಶ್ರೀ ಗಣಾಧಿ ಪತಿ ಪೂಜಾಂ ಕರಿಷ್ಯೇ ಎಂದು ಸಂಕಲ್ಪ ಮಾಡಬೇಕು.

ಯದತ್ರ ಸಂಸ್ಥಿತಂ ಭೂತಂ ಸ್ಥಾನಮಾಶ್ರಿತ್ಯ ಸರ್ವದಾ।
ಸ್ಥಾನಂ ತ್ಯಕ್ತ್ವಾ ತು ತತ್ಸರ್ವಂ ಯತ್ರಸ್ಥಂ ತತ್ರಗಚ್ಛತು॥

ಈ ಮಂತ್ರದಿಂದ ಸುತ್ತಲೂ ಬಿಳಿಯ ಸಾಸಿವೆಗಳನ್ನು ಎರಚಿ

"ಆಪೋಹಿಷ್ಠಾ ಮಯೋಭುವಸ್ತಾನ ಊರ್ಜೇದಧಾತನ।
ಮಹೇರಣಾಯ ಚಕ್ಷಸೇ ಯೋವಶ್ಶಿವ ತಮೋರಸಸ್ತಸ್ಯ ಭಾಜಯತೇ ಹನಃ
ಉಶತೀರಿವ ಮಾತರಃ। ತಸ್ಮಾಅರಂಗ ಮಾಮವೋ ಯಸ್ಯ
ಕ್ಷಯಾಯ ಜಿನ್ವಥ। ಆಪೋಜನ ಯಥಾಚನಃ॥

ಈ ಮಂತ್ರದಿಂದ ಜಲವನ್ನು ಸಿಂಪಡಿಸಿ ಬಳಿಕ ಪರಿಶುದ್ಧ ಪ್ರದೇಶದಲ್ಲಿ ರಂಗವಲ್ಲಿಯಿಂದ ಎರಡು ಅಷ್ಟದಳ ಕಮಲಗಳನ್ನು ಬರೆದು.

"ಮಹೀದ್ಯೌಃ ಪೃಥಿವೀಚನ ಇಮಂಯಜ್ಞಂ ಮಿಮಿಕ್ಷತಾಂಪಿಪೃತಾನ್ನೋ ಭರೀಮಭಿಃ॥"

ಈ ಮಂತ್ರವನ್ನು ಉಚ್ಚರಿಸುತ್ತ ತನ್ನ ಎರಡು ಕೈಗಳಿಂದ ದಕ್ಷಿಣೋತ್ತರ ಭೂಮಿಯನ್ನು ಮುಟ್ಟಿ ಆ ಸ್ಥಾನದಲ್ಲಿ

"ಓಷಧಯಃ ಸಂವದಂತೇ ಸೋಮೇನ ಸಹರಾಜ್ಞಾ।
ಯಸ್ಮೈ ಕೃಣೋತಿ ಬ್ರಾಹ್ಮಣಸ್ತಗ್ಂ ರಾಜನ್ ಪಾರಯಾಮಸಿ॥"

ಎಂದು ಉಚ್ಚರಿಸುತ್ತ ಆ ಕಮಲದ ಮೇಲೆ ಎರಡು ಬಾಳೆಯ ಎಲೆಗಳನ್ನು ಹಾಸಿ

"ಯೇನತೇವ ಕಾಯತನಯಾಯ ಧಾನ್ಯಂ ಬೀಜಂ ವಹದ್ವೇ ಅಕ್ಷಿತಂ।
ಅಸ್ಥಭ್ಯಂ ತದ್ದತ್ತ ನಯದ್ವಈ ಮಹೇರಾಧೋ ವಿಶ್ವಾಯ ಸೌಭಗಂ॥"

ಈ ಮಂತ್ರದಿಂದ ಎಲೆಗಳ ಮೇಲೆ ಬಳ್ಳ (1 ಸೇರು) ಪ್ರಮಾಣದ ಎರಡು ಅಕ್ಕಿಯ ಗುಡ್ಡೆಗಳನ್ನು ರಚಿಸಿ

"ಆಕಲಶೇಷು ಧಾವತಿಶ್ಯೇನೋ ವರ್ಮ ವಿಗಾಹತೇ।
ಅಭಿದ್ರೋಣಾ ಕನಿಕ್ರದತ್॥"

ಎಂದು ಅನ್ನುತ್ತ ಅಕ್ಕಿಯ ಗುಂಪೆಗಳ ಮೇಲೆ ತಾಮ್ರದ ಕಲಶ (ತಂಬಿಗೆ) ಗಳನ್ನು ಸ್ಥಾಪಿಸಿ

"ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಗ್ಂ ಸಚತಾ
ಪುರುಷ್ಣಿಯಾ। ಅಸಿಕ್ನಿಯಾ ಮರುದ್ವೃಧೇ ವಿತಸ್ತಯಾರ್ಜೀ
ಕೀಯೇ ಶೃಣುಹ್ಯಾಸುಷೋ ಮಯಾ"॥

ಎಂದು ಉಚ್ಚರಿಸುತ್ತ ಆ ಕಲಶಗಳಲ್ಲಿ ನೀರನ್ನು ತುಂಬಿ

"ಗಂಧದ್ವಾರಾಂ ದುರಾಧರ್ಷಾಗ್ಂ ನಿತ್ಯ ಪುಷ್ಟಾಂ ಕರೀಷಿಣೀಂ।
ಈಶ್ವರೀಗ್ಂ ಸರ್ವಭೂತಾನಾಂ ತಾಮಿ ಹೋಪ ಹ್ವಯೇ ಶ್ರಿಯಂ"॥

ಈ ಮಂತ್ರದಿಂದ ಕಲಶಗಳಲ್ಲಿ ಗಂಧವನ್ನು ಹಾಕಿ ಹಾಗೂ ಮೇಲೆಯೂ ಧರಿಸಿ ಪುಷ್ಪಮಾಲಿಕೆಗಳಿಂದ ಅಲಂಕರಿಸಿ

"ಕಾಂಡಾತ್ಕಾಂಡಾ ತ್ಪ್ರರೋಹಂತಿ ಪರುಷಃ ಪರುಷಃ ಪರಿ।
ಏವಾನೋ ದೂರ್ವೇ ಪ್ರತನು ಸಹಸ್ರೇಣ ಶತನ..."

ಈ ಮಂತ್ರದಿಂದ ದರ್ಭೆಗಳನ್ನು ಇಟ್ಟು

"ಓಂ ಅಶ್ವತ್ಥೇವೋ ನಿಷದನಂ ಪರ್ಣೇವೋ ವಸತಿ ಷ್ಕೃತಾ।
ಗೋಭಾಯ ಇತ್ಕಿಲಾ ಸಥ ಯತ್ಸನವಥ ಪೂರುಷಮ್"॥

ಈ ಮಂತ್ರದಿಂದ ಮಾವು, ಆಲ, ಅರಳೆ, ಅತ್ತಿ ಹುಣಸೆ ಈ ಪಂಚ ಪಲ್ಲವ (ಎಲೆ) ಗಳನ್ನು ಇಟ್ಟು

"ಹಿರಣ್ಯರೂಪಸ್ಸಹಿರಣ್ಯ ಸಂದೃಗಪಾನ್ನಪಾತ್ಸೇದು ಹಿರಣ್ಯ ವರ್ಣಃ।
ಹಿರಣ್ಯಯಾತ್ಪರ್ರಿಯೋ ನೇರ್ನಿಷದ್ಯಾ ಹಿರಣ್ಯದಾದದತ್ಯನ್ನ ಮಸ್ಮೈ" ॥

ಈ ಮಂತ್ರದಿಂದ ಕಲಶಗಳಲ್ಲಿ ಸುವರ್ಣವನ್ನು ಹಾಕಿ

"ತಂತುಂ ತನ್ವನ್ ರಜಸೋಭಾನು ಮನ್ವಿಹಿ। ಜ್ಯೋತಿಷ್ಮತಃ ಪಥೋ
ರಕ್ಷಿಧಿಯಾ ಕೃತಾನ್। ಅನುಲ್ಬಣಂ ಪಯಸ ಜೋಗುವಾ
ಮಪೋಮನುರ್ಭವ ಜನಯಾ ದೈವ್ಯಂ ಜನಂ" ॥

ಎಂದು ಉಚ್ಚರಿಸುತ್ತ ಕಲಶಗಳಿಗೆ ಬಿಳಿಯ ದಾರವನ್ನು ಸುತ್ತಬೇಕು

"ಪೂರ್ಣಾ ದರ್ವಿ ಪರಾಪತ ಸುಪೂರ್ಣಾ ಪುನಾರಾಪತ ವಸ್ನೇವ
ವಿಕ್ರೀಣಾವಹ ಇಷಮೂರ್ಜಗ್ಂ ಶತಕ್ರತೋ" ॥

ಈ ಮಂತ್ರವನ್ನು ಅನ್ನುತ್ತ ಎರಡೂ ಕಲಶಗಳ ಮೇಲೆ ಅಕ್ಕಿಯಿಂದ ತುಂಬಿದ ಹರವಾದ ತಾಮ್ರದ ಪಾತ್ರೆ (ತಾಟು) ಗಳನ್ನು ಇಟ್ಟು ಅವುಗಳಲ್ಲಿ ಒಂದು ಪಾತ್ರೆಯಲ್ಲಿ ಬಂಗಾರದ ನಾಗ ಪ್ರತಿಮೆಯನ್ನು ಸ್ಥಾಪನೆ ಮಾಡಬೇಕು. ನಾಗವು ಐದು ಹೆಡೆಗಳುಳ್ಳದ್ದಿದ್ದು ಐದೂ ಹೆಡೆಗಳಲ್ಲಿ ಐದು ರತ್ನಗಳನ್ನು ಕೂಡ್ರಿಸಬೇಕು. ಬಾಲದಲ್ಲಿ ಪುಷ್ಯರಾಗವನ್ನೂ, ಎರಡು ಕಣ್ಣುಗಳು ಮತ್ತು ಬಾಯಿಯಲ್ಲಿ ಮೂರು ರತ್ನಗಳನ್ನು ಕೂಡ್ರಿಸಿ ಕುಂಕುಮದಿಂದ ನಾಗನ ಸರ್ವಾಂಗಕ್ಕೆ ಲೇಪನ ಮಾಡಬೇಕು. ಈ ಪ್ರಕಾರ ಇರುವ ನಾಗನನ್ನು ಓಂಭೂಃ ಸರ್ಪಮಾವಾಹಯಾಮಿ, ಓಂ ಭುವಃ ಸರ್ಪಮಾವಾಹಯಾಮಿ, ಓಂಸುವಃ ಸರ್ಪಮಾವಾಹಯಾಮಿ, ಓಂ ಭೂರ್ಭುವಃ ಸ್ವಃ ಭಗವಾನ್ ಸರ್ಪಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ ಎಂದು ಅಕ್ಷತೆಗಳನ್ನು ಹಾಕಬೇಕು. ನಂತರ ಶುದ್ಧೋದಕ, ಭಸ್ಮ, ಗಂಧ, ಕುಂಕುಮ, ಅಕ್ಷತೆ, ಪತ್ರಿ, ಪುಷ್ಪ, ಧೂಪ, ದೀಪ ನೈವೇದ್ಯ, ತಾಂಬೂಲ, ದಕ್ಷಿಣೆ ಮೊದಲಾದವುಗಳಿಂದ ಪೂಜಿಸಬೇಕು. ನಂತರ,

ನಮೋ ಅಸ್ತು ಸರ್ಪೇಭ್ಯೋ ಯೇಕೇಚ ಪೃಥಿವೀಮನು।
ಯೇಽಂತರಿಕ್ಷೇ ಅಯೇ ದಿ ವಿತೇಭ್ಯಃ ಸರ್ಪೇಭ್ಯೋ ನಮಃ॥

ಎಂದು ಸರ್ಪದೇವನನ್ನು ಪ್ರಾರ್ಥಿಸಬೇಕು.

ಬಳಿಕ ಉತ್ತರ ದಿಕ್ಕಿನ ಕಡೆಗೆ ಇರುವ ಮತ್ತೊಂದು ಕಲಶದ ಮೇಲೆ ಬಂಗಾರದ ವಾರುಣ ಪ್ರತಿಮೆಯನ್ನು ಸ್ಥಾಪಿಸಿ ಪೂಜಿಸಬೇಕು.

ಓಂ ಭೂಃ ವಾರುಣ ದೇವಾಯ ನಮಃ, ಓಂ ಭುವಃ ವಾರುಣ ದೇವಾಯ ನಮಃ, ಓಂ ಸ್ವಃ ವಾರುಣ ದೇವಾಯ ನಮಃ, ಓಂ ಭೂರ್ಭುವಃ ಸ್ವಃ ಭಗವಾನ್ ವಾರುಣದೇವಾಯ ನಮಃ ಸ್ಥಾಪಯಾಮಿ, ಪೂಜಯಾಮಿ

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಿ ಷೋಡಶೋಪಚಾರಗಳಿಂದ ಪೂಜಿಸಬೇಕು. ನಂತರ ಅಗ್ನಿಯನ್ನು ಪ್ರತಿಷ್ಠಾಪಿಸಿ ಫಾಲಾಶಶಮಿತ್ತು ಆಜ್ಯಹೋಮ ತಿಲಹೋಮವನ್ನು ಅಷ್ಟೋತ್ತರ ಶತಸಂಖ್ಯೆಯಷ್ಟು ಮಾಡಿ ಸಮಾಪ್ತಿಗೊಳಿಸಬೇಕು.

ಬಳಿಕ ಪುರೋಹಿತನು ಕಲಶದಲ್ಲಿರುವ ಜಲದಿಂದ ಕೆಳಗಿನ ಮಂತ್ರಗಳನ್ನು ಪಠಿಸುತ್ತ ಯಜಮಾನನ ಮಸ್ತಕಕ್ಕೆ ಪ್ರೋಕ್ಷಣೆ ಮಾಡಬೇಕು.

ಮಂತ್ರ- ಆಪೋಹಿಷ್ಠಾ ಮಯೋಭುವ ಸ್ಥಾನ ಊರ್ಜೇದಧಾತನ। ಮಹೇರಣಾಯ
ಚಕ್ಷಸೇ ಯೋವಃ ಶಿವತಮೋರಸಸ್ತಸ್ಯ ಭಾಜಯತೇ ಹನಃ। ಉಶತೀರಿವ
[illegible]ಂಗ ಮಾಮವೋ ಯಸ್ಯಕ್ಷಯಾಯ ಜಿನ್ವಥ।
ಆಪೋಜನ ಯಥಾಚನಃ॥

ಮತ್ತು ಪವಮಾನ ಸೂಕ್ತವನ್ನೂ ಸಹ ಪಠಿಸಬೇಕು.

ಈ ಪ್ರಕಾರ ಯಜಮಾನನ ಮಸ್ತಕಕ್ಕೆ ಜಲಪ್ರೋಕ್ಷಣೆ ಮಾಡಿದ ನಂತರ ಆತನು ತನ್ನ ಬಟ್ಟೆಗಳನ್ನೆಲ್ಲ ಬಿಟ್ಟು ಬೇರೆ ಬಿಳಿಯ ಬಟ್ಟೆಗಳನ್ನು ಧರಿಸಿಕೊಂಡು ಭಸ್ಮ, ಗಂಧ, ಪುಷ್ಪ ಮಾಲ್ಯಾದಿಗಳನ್ನು ಧರಿಸಿಕೊಂಡು ಆಚಾರ್ಯನನ್ನು ಅಥವಾ ಜಂಗಮ ಮೂರ್ತಿಯನ್ನು ಪೂಜಿಸಿ, ಸತ್ಕರಿಸಿ ಎರಡೂ ಕೈಗಳಲ್ಲಿ (ಪುಷ್ಪಾಂಜಲಿ) ಪುಷ್ಪಗಳನ್ನು ಹಿಡಿದುಕೊಂಡು ಸರ್ಪನಿಗೆ ಮೂರುಸಾರೆ ಪ್ರದಕ್ಷಿಣೆ ಹಾಕಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ನಾಗಪ್ರತಿಮೆಯನ್ನೂ ವಾರುಣ ಪ್ರತಿಮೆಯನ್ನೂ ಕಲಶವನ್ನೂ ಸಹಿತ ದಕ್ಷಿಣೆ ಸಹಿತ ದಾನ ಮಾಡಬೇಕು.

ಮಂತ್ರ- ಯೋದತ್ತೇ ಪೃಥಿವೀಕೃತ್ಸ್ನಾಂ ಸಶೈಲ ವನಕಾನನಾಂ।
ಕ್ಷೀರಬ್ಧೌ ಯಶ್ಚಶಯ್ಯಾಚ ವಾಸುದೇವಸ್ಯ ಶಾರ್ಙ್ಗಿಣಃ।
ಸ್ವೇನದಾನೇನ ರೋಗೋಪೌತುಷ್ಟೋ ವ್ಯಾಧಿಂವ್ಯ ಪೋಹತು।
ತೈಸರ್ಪಿಕ ವಿಕಾರಂತು ತದ್ದೋಷ ಜನಿತಂ ತಥಾ।
ರಕ್ತ ರೇತೋದ್ಭವಂ ವಾಪಿ ಮಾತೃತಃ ಪಿತೃತಸ್ತಥಾ।
ಅಂಗಪ್ರತ್ಯಂಗಜಂ ಸರ್ವಂ ವಿಕಾರಂ ಮೇವ್ಯಪೋಹತು।
ಅಸ್ಮೈ ಅಹಂ ಇಮಾಂ ಭೂಭಾಗೋ ಪರಿವಿನ್ಯಸ್ತ।
ಸರ್ವಾಲಂಕಾರ ಸಹಿತನಾಗಂ ಮಮಪೂರ್ವೋಕ್ತ ಫಲಕಾಮ
ಸ್ತುಭ್ಯಮಿದಂ ಸಂಪ್ರದದೇ ನಮಮ, ನಮಮ॥

ಎಂದು ಉಚ್ಚರಿಸಿ ದಾನ ಕೊಟ್ಟು ನಮಸ್ಕರಿಸಬೇಕು. ಬಳಿಕ ಗಣಾರಾಧನೆ ಮಾಡಿಸಬೇಕು ಮತ್ತು ಅವರ ಆಶೀರ್ವಾದ ಪಡೆಯಬೇಕು ಎಂದು ಬೋಧಾಯನದಲ್ಲಿ ಉಕ್ತವಾಗಿದೆ.



## ಚಂದ್ರದಶಾ ರಾಹುಭುಕ್ತಿಯಲ್ಲಿ ರಾಹು ಪ್ರೀತಿಕರ ಛಾಗ ದಾನವು

ಚಂದ್ರದಶಾ ರಾಹು ಭುಕ್ತಿಯಲ್ಲಿ ರಾಹು ಜನನ ಲಗ್ನ ಕುಂಡಲಿಯಲ್ಲಿ ದುಷ್ಟ ಸ್ಥಾನಗಳಲ್ಲಿದ್ದು ಕ್ರೂರನಾಗಿದ್ದರೆ ವಿಷ ಜಂತು ಭಯವು, ಧನ ಹಾನಿಯು, ಸ್ಥಾನ ಭ್ರಂಶವು ರಕ್ತಸ್ರಾವವು, ಮೂತ್ರ ರೋಗವು, ಸ್ತ್ರೀ ಸಂಬಂಧ ಕಲಹವು, ಇತ್ಯಾದಿ ಅನಿಷ್ಟ ಫಲಗಳುಂಟಾಗುವವು. ಇವುಗಳ ಪರಿಹಾರಕ್ಕಾಗಿ ಸೂರ್ಯದಶಾ ಶನಿಭುಕ್ತಿಯಲ್ಲಿ ತಿಳಿಸಿದಂತೆ ಛಾಗ (ಮೇಕೆ) ದಾನ ಮಾಡುವದರಿಂದ ಸರ್ವ ಅರಿಷ್ಟಗಳು ನಿವೃತ್ತಿಯಾಗುವವು.



## ಚಂದ್ರದಶಾ ಗುರುಭುಕ್ತಿಯಲ್ಲಿ ಗುರುಪ್ರೀತಿಕರ ದುರ್ಗಾ ದಾನವು

ಚಂದ್ರದಶಾ ಗುರುಭುಕ್ತಿಯಲ್ಲಿ ಗುರುವು ದುಷ್ಟ ಸ್ಥಾನಗತನಾಗಿದ್ದರೆ ಮನೋವ್ಯಥೆಯು, ದಾಯಾದ್ಯರ ಕಲಹವು, ಗೃಹನಾಶವು, ಶೀತಜ್ವರದಿಂದ ಅಪಮೃತ್ಯು ಭಯವು, ಶತ್ರು ಭಯವು, ಈ ದೋಷ ನಿವಾರಣೆಗಾಗಿ ದುರ್ಗಾ ದಾನವನ್ನು ಮಾಡಬೇಕು. ಈ ಮಹತ್ತರವಾದ ದುರ್ಗಾ ದಾನ ಮಾಡುವದರಿಂದ ಸರ್ವಪಾಪ ನಾಶವು, ಶತ್ರುನಾಶವು, ಮಹಾವ್ಯಾಧಿ, ಮೃತ್ಯುಭಯ ನಿವಾರಣೆಯು, ವೈರಿಗಳಿಂದ ಮಾಡಿಸಲ್ಪಟ್ಟ ಯಂತ್ರ, ಮಂತ್ರ, ಮಾಟ, ಮಾರಣಗಳಿಂದ ಉಂಟಾದ ಅರಿಷ್ಟ ನಾಶವು. ಮನೆಯಲ್ಲಿ ಉದ್ಭವಿಸಿದ ಸರ್ವಪೀಡೆಗಳು, ಉತ್ಪಾತ ಭಯವು ಸರ್ವ ದುರ್ಗತಿಗಳು ಸಂಹಾರವಾಗುವವಲ್ಲದೆ ವೈರಿಯು ನಾಶವಾಗುವನು.

ಕೃಷ್ಣ ಪಕ್ಷದ ಚತುರ್ಥಿ, ಅಷ್ಟಮಿ, ಚತುರ್ದಶಿ ತಿಥಿಗಳಲ್ಲಿ ಆದಿತ್ಯವಾರ, ಮಂಗಳವಾರಗಳಲ್ಲಿ ದೇವಾಲಯ ಅಥವಾ ತನ್ನ ಮನೆಯಲ್ಲಿ ಭೂಮಿಯನ್ನು ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಪವಿತ್ರ ಸ್ಥಳದಲ್ಲಿ ಯಜಮಾನನು ಶುಚಿರ್ಭೂತನಾಗಿ ಭದ್ರಾಸನದಲ್ಲಿ ಕುಳಿತು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ "ಅಸ್ಯಾಂಶುಭತಿಥೌ ಮಮಸಮಸ್ತಪಾಪ ನಿರ್ಮುಕ್ತ್ಯರ್ಥಂ, ಪರಕೃತ ಯಂತ್ರ, ಮಂತ್ರ, ತಂತ್ರ ಸಂಭೂತಾನಾ ಮನಿಷ್ಟ ವಿನಾಶನ ಪೂರ್ವಕ ಆಯುರಾರೋಗ್ಯ ಸಂಪತ್ ಪ್ರಾಪ್ತ್ಯರ್ಥಂ ಶ್ರೀ ದುರ್ಗಾದಾನಂ ಪೂಜಾಂಚಕರಿಷ್ಯೇ ತದಾದೌ ಶ್ರೀ ಮಹಾಗಣಪತಿ ಪೂಜಾಂ ಕರಿಷ್ಯೇ" ಎಂದು ಸಂಕಲ್ಪ ಮಾಡಿ ಗಣಪತಿ ಪೂಜೆಯನ್ನು ಮಾಡಿದ ಬಳಿಕ ರಂಗವಲ್ಲಿಯಿಂದ ಒಂದು ದೊಡ್ಡ ಚೌಕೋನವನ್ನು ರಚಿಸಿ, ಅದರ ತುಂಬೆಲ್ಲ ಭತ್ತವನ್ನು ಹರಡಿ ಅದರಲ್ಲಿ8 ದಿಕ್ಕುಗಳಿಗೆ

ಎಂಟು ಮಧ್ಯದಲ್ಲಿ ಒಂದು – ಹೀಗೆ ಒಂಭತ್ತು ಕಮಲಗಳನ್ನು ರಚಿಸಿ ಅವುಗಳಲ್ಲಿ ಮಧ್ಯದ ಕಮಲದ ಮೇಲೆ ಒಂದು ಕೆಂಪು ವಸ್ತ್ರವನ್ನು ಹರವಿ ಅದರ ಮೇಲೆ ಒಂದು ಮಣ್ಣಿನ ಅಥವಾ ತಾಮ್ರದ ಕಲಶವನ್ನು ಸ್ಥಾಪಿಸಬೇಕು.

ಯದತ್ರಸಂಸ್ಥಿತಂ ಭೂತಂ ಸ್ಥಾನಮಾಶ್ರಿತ್ಯ ಸರ್ವದಾ।
ಸ್ಥಾನಂತ್ಯಕ್ತ್ವಾ ತು ತತ್ಸರ್ವಂ ಯತ್ರಸ್ಥಂ ತತ್ರಗಚ್ಛತು॥

ಈ ಮಂತ್ರದಿಂದ ಸುತ್ತಲೂ ಬಿಳಿಯ ಸಾಸಿವೆಗಳನ್ನು ಎರಚಿ

ಆಪೋಹಿಷ್ಠಾಮಯೋಭು ವಸ್ತಾನ ಊರ್ಜೇದಧಾತನ। ಮಹೇರಣಾಯ ಚಕ್ಷಸೇ ಯೋವಶ್ಯಿವತಮೋರ ಸಸ್ತಸ್ಯಭಾಜಯತೇ ಹನಃ ಉಶತೀರಿವ ಮಾತರಃ। ತಸ್ಮಾಅರಂಗ ಮಾಮವೋಯಸ್ಯ ಕ್ಷಯಾಯ ಜಿನಥ್ವ। ಆಪೋಜನಯಥಾಚನಃ॥

ಈ ಮಂತ್ರದಿಂದ ಜಲವನ್ನು ಸಿಂಪಡಿಸಿ

"ಮಹೀದ್ಯೌಃ ಪೃಥಿವೀಚನ.........ಭರೇಮಭಿಃ" ॥

ಈ ಮಂತ್ರದಿಂದ ದಕ್ಷಿಣ, ಉತ್ತರ ದಿಕ್ಕುಗಳ ಭೂಮಿಯನ್ನು ಮುಟ್ಟಿ

("ಓಷಧಯಃ..........ರಾಜನ್ ಪಾರಯಾಮಸಿ॥)

ಈ ಮಂತ್ರದಿಂದ ಬಾಳೆಯ ಎಲೆಯನ್ನು ಹಾಸಿ

("ಯೇನತೋ ಕಾಯ ವಿಶ್ವಾಯ ಸೌಭಗಂ" ॥)

ಈ ಮಂತ್ರದಿಂದ ಅಕ್ಕಿಯ (ಭತ್ತದ) ಗುಂಪೆಯನ್ನು ಹಾಕಿ

("ಆಕಲಶೇಷು ಧಾವತಿ.............ಕನಿಕ್ರದತ್" ॥)

ಈ ಮಂತ್ರದಿಂದ ಅಕ್ಕಿಯ ಗುಂಪೆಯ ಮೇಲೆ ಕಲಶವನ್ನು ಸ್ಥಾಪಿಸಿ

("ಇಮಂಮೇ............ಸುಷೋಮಯಾ॥)

ಈ ಮಂತ್ರದಿಂದ ಕಲಶದಲ್ಲಿ ಜಲವನ್ನು ತುಂಬಿ

("ಗಂಧದ್ವಾರಾಂ.........ಹ್ವಯೇಶ್ರಿಯಂ" ॥)

ಈ ಮಂತ್ರದಿಂದ ಕಲಶದಲ್ಲಿ ಗಂಧವನ್ನು ಹಾಕಿ ಹಾಗೂ ಮೇಲೆಯೂ ಧರಿಸಿ ಪುಷ್ಪ ಮಾಲಿಕೆಗಳಿಂದ ಅಲಂಕರಿಸಿ

("ಯಾ ಓಷಧೀಃ...............ಶತಂ ಧಾಮಾನಿ ಸಪ್ತಚ" ॥)

ಈ ಮಂತ್ರದಿಂದ ಕಲಶದಲ್ಲಿ ಶತೌಷಧಿಗಳನ್ನು ಹಾಕಿ

("ಕಾಂಡಾತ್ಕಾಂಡಾ..............ಸಹಸ್ರೇಣಶತೇನಚ" ॥)

ಈ ಮಂತ್ರದಿಂದ ದರ್ಭೆಗಳನ್ನು ಇಟ್ಟು

("ಅಶ್ವತ್ಥೇವೋ ನಿಷದನಂ............ಯತ್ಸುನವಥ ಪೂರುಷಂ॥")
ಈ ಮಂತ್ರದಿಂದ ಪಂಚಪಲ್ಲವಗಳನ್ನು ಇಟ್ಟು
("ಹಿರಣ್ಯರೂಪಃ............ದಾದದತ್ಯನ್ನಮಸ್ಮೈ"॥)
ಈ ಮಂತ್ರದಿಂದ ಬಂಗಾರವನ್ನು ಹಾಕಿ
("ತಂತುಂತನ್ವನ್ ರಜಸೋ............ಜನಯಾ ದೈವ್ಯಂಜನಂ"॥)
ಈ ಮಂತ್ರದಿಂದ ಕಲಶಗಳಿಗೆ ಬಿಳಿಯ ದಾರವನ್ನು ಸುತ್ತಿ
("ಯುವಾಸುವಾಸಾಃ............ಮನಸಾ ದೇವಯಂತಃ"॥)
ಈ ಮಂತ್ರದಿಂದ ಕೆಂಪು ವಸ್ತ್ರಗಳನ್ನು ಧರಿಸಿ

ಗಂಗೇಚ ಯಮನೇಚೈವ ಗೋದಾವರಿ ಸರಸ್ವತಿ।
ನರ್ಮದೇ ಸಿಂಧು ಕಾವೇರಿ ಜಲೇಽ ಸ್ಮಿನ್ ಸನ್ನಿಧಿಂಕುರು॥
ಕಲಶಸ್ಯ ಮುಖೇರುದ್ರಃ ಕಂಠೇ ವಿಷ್ಣುಃ ಸಮಾಶ್ರಿತಃ।
ಮೂಲೇತತ್ರಸ್ಥಿತೋ ಬ್ರಹ್ಮಾ ಮಧ್ಯೇಮಾತೃಗಣಾಃ ಸ್ಮೃತಾಃ॥
ಸರ್ವೇಸಮುದ್ರಃ ಸರಿತಸ್ತೀರ್ಥಾನಿ ಜಲದಾನದಾಃ।
ಆಯಾಂತು ಮಮಶಾಂತ್ಯರ್ಥ ದುರಿತಕ್ಷಯ ಕಾರಕಾಃ॥
ಈ ಮಂತ್ರದಿಂದ ಕಲಶವನ್ನು ಮುಟ್ಟಿ ಜಪಿಸಿ
"ಪೂರ್ಣಾದರ್ವೀ ಪರಾಪತ ಸುಪೂರ್ಣಾ ಪುನರಾಪತವಸ್ನೇವ
ವಿಕ್ರೀಣಾವಹ ಇಷಮೂರ್ಜಗ್ಂ ಶತಕ್ರತೋ" ॥

ಈ ಮಂತ್ರದಿಂದ ಕಲಶದ ಮೇಲೆ ಅಕ್ಕಿಯಿಂದ ತುಂಬಿದ ಹರವಾದ ಪಾತ್ರೆ (ತಾಟು) ಯನ್ನು ಇಟ್ಟು ಅದರಲ್ಲಿಸರ್ವಲಕ್ಷಣಗಳಿಂದ ಕೂಡಿದ ಬೆಳ್ಳಿಯ ಎಮ್ಮೆಯನ್ನೂ, ಆ ಎಮ್ಮೆಯನ್ನು ಆ ವಾಹನವಾಗಿ ಮಾಡಿಕೊಂಡು ಕೈಯಲ್ಲಿ ಖಡ್ಗ, ತ್ರಿಶೂಲಗಳನ್ನು ಹಿಡಿದುಕೊಂಡು ವರದ ಹಸ್ತವುಳ್ಳವಳಾಗಿ ಕೊರಳಲ್ಲಿ ಆಭರಣ ರತ್ನಹಾರ, ಕಿರೀಟ ಧಾರಣ ಮಾಡಿಕೊಂಡಿರುವ ಬಂಗಾರದ ದೇವಿಯ ಪ್ರತಿಮೆಯನ್ನೂ ಸ್ಥಾಪಿಸಬೇಕು ಮತ್ತುಮೂರ್ತಿಗೆ ಷೋಡಶೋಪಚಾರಗಳಿಂದ ಪೂಜಿಸಿರಬೇಕು.

ಧ್ಯಾನಂ- ದುರ್ಗಾಂ ಭಗವತೀಂ ಧ್ಯಾಯೇನ್ಮೂಲ ಮಂತ್ರಾಧಿ ದೇವತಾಂ।
ವಾಣೀಂ ಲಕ್ಷ್ಮೀ ಮುಮಾಂ ಮಹಾಮಾಯಾಂ ವಿಚಿಂತಯೇತ್॥
ಮಹಿಷಘ್ನೀಂ ದಶಭುಜಾಂ ಕುಮಾರೀಂ ಮಹಿಷಿವಾಹನೀಂ।
ದಾನವಾಂಸ್ತರ್ಜಯಂತೀಂ ಚ ಸರ್ವಕಾಮದುಘಾಂ ಶಿವಾಂ॥
ಶ್ರೀ ದುರ್ಗಾಯೈ ನಮಃ, ಧ್ಯಾನಂ ಸಮರ್ಪಯಾಮಿ॥
ಎಂದು ನಮಸ್ಕರಿಸಬೇಕು

ಆವಾಹನಂ- ವಾಕ್-ಶ್ರೀ-ದುರ್ಗಾದಿರೂಪೇಣ ವಿಶ್ವಮಾವೃತ್ಯತಿಷ್ಠತಿ।
ಆವಾಹಯಾಮಿ ತ್ವಾಂ ದೇವಿ ಸಮ್ಯಕ್ ಸನ್ನಿಹಿತಾಭವ॥
ಶ್ರೀ ದುರ್ಗಾಯೈ ನಮಃ, ಆವಾಹನಂ ಸಮರ್ಪಯಾಮಿ॥

ಆಸನಂ- ಭದ್ರಕಾಳಿ ನಮಸ್ತೇಽಸ್ತು ಭಕ್ತಾನಾ ಮೀಪ್ಸಿತಾರ್ಥದೇ।
ಸ್ವರ್ಣ ಸಿಂಹಾಸನಂ ಚಾರು ಪ್ರೀತ್ಯರ್ಥಂ ಪ್ರತಿಗೃಹ್ಯತಾಂ॥
ಶ್ರೀ ದುರ್ಗಾಯೈ ನಮಃ, ಆಸನಂ ಸಮರ್ಪಯಾಮಿ॥
ಎಂದು ಆಸನವನ್ನು ಮುಟ್ಟಬೇಕು.

ಸ್ವಾಗತಂ- ಸರ್ವಸ್ವರೂಪೇ ಸರ್ವೇಶಿ ಸರ್ವಶಕ್ತಿ ಸಮನ್ವಿತೇ।
ಕೃತಾಂಜಲಿ ಪುಟೋ ಭಕ್ತ್ಯಾ ಸ್ವಾಗತಂ ಕಲ್ಪಯಾಮ್ಯಹಂ॥
ಶ್ರೀ ದುರ್ಗಾಯೈ ನಮಃ, ಸ್ವಾಗತಂ ಸಮರ್ಪಯಾಮಿ॥
ಎಂದು ಸ್ವಾಗತ ಮಾಡಬೇಕು

ಅರ್ಘ್ಯ-ಪಾದ್ಯ-ಆಚಮನ- ಮಹಾಲಕ್ಷ್ಮೀ ಮಹಾ ಮಾಯೇ ಮಹಾ ವಿದ್ಯಾಸ್ವರೂಪಿಣಿ
ಅರ್ಘ್ಯಪಾದ್ಯಾಚಮಾನ್ ದೇವಿ ಗೃಹಾಣಪರಮೇಶ್ವರಿ॥
ಶ್ರೀ ದುರ್ಗಾಯೈ ನಮಃ, ಅರ್ಘ್ಯ-ಪಾದ್ಯ-ಆಚಮನಾನಿ ಸಮರ್ಪಯಾಮಿ॥
ಎಂದು ಅರ್ಘ್ಯ, ಪಾದ್ಯ, ಆಚಮನಗಳನ್ನು ಸಮರ್ಪಿಸಬೇಕು

ಮಧುಪರ್ಕಂ- ದೂರ್ವಾಂಕುರ ಸಮಾಯುಕ್ತಂ ಗಂಧಾದಿ ಸುಮನೋಹರಂ।
ಮಧುಪರ್ಕಂ ಮಯಾದತ್ತಂ ನಾರಾಯಣಿ ನಮೋಽಸ್ತುತೇ॥
ಶ್ರೀ ದುರ್ಗಾಯೈ ನಮಃ, ಮಧುಪರ್ಕಂ ಸಮರ್ಪಯಾಮಿ॥
ಎಂದು ಮಧುಪರ್ಕವನ್ನು ಸಮರ್ಪಿಸಬೇಕು

ಪಂಚಾಮೃತ ಸ್ನಾನಂ- ಸ್ನಾನಂ ಪಂಚಾಮೃತಂ ದೇವಿ ಭದ್ರಕಾಳಿ ಜಗನ್ಮಯೀ।
ಭಕ್ತ್ಯಾನಿವೇದಿತಂ ತುಭ್ಯಂ ವಿಶ್ವೇಶ್ವರಿ ನಮೋಽಸ್ತುತೇ॥
ಶ್ರೀ ದುರ್ಗಾಯೈ ನಮಃ, ಪಂಚಾಮೃತ ಸ್ನಾನಂ ಸಮರ್ಪಯಾಮಿ॥
ಎಂದು ಪಂಚಾಮೃತವನ್ನು ಸಮರ್ಪಿಸಬೇಕು

ಶುದ್ಧೋದಕಂ-ಗಂಗಾ ಸರಸ್ವತೀ ರೇವಾ ಕಾವೇರಿ ನರ್ಮದಾ ಜಲೈಃ॥
ಸ್ನಾಪಿತಾಸಿ ಮಯಾದೇವಿ ತಥಾ ಶಾಂತಿಂಕುರುಷ್ವಮೇ॥
ಶ್ರೀ ದುರ್ಗಾಯೈ ನಮಃ, ಶುದ್ಧೋದಕ ಸ್ನಾನಂ ಸಮರ್ಪಯಾಮಿ॥
ಎಂದು ಶುದ್ಧ ಜಲದಿಂದ ಅಭಿಷೇಕಿಸಬೇಕು

ವಸ್ತ್ರಂ- ಸರ್ವಭೂಷಾದಿಕೇ ಸೌಮ್ಯೇ ಲೋಕಲಜ್ಜಾ ನಿವಾರಣೇ ||
ವಾಸಸೀ ಪ್ರತಿಗೃಹ್ಯೇತಾಂ ಮಯಾತುಭ್ಯಂ ಸಮರ್ಪಿತೇ ||
ಶ್ರೀ ದುರ್ಗಾಯೈ ನಮಃ, ವಸ್ತ್ರಂ ಸಮರ್ಪಯಾಮಿ ||
ಎಂದು ಸೀರೆಯನ್ನು ಧರಿಸಬೇಕು

ಕಂಚುಕೀಧಾರಣಂ- ನವರತ್ನಾದಿ ಭಿರ್ಬದ್ಧಾಂ ಸೌವರ್ಣೇನಚ ತಂತುಭಿಃ
ನಿರ್ಮಿತಾಂ ಕಂಚುಕೀಂ ಭಕ್ತ್ಯಾಗೃಹಾಣ ಪರಮೇಶ್ವರೀ ||
ಶ್ರೀ ದುರ್ಗಾಯೈ ನಮಃ, ಕಂಚುಕೀ[illegible] ||
ಎಂದು ಕುಪ್ಪಸವನ್ನು ಧರಿಸಬೇಕು

ಮಂಗಲಸೂತ್ರಂ- ಮಾಂಗಲ್ಯಮಣಿ ಸಂಯುಕ್ತ ಮುಕ್ತಾಫಲ ಸಮನ್ವಿತಂ |
ದತ್ತಂ ಮಂಗಲ ಸೂತ್ರಂತೇ ಗೃಹಾಣ ಶಿವವಲ್ಲಭೇ ||
ಶ್ರೀ ದುರ್ಗಾಯೈ ನಮಃ, ಕಂಠಸೂತ್ರಂ ಸಮರ್ಪಯಾಮಿ ||
ಎಂದು ಮಂಗಲಸೂತ್ರವನ್ನು ಧರಿಸುವದು

ಪಟ್ಟಸೂತ್ರಂ- ಪಟ್ಟಸೂತ್ರಭವಂ ದಿವ್ಯಂ ಸ್ವರ್ಣಪೂರ್ಣಾ ಕೃತೀಯುತಂ |
ಸೌಮಂಗಲ್ಯಾಭಿವೃದ್ಧ್ಯರ್ಥಂ ಪಟ್ಟಸೂತ್ರಂದದಾಮಿತೇ ||
ಶ್ರೀ ದುರ್ಗಾಯೈನಮಃ, ಪಟ್ಟಸೂತ್ರಂ ಸಮರ್ಪಯಾಮಿ |
ಎಂದು ರೇಶಿಮೆ ದಾರವನ್ನು ಧರಿಸುವದು

ಕಂಕಣಧಾರಣಂ- ಕಾಚಸ್ಯ ನಿರ್ಮಿತಂ ದಿವ್ಯಂ ಕಂಕಣಂಚ ಸುರೇಶ್ವರೀ |
ಹಸ್ತಾಲಂಕರಣಾರ್ಥಾಯ ಕಂಕಣಂ ಪ್ರತಿಗೃಹ್ಯತಾಂ ||
ಶ್ರೀ ದುರ್ಗಾಯೈ ನಮಃ, ಕಂಕಣಂ ಸಮರ್ಪಯಾಮಿ ||
ಎಂದು ಬಳೆಗಳನ್ನು ಧರಿಸುವದು

ಆಭರಣಂ- ಸುವರ್ಣ ಭೂಷಿತಂ ದಿವ್ಯಂ ನಾನಾರತ್ನಸುಶೋಭಿತಂ |
ತ್ರೈಲೋಕ್ಯ ಭೂಷಿತೇ ದೇವಿ ಗೃಹಾಣಾಭರಣಂ ಶುಭಂ ||
ಶ್ರೀ ದುರ್ಗಾಯೈ ನಮಃ, ನಾನಾವಿಧ ಆಭರಣಾನಿ ಸಮರ್ಪಯಾಮಿ ||
ಎಂದು ಆಭರಣಗಳನ್ನು ಧರಿಸುವದು

ಕರ್ಣಕುಂಡಲಂ- ನಾನಾಭರಣ ಶೋಭಾಢ್ಯಂ ನಾನಾರತ್ನೋಪಶೋಭಿತಂ |
ಅರ್ಪಿತಂಚ ಮಯಾದೇವಿ ಕುಂಡಲಂ ಪ್ರತಿಗೃಹ್ಯತಾಂ ||
ಶ್ರೀ ದುರ್ಗಾಯೈ ನಮಃ, ತಾಳಪತ್ರಂ ಸಮರ್ಪಯಾಮಿ ||
ಎಂದು ಕಿವಿಯ ಆಭರಣ ಧರಿಸುವದು

ಭಸ್ಮ- ಪಾಪಿಷ್ಠಾನಪಿ ಪಾಪಾನಾಂ ನರಕಂ ದುಃಖಮೇವಚ।
ಕಾಮಂ ಭಸ್ಮೀ ಕರೋಷಿತ್ವಂ ಭವಾನಿ ಭಸ್ಮಧಾರ್ಯತಾಂ॥
ಶ್ರೀ ದುರ್ಗಾಯೈ ನಮಃ, ಭಸ್ಮಧಾರಯಾಮಿ॥
ಎಂದು ಭಸ್ಮವನ್ನು ಧರಿಸುವದು

ಗಂಧಂ- ಗಂಧಂ ಚಂದನ ಸಂಯುಕ್ತ ಕುಂಕುಮಾದಿ ವಿಮಿಶ್ರಿತಂ।
ಗೃಹ್ಣೀಷ್ವದೇವಿ ಲೋಕೇಶಿ ಜಗನ್ಮಾತ ರ್ನಮೋಽಸ್ತುತೇ॥
ಶ್ರೀ ದುರ್ಗಾಯೈ ನಮಃ, ಗಂಧಂ ಧಾರಯಾಮಿ॥
ಎಂದು ಗಂಧವನ್ನು ಧರಿಸುವದು

ಸುವಾಸಿಕ ದ್ರವ್ಯಾಣಿ- ನಾನಾ ಸುಗಂಧಿಕ ದ್ರವ್ಯಂ ಚೂರ್ಣೀಕೃತ ಪ್ರಯತ್ನತಃ।
ದದಾಮಿತೇ ಮಹಾದೇವಿ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ॥
ಶ್ರೀ ದುರ್ಗಾಯೈ ನಮಃ, ನಾನಾವಿಧ ಪರಿಮಳ ದ್ರವ್ಯಾಣಿ ಸಮರ್ಪಯಾಮಿ॥
ಎಂದು ಸುವಾಸಿಕ ದ್ರವ್ಯ (ಮಲ್ಲಿಗೆ, ಗಂಧದ ತೈಲ) ಗಳನ್ನು ಲೇಪಿಸುವದು

ಹರಿದ್ರಾ- ಹರಿದ್ರಾ ಸ್ವರ್ಣ ವರ್ಣಾಭಾ ಸರ್ವ ಸೌಭಾಗ್ಯದಾಯಿನೀ।
ಸರ್ವಾಲಂಕಾರ ಮುಖ್ಯಾಹಿ ದೇವೀತ್ವಂ ಪ್ರತಿಗೃಹ್ಯತಾಂ॥
ಶ್ರೀ ದುರ್ಗಾಯೈ ನಮಃ, ಹರಿದ್ರಾಂ ಧಾರಯಾಮಿ॥
ಎಂದು ಕುಂಕುಮವನ್ನು ಧರಿಸುವದು

ಕುಂಕುಮ- ಹರಿದ್ರಾ ಚೂರ್ಣ ಸಂಯುಕ್ತಂ ಕುಂಕುಮಂ ಕಾಮದಾಯಕಂ।
ವಸ್ತ್ರಾಲಂಕರಣಂ ಸರ್ವ ದೇವೀತ್ವಂ ಪ್ರತಿಗೃಹ್ಯತಾಂ॥
ಶ್ರೀ ದುರ್ಗಾಯೈ ನಮಃ, ಕುಂಕುಮಂ ಧಾರಯಾಮಿ॥
ಎಂದು ಕುಂಕುಮವನ್ನು ಧರಿಸುವದು

ಕಜ್ಜಲ- ಕಜ್ಜಲಂ ಕಾಮಿಕಂ ರಮ್ಯಂ ಕಾಮಿನೀಕಾಮ ಸಂಭವಂ।
ನೇತ್ರಯೋ ಭೂಷಣಾರ್ಥಾಯ ಕಜ್ಜಲಂ ಪ್ರತಿಗೃಹ್ಯತಾಂ॥
ಶ್ರೀ ದುರ್ಗಾಯೈ ನಮಃ, ಕಜ್ಜಲಂ ಸಮರ್ಪಯಾಮಿ॥
ಎಂದು ಕಾಡಿಗೆಯನ್ನು ಧರಿಸುವದು

ಸಿಂಧೂರ- ಉದಿತಾರುಣ ಸಂಕಾಶಂ ಜಪಾಕುಸುಮ ಸನ್ನಿಭಂ।
ಸೀಮಂತ ಭೂಷಾಣಾರ್ಥಾಯ ಸಿಂಧೂರಂ ಪ್ರತಿಗೃಹ್ಯತಾಂ॥
ಶ್ರೀ ದುರ್ಗಾಯೈ ನಮಃ, ಸಿಂಧೂರಂ ಧಾರಯಾಮಿ॥
ಎಂದು ಗುಲಾಲ ಧರಿಸುವದು

ಅಕ್ಷತಾನ್- ಅಕ್ಷತಾನ್ ಶುಭದಾನ್ ದೇವಿ ಹರಿದ್ರಾ ಚೂರ್ಣ ಮಿಶ್ರಿತಾನ್।
ಪ್ರತಿಗೃಹ್ಣೀಷ್ವ ಕೌಮಾರಿ ದುರ್ಗಾದೇವಿ ನಮೋಽಸ್ತುತೇ॥
ಶ್ರೀ ದುರ್ಗಾಯೈ ನಮಃ, ಅಕ್ಷತಾನ್ ಸಮರ್ಪಯಾಮಿ॥
ಎಂದು ಬಿಲ್ವ ಪತ್ರಿಗಳನ್ನು ಧರಿಸುವದು

ಬಿಲ್ವಪತ್ರಂ- ಬಿಲ್ವವೃಕ್ಷಕೃತಾವಾಸೇ ಬಿಲ್ವಪತ್ರ ಪ್ರೀಯೇಶುಭೇ।
ಬಿಲ್ವವೃಕ್ಷಸಮೂದ್ಭೂತೋ ಬಿಲ್ವಪತ್ರಂ ದದಾಮ್ಯಹಂ॥
ಶ್ರೀ ದುರ್ಗಾಯೈ ನಮಃ, ಬಿಲ್ವಪತ್ರಾಣಿ ಧಾರಯಾಮಿ॥
ಎಂದು ಬಿಲ್ವ ಪತ್ರಿಗಳನ್ನು ಧರಿಸುವದು

ಪತ್ರಿ, ಪುಷ್ಪಾಣಿ- ಮಾಲತೀ ಬಿಲ್ವಮಂದಾರ ಕುಂದಜಾತಿ ವಿಮಿಶ್ರಿತಂ।
ಪುಷ್ಪಂ ಗೃಹಾಣ ದೇವೇಶಿ ಸರ್ವಮಂಗಲದಾಭವ॥
ಶ್ರೀ ದುರ್ಗಾಯೈ ನಮಃ, ನಾನಾವಿಧ ಪುಷ್ಪಾಣಿ ಸಮರ್ಪಯಾಮಿ॥
ಎಂದು ಪತ್ರಿ, ಪುಷ್ಪಗಳನ್ನು ಧರಿಸುವದು

ಪುಷ್ಪಮಾಲಾ- ಕೇತುಕೀಭಿಶ್ಚ ಕಲ್ಹಾರೈರ್ಮಾಲತೀ ಮಲ್ಲಿಕಾದಿಭಿಃ।
ಮಯಾವಿರಚಿತಾಂ ಮಾಲಾಂ ಗೃಹಾಣ ಶಿವವಲ್ಲಭೇ॥
ಶ್ರೀ ದುರ್ಗಾಯೈ ನಮಃ, ಪುಷ್ಪಮಾಲಾ ಧಾರಯಾಮಿ॥
ಎಂದು ಹೂಗಳ ಸರ, ದಂಡೆಗಳನ್ನು ಧರಿಸುವದು

ಬಳಿಕ ದುರ್ಗಾದೇವಿಯ ನ್ಯಾಸಾದಿಗಳನ್ನು ಮಾಡಿ ಅಷ್ಟೋತ್ತರ ಶತ (108) ನಾಮಗಳನ್ನು ಉಚ್ಚರಿಸುತ್ತ ಪತ್ರಿ ಪುಷ್ಪಗಳನ್ನು ಧರಿಸಬೇಕು.

ಧ್ಯಾನಂ- ಪ್ರಕಾಶ ಮಧ್ಯಸ್ಥಿತ ಚಿತ್ಸ್ವರೂಪಾಂ ವರಾಭಯೇ ಸಂದಧತೀಂ ತ್ರಿನೇತ್ರಾಂ। ಸಿಂಧೂರ ವರ್ಣಾಮತಿ ಕೋಮಲಾಂಗೀಂ ಮಾಯಾಮಯೀಂ ತತ್ವಮಯೀಂ ನಮಾಮಿ॥

| | | | |
|---|---|---|---|
| 1 | ಓಂ ದುರ್ಗಾಯೈ ನಮಃ | 8 | ಶ್ರದ್ಧಾಯೈ ನಮಃ |
| 2 | ದಾರಿದ್ರ್ಯಶಮನ್ಯೈ ನಮಃ | 9 | ಪುಷ್ಟ್ಯೈ ನಮಃ |
| 3 | ದುರಿತಘ್ನ್ಯೈ ನಮಃ | 10 | ಸ್ವಧಾಯೈ ನಮಃ |
| 4 | ದುರಾಸದಾಯೈ ನಮಃ | 11 | ಧ್ರುವಾಯೈ ನಮಃ |
| 5 | ಲಕ್ಷ್ಮ್ಯೈ ನಮಃ | 12 | ಮಹಾರಾತ್ರ್ಯೈ ನಮಃ |
| 6 | ಲಜ್ಜಾಯೈ ನಮಃ | 13 | ಮಹಾಮಾಯಾಯೈ ನಮಃ |
| 7 | ಮಹಾವಿದ್ಯಾಯೈ ನಮಃ | 14 | ಮೇಧಾಯೈ ನಮಃ |

15 ಮಾತ್ರೇ ನಮಃ
16 ಸರಸ್ವತ್ಯೈ ನಮಃ
17 ಶಿವಾಯ್ಯೆ ನಮಃ
18 ಶಶಿಧರಾಯ್ಯೆ ನಮಃ
19 ಶಾಂತಾಯ್ಯೆ ನಮಃ
20 ಶಾಂಭವ್ಯೈ ನಮಃ
21 ಭೂತಿದಾಯಿನ್ಯೈ ನಮಃ
22 ತಾಮಸ್ಯೈ ನಮಃ
23 ನಿಯತಾಯ್ಯೆ ನಮಃ
24 ನಾರ್ಯೈ ನಮಃ
25 ಓಂ ಕಾಳ್ಯೈ ನಮಃ
26 ನಾರಾಯಣ್ಯೈ ನಮಃ
27 ಕಲಾಯ್ಯೆ ನಮಃ
28 ಬ್ರಾಹ್ಮ್ಯೈ ನಮಃ
29 ವೀಣಾಧರಾಯ್ಯೆ ನಮಃ
30 ವಾಣ್ಯೈ ನಮಃ
31 ಶಾರದಾಯ್ಯೆ ನಮಃ
32 ಹಂಸವಾಹಿನ್ಯೈ ನಮಃ
33 ತ್ರಿಶೂಲಿನ್ಯೈ ನಮಃ
34 ತ್ರಿನೇತ್ರಾಯ್ಯೆ ನಮಃ
35 ಈಶಾಯ್ಯೆ ನಮಃ
36 ತ್ರಯ್ಯೆ ನಮಃ
37 ತ್ರೇತಾಮಯಾಯ್ಯೆ ನಮಃ
38 ಶುಭಾಯ್ಯೆ ನಮಃ
39 ಶಂಖಿನ್ಯೈ ನಮಃ
40 ಚಕ್ರಿಣ್ಯೈ ನಮಃ
41 ಘೋರಾಯ್ಯೆ ನಮಃ
42 ಕರಾಳ್ಯೈ ನಮಃ
43 ಮಾಲಿನ್ಯೈ ನಮಃ
44 ಮತ್ಸ್ಯೈ ನಮಃ
45 ಮಾಹೇಶ್ವರ್ಯೈ ನಮಃ
46 ಮಹೇಷ್ವಾಸಾಯ್ಯೆ ನಮಃ
47 ಮಹಿಷಘ್ನ್ಯೈ ನಮಃ
48 ಮಧುವ್ರತಾಯ್ಯೆ ನಮಃ
49 ಓಂ ಮಯೂರ ವಾಹಿನ್ಯೈ ನಮಃ
50 ನೀಲಾಯ್ಯೆ ನಮಃ
51 ಭಾರತ್ಯೈ ನಮಃ
52 ಭಾಸ್ವರಾಂಬರಾಯ್ಯೆ ನಮಃ
53 ಪೀತಾಂಬರಧರಾಯ್ಯೆ ನಮಃ
54 ಪೀತಾಯ್ಯೆ ನಮಃ
55 ಕೌಮಾರ್ಯೈ ನಮಃ
56 ಪೀವರಸ್ತನ್ಯೈ ನಮಃ
57 ರಜನ್ಯೈ ನಮಃ
58 ರಾಧಿನ್ಯೈ ನಮಃ
59 ರಕ್ತಾಯ್ಯೆ ನಮಃ
60 ಗದಿನ್ಯೈ ನಮಃ
61 ಓಂ ಘಂಟಿನ್ಯೈ ನಮಃ
62 ಪ್ರಭಾಯ್ಯೆ ನಮಃ
63 ಶುಂಭಘ್ನ್ಯೈ ನಮಃ
64 ಸುಭಗಾಯ್ಯೆ ನಮಃ
65 ಸುಭ್ರುವೇ ನಮಃ
66 ನಿಶುಂಭ ಪ್ರಾಣ ಹಾರಿಣ್ಯೈ (ನಮಃ
67 ಕಾಮಾಕ್ಷ್ಯೈ ನಮಃ
68 ಕಾಮುಕಾಯ್ಯೆ ನಮಃ
69 ಕನ್ಯಾಯ್ಯೆ ನಮಃ
70 ರಕ್ತಬೀಜ ನಿಪಾತಿನ್ಯೈ ನಮಃ
71 ಸಹಸ್ರವದನಾಯ್ಯೆ ನಮಃ
72 ಸಂಧ್ಯಾಯ್ಯೆ ನಮಃ

73 ಸಾಕ್ಷಿಣ್ಯೈ ನಮಃ
74 ಶಾಂಕರ್ಯೈ ನಮಃ
75 ಓಂ ದ್ಯುತಯೇ ನಮಃ
76 ಭಾರ್ಗವ್ಯೈ ನಮಃ
77 ವಾರುಣ್ಯೈ ನಮಃ
78 ವಿದ್ಯಾಯೈ ನಮಃ
79 ಧರಾಯೈ ನಮಃ
80 ಧರಾಸುರಾರ್ಚಿತಾಯೈ ನಮಃ
81 ಗಾಯತ್ರ್ಯೈ ನಮಃ
82 ಗಾಯಕ್ಯೈ ನಮಃ
83 ಗಂಗಾಯೈ ನಮಃ
84 ದುರ್ಗಾಯೈ ನಮಃ
85 ಗೀತ ಘನಸ್ವನಾಯೈ ನಮಃ
86 ಛಂದೋಮಯಾಯೈ ನಮಃ
87 ಓಂ ಮಹ್ಯೈ ನಮಃ
88 ಛಾಯಾಯೈ ನಮಃ
89 ಚಾರ್ವಂಗ್ಯೈ ನಮಃ
90 ಚಂದನಪ್ರಿಯಾಯೈ ನಮಃ
91 ಜನನ್ಯೈ ನಮಃ
92 ಜಾಹ್ನವ್ಯೈ ನಮಃ
93 ಜಾತಾಯೈ ನಮಃ
94 ಶಾಂಭವ್ಯೈ (ಶಾಂಕರ್ಯೈ)
95 ಹತರಾಕ್ಷಸ್ಯೈ ನಮಃ (ನಮಃ
96 ವಲ್ಲರ್ಯೈ ನಮಃ
97 ವಲ್ಲಭಾಯೈ ನಮಃ
98 ಓಂ ವಲ್ಲ್ಯೈ ನಮಃ
99 ವಲ್ಯಲಂಕೃತ ಮಧ್ಯಮಾಯೈ
100 ಹರೀತಕ್ಯೈ ನಮಃ (ನಮಃ
101 ಹಯಾರೂಢಾಯೈ ನಮಃ
102 ಭೂತ್ಯೈ ನಮಃ
103 ಹರಿಹರಪ್ರಿಯಾಯೈ ನಮಃ
104 ವಜ್ರಹಸ್ತಾಯೈ ನಮಃ
105 ವರಾರೋಹಾಯೈ ನಮಃ
106 ಸರ್ವಸಿದ್ಧ್ಯೈ ನಮಃ
107 ವರವಿದ್ಯಾಯೈ ನಮಃ
108 ಶ್ರೀ ದುರ್ಗಾದೇವ್ಯೈ ನಮಃ

॥ ಓಂ ಶ್ರೀ ದುರ್ಗಾಪರಮೇಶ್ವರ್ಯೈ ನಮಃ ಓಂ ॥

ಶಂಖಿಂ ಚರ್ಮ ಧನುಶ್ಚ ಬಾರು ದಧತೀಂ ವಿಭ್ರಾಮಿತಾಂ ತರ್ಜನೀಂ
ಸವ್ಯೇ ಚಕ್ರಮಸಿಂ ಮಹೇಷುಮಿತರೈಸ್ತ್ರಿರ್ಯಕ್ತ್ರಿಶೂಲಂ ಭುಜೈಃ।
ಸನ್ನದ್ಧಾಂ ವಿವಿಧಾಯುಧೈಃ ಪರಿವೃತಾಂ ಮಂತ್ರಿ ಕುಮಾರೀಜನೈಃ
ಧ್ಯಾಯೇದಿಷ್ಟವರಪ್ರದಾಂ ತ್ರಿನಯನಾಂ ಸಿಂಹಾದಿರೂಢಾಂ ಶಿವಾಮ್ ॥

ಇತಿ ಶ್ರೀ ದುರ್ಗಾಷ್ಟೋತ್ತರಂ ಸಂಪೂರ್ಣಮ್ ॥

ಶ್ರೀ ದುರ್ಗಾಪರಮೇಶ್ವರ್ಯೈ ನಮಃ ಇತಿ ಶ್ರೀ ದುರ್ಗಾಷ್ಟೋತ್ತರ ಶತನಾಮ ಪೂಜಾಂ ಸಮರ್ಪಯಾಮಿ.

ಧೂಪ- ಸಗುಗ್ಗುಲ್ವಗರೂಶೀರಗಂಧಾದಿಸುಮನೋಹರಂ।
ಧೂಪಂ ಗೃಹಾಣ ದೇವೇಶಿ ದುರ್ಗೇ ದೇವಿ ನಮೋಽಸ್ತುತೇ ॥

ಶ್ರೀ ದುರ್ಗಾಯೈ ನಮಃ ಧೂಪಂ ಸಮರ್ಪಯಾಮಿ ||
ಎಂದು ಧೂಪ ಹಾಕುವದು

ದೀಪ- ಪಟ್ಟಸೂತ್ರೋಲ್ಲಸದ್ವರ್ತಿ ಗೋಘೃತೇನ ಸಮನ್ವಿತಮ್ |
ದೀಪಂ ಜ್ಞಾನಪ್ರದಂ ದೇವಿ ಗೃಹಾಣ ಪ್ರೀತಯೇಽರ್ಪಿತಮ್ ||
ಶ್ರೀ ದುರ್ಗಾಯೈ ನಮಃ ದೀಪಂ ದರ್ಶಯಾಮಿ ||
ಎಂದು ದೀಪವನ್ನು ಬೆಳಗುವದು

ಘಂಟಾನಾದ- ಆಗಮಾರ್ಥಂತು ದೇವಾನಾಂ ಗಮನಾರ್ಥಂತು ರಕ್ಷಸಾಂ |
ಕುರ್ಯಾತ್ ಘಂಟಾರವಂ ಭಕ್ತ್ಯಾ ಸರ್ವೋಪದ್ರವನಾಶನಂ ||
ಶ್ರೀ ದುರ್ಗಾಯೈ ನಮಃ, ಘಂಟಾನಾದಂ ಸಮರ್ಪಯಾಮಿ ||
ಎಂದು ಗಂಟೆಯನ್ನು ಬಾರಿಸುವದು

ನೈವೇದ್ಯಂ- ಜುಷಾಣ ದೇವಿ ನೈವೇದ್ಯಂ ನಾನಾಭಕ್ಷೈಃ ಸಮನ್ವಿತಂ |
ಪರಮಾನ್ನಂ ಮಯಾದತ್ತಂ ಸರ್ವಾಭಿಷ್ಟಂ ಪ್ರಯಚ್ಛಮೇ ||
(ಪರಮಾನ್ನ ಅಂದರೆ– ಗೋದಿಯನ್ನು ಕುದಿಸಿ ಅದರಲ್ಲಿ ಹಾಲು, ತುಪ್ಪ, ಸಕ್ಕರೆ, ಯಾಲಕ್ಕಿ, ದ್ರಾಕ್ಷಿ, ಗೋಡಂಬಿ, ಬದಾಮ, ಕೇರಬೀಜಗಳನ್ನು ಹಾಕಿ ಚನ್ನಾಗಿ ಕುದಿಸಿ ತಯಾರಿಸಿದ್ದು)
ಶ್ರೀ ದುರ್ಗಾಯೈ ನಮಃ, ನೈವೇದ್ಯಂ ಸಮರ್ಪಯಾಮಿ ||
ಎಂದು ನೈವೇದ್ಯವನ್ನು ಎಡೆ ಮಾಡಬೇಕು

ಪಾನೀಯಂ- ಪಾನೀಯಂ ಶೀತಲಂ ದೇವಿ ನಾರಿಕೇಳ ಸಮನ್ವಿತಂ |
ಜುಷಾಣದೇವಿ ನೈವೇದ್ಯಂ ಮಮಾಭೀಷ್ಟಪ್ರದಾಭವ ||
ಗಂಗಾದಿಸಲಿಲೋದ್ಭೂತಂ ಪಾನೀಯಂ ಪಾವನಂಶುಭಂ |
ಸ್ವಾದೂದಕಂ ಮಯಾದತ್ತಂ ಗೃಹಾಣ ಪರಮೇಶ್ವರಿ ||
ಶ್ರೀ ದುರ್ಗಾಯೈ ನಮಃ, ಸ್ವಾದೂದಕಂ ಸಮರ್ಪಯಾಮಿ ||
ಎಂದು ಅರ್ಘ್ಯದ ಸೌಟಿನಿಂದ 3 ಸಾರೆ ನೀರು ಬಿಡುವದು

ಕುರೋದ್ವರ್ತನಂ- ಚಂದ್ರನಾಗರು ಕರ್ಪೂರ ಸುರಭಿಸ್ವಾದು ಶೀತಲಂ |
ಕುರೋದ್ವರ್ತನಕಂ ದೇವೀಗೃಹ್ಯತಾಂ ಭಕ್ತವತ್ಸಲೇ ||
ಶ್ರೀ ದುರ್ಗಾಯೈ ನಮಃ, ಕುರುದ್ವರ್ತನಾರ್ಥೇ ಚಂದನಂ ಸಮರ್ಪಯಾಮಿ ||
ಎಂದು ಗಂಧವನ್ನು ಸಮರ್ಪಿಸುವದು

ತಾಂಬೂಲಂ- ಕರ್ಪೂರ ಚೂರ್ಣ ಸಂಯುಕ್ತಂ, ನಾಗವಲ್ಯಾದಲೈರ್ಯುತಂ |

ಪೂಗೀಫಲ ಸಮಾಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ॥
ಶ್ರೀ ದುರ್ಗಾಯೈ ನಮಃ, ತಾಂಬೂಲಂ ಸಮರ್ಪಯಾಮಿ॥
ಎಂದು ತಾಂಬೂಲವನ್ನು ಅರ್ಪಿಸಿ ಪುನಃ ಅರ್ಘ್ಯದ ಸೌಟಿನಿಂದ 3 ಸಾರೆ ನೀರನ್ನು ಬಿಡುವದು

ಫಲಸಮರ್ಪಣಂ- ರಂಭಾಫಲಂ ನಾರಿಕೇಳಂ ತಥೈವಾಮ್ರಫಲಾನಿಚ।
ಪೂಜಿತೋಽಪಿ ಸುರಶ್ರೇಷ್ಠ ಗೃಹ್ಯತಾಂ ಪರಮೇಶ್ವರೀ॥
ಶ್ರೀ ದುರ್ಗಾಯೈ ನಮಃ, ಪೂರ್ಣ ಫಲಾನಿ ಸಮರ್ಪಯಾಮಿ॥
ಎಂದು ನಾನಾ ಪ್ರಕಾರದ ಹಣ್ಣುಗಳನ್ನು ಸಮರ್ಪಿಸುವದು

ದಕ್ಷಿಣಾ- ಸುವರ್ಣಂ ಸರ್ವಧಾತೂನಾಂ ಶ್ರೇಷ್ಠಂ ದೇವಿ ವರಂಸದಾ।
ಭಕ್ತ್ಯಾದದಾಮಿ ವರದೇ ಸ್ವರ್ಣವೃಷ್ಟಿಂಚ ದೇಹಿಮೆ॥
ಶ್ರೀ ದುರ್ಗಾಯೈ ನಮಃ, ದಕ್ಷಿಣಾಮ ಸಮರ್ಪಯಾಮಿ॥
ಎಂದು ದಕ್ಷಿಣೆ ತೋರಿಸಿ ಪುನಃ 3 ಸಾರೆ ನೀರು ಬಿಡುವದು

ನೀರಾಜನಂ- ನೀರಾಜನಂ ಸುಮಾಂಗಲ್ಯಂ ಕರ್ಪೂರೇಣ ಸಮನ್ವಿತಂ।
ಚಂದ್ರಾರ್ಕವಹ್ನಿ ಸದೃಶಂ ಗೃಹಾಣ ಹರವಲ್ಲಭೇ॥
ಜಯದೇವಿ ನಮಸ್ತುಭ್ಯಂ ಜಯ ಭಕ್ತವರಪ್ರದೇ।
ಜಯ ಶಂಕರ ವಾಮಾಂಗಿ ಮಂಗಲೇ ಸರ್ವಮಂಗಲೇ॥
ಘೃತವರ್ತಿ ಸಮಾಯುಕ್ತಂ ಘನಸಾರ ಸುದೀಪಿತಂ।
ನೀರಾಜನಮಿದಂ ದೇವಿಗೃಹಾಣಶಿವವಲ್ಲಭೇ॥
ಶ್ರೀ ದುರ್ಗಾಯೈ ನಮಃ ನೀರಾಜನ ದೀಪಂ ದರ್ಶಯಾಮಿ॥
ಎಂದು ಆರತಿಯನ್ನು ಬೆಳಗುವದು

ಪ್ರದಕ್ಷಿಣಂ- ಸಪ್ತದ್ವೀಪ ಸಮುದ್ರಾಂತಾಂ ಕುಲಾಚಲ ನದೀಯುತಾಂ।
ಗಂಗಾಂ ಪ್ರದಕ್ಷಿಣೀ ಕೃತ್ಯ ತತ್ಪುಣ್ಯಂ ಕುರುಮೇ ಶುಭೇ॥
ಯಾನಿಕಾನಿಚ ಪಾಪಾನಿ ಜನ್ಮಾಂತರ ಕೃತಾನಿಚ।
ತಾನಿಕಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ॥
ಶ್ರೀ ದುರ್ಗಾಯೈ ನಮಃ, ಪ್ರದಕ್ಷಿಣಂ ಸಮರ್ಪಯಾಮಿ॥

ನಮಸ್ಕಾರ- ಸರ್ವಸ್ವರೂಪೇ ಸರ್ವೇಶಿ ಸರ್ವಶಕ್ತಿ ಸಮನ್ವಿತೇ।
ಭಯೇಭ್ಯ ಸ್ತ್ರಾಹಿಮಾಂದೇವಿ ದುರ್ಗಾದೇವಿ ನಮೋಽಸ್ತುತೇ॥
ನತಾಸ್ಮಿತ್ರಿಜಗದ್ವಂದ್ಯೇ ನಮಸ್ತೇ ಲೋಕ ನಾಯಕಿ।

ನಮಸ್ತೇ ವಿಶ್ವಜನನಿ ಹೈಮವತ್ತ್ಯೈ ನಮೋಸ್ತುತೇ ॥
ನಮಸ್ತೇ ಗಿರಿಜಾದೇವೀ ನಮಸ್ತೇ ಲೋಕನಾಯಕಿ।
ಸರ್ವಪಾಪಘ್ನಿಮಹೇಶ್ವರ್ಯೈ ನಮೋಸ್ತುತೇ ॥
ಶ್ರೀ ದುರ್ಗಾಯೈ ನಮಃ, ನಮಸ್ಕಾರಂ ಸಮರ್ಪಯಾಮಿ ॥
ಎಂದು ನಮಸ್ಕರಿಸುವದು

ದರ್ಪಣ, ಛತ್ರ, ಚಾಮರ, ವ್ಯಜನ, ಶಂಖನಾದ, ಕಹಳಾ ನಾದ ಭೇರಿ ನಾದ, ಗಾನ, ನೃತ್ಯ, ವೀಣಾನಾದ, ವೇಣುನಾದ ಆದಿ ರಾಜೋಪಚಾರಾರ್ಥೇ ಅಕ್ಷತಾನ್ ಸಮರ್ಪಯಾಮಿ॥ ಎಂದು ಅಕ್ಷತೆಗಳನ್ನು ಹಾಕಿ ನಮಸ್ಕರಿಸಬೇಕು. (ರಾಜೋಪಚಾರದ ಮಂತ್ರಗಳಿಗೆ ನಮ್ಮ "ರುದ್ರಾಭಿಷೇಕ ವಿಧಾನ" ನೋಡಿರಿ)

ಪುಷ್ಪಾಂಜಲಿ- ಸ್ತುವೀತಸ್ತೋತ್ರ ಮುಖ್ಯೈಶ್ಚಸಾಷ್ಟಾಂಗಂ ಪ್ರಣವೇತ್ತತಃ।
ಕೃತಾಂಜಲಿ ಪುಟಸ್ತಿಷ್ಠನ್ ಪ್ರಾರ್ಥಯೇಚ್ಚಂಡಿಕಾಂ ಶಿವಾಂ॥
ಓಂ ಯಜ್ಞೇನಯಜ್ಞಮಯ ಜಂತದೇವಾಃ ತಾನಿಧರ್ಮಾಣಿ ಪ್ರಥಮಾನ್ಯಾಸನ್ ತೇಹನಾಕಂ ಮಹಿಮಾನಸ್ಸಚಂತ ಯತ್ರ ಪೂರ್ವೇಸಾಧ್ಯಾಃ ಸಂತಿದೇವಾಃ॥
ಶ್ರೀ ದುರ್ಗಾಯೈ ನಮಃ, ಪುಷ್ಪಾಂಜಲಿಂ ಸಮರ್ಪಯಾಮಿ॥
ಎಂದು ಬೊಗಸೆಯಿಂದ ಪುಷ್ಪಗಳನ್ನು ಸಮರ್ಪಿಸುವದು ಹಾಗೂ ಒಂದು ಪುಷ್ಪವನ್ನು ದೇವಿಯ ಪ್ರಸಾದವೆಂದು ತಿಳಿದು ತೆಗೆದುಕೊಂಡು ತಾನು ಮುಡಿದುಕೊಳ್ಳುವದು.

ಪ್ರಾರ್ಥನಾ- ಜಯರುದ್ರೇ ವಿರುಪಾಕ್ಷೇ ಜಯಾತೀತೇ ನಿರಂಜನೇ।
ಜಯ ಕಲ್ಯಾಣ ಸುಖದೇ ಜಯ ಮಂಗಲದೇ ಶುಭೇ॥
ಜಯಸಿದ್ಧಮುನೀಂದ್ರಾದಿ ವಂದಿತಾಂಘ್ರೀ ಸರೋರುಹೇ।
ಜಯರುದ್ರ ಪ್ರಿಯೇ ಭೀಮೇ ಜಯದುಷ್ಟನಿಬರ್ಹಣೇ॥
ಜಯವಿಷ್ಣುಪ್ರಿಯೇ ದೇವೀ ಜಯಭೂತಿ ವಿಭೂತಿದೇ।
ಜಯರತ್ನಪ್ರದೀಪ್ತಾಭೇ ಜಯಹೇಮ ವಿಭಾಸಿತೇ॥
ಜಯಸಿದ್ಧೇಶ್ವರಿ ಜಯೇ ಜ್ಞಾನಗಮ್ಯೇ ಜಿತೇಂದ್ರಿಯೇ।
ಜಯಬಾಲೇಂದು ತಿಲಕೇ ತ್ರ್ಯಂಬಕೇ ಜಯವೃದ್ಧಿದೇ॥
ಸರ್ವಲಕ್ಷ್ಮೀ ಪ್ರದೇ ದೇವಿ ಸರ್ವರಕ್ಷಾ ಪ್ರದಾಭವ।
ಧರ್ಮಾರ್ಥ ಕಾಮಮೋಕ್ಷಾಖ್ಯ ಚತುರ್ವರ್ಗ ಫಲಪ್ರದೇ॥
ಶೈಲಪುತ್ರಿ ನಮಸ್ತೇಽಸ್ತು ಬ್ರಹ್ಮಚರ್ಯಾ ವ್ರತಸ್ಥಿತೇ।

ಕಾಳರಾತ್ರಿ ನಮಸ್ತೇಽಸ್ತು ಮಹಾಗೌರಿ ನಮೋಸ್ತುತೇ॥
ಮಧುಕೈಟಭಹಾರಿಣ್ಯೈ ನಮೋ ಮಹಿಷಮರ್ದಿನಿ।
ಧೂಮ್ರಲೋಚನ ನಿರ್ನಾಶೇ ಚಂಡಮುಂಡ ವಿನಾಶಿನೀ॥
ರಕ್ತ ಬೀಜವಧೇ ದೇವೀ ನಿಶುಂಭಾ ಸುರನಾಶಿನೀ।
ನಮಃ ಶುಂಭಾಸುಹಾರಿಣ್ಯೈ ತ್ರೈಲೋಕ್ಯವರದೇ ನಮಃ॥
ದೇವಿದೇಹಿ ಪರಂಜ್ಞಾನಂ ದೇವಿದೇಹಿ ಪರಂ ಸುಖಂ।
ಧರ್ಮಂದೇಹಿ ಧನಂದೇಹಿ ಕಾಮಮೋಕ್ಷೌಚ ದೇಹಿಮೇ॥
ಸುಪುತ್ರಾಂಶ್ಚ ಪಶೂನ್ ಕೋಶಾನ್ ಸುಕ್ಷೇತ್ರಾಣಿ ಶುಭಾನಿಚ।
ದೇವಿದೇಹಿ ಪರಂ ರೂಪಮಿಹಮುಕ್ತಿ ಸುಖಂ ಕುರು॥
ಯದ್ಯದಿಚ್ಛಾಮ್ಯಹಂ ನಿತ್ಯಂತತ್ತ ತ್ಸರ್ವಂ ಪ್ರಯಚ್ಛಮೇ॥
ಶ್ರೀ ದುರ್ಗಾಯೈ ನಮಃ, ಪ್ರಾರ್ಥನಾಂ ಸಮರ್ಪಯಾಮಿ॥
ಎಂದು ಪ್ರಾರ್ಥನೆ ಮಾಡಬೇಕು

ತರ್ಪಣಂ- ದೀಕ್ಷಾನ್ವಿತೋ ನರೇಂದ್ರಶ್ಚ ಸ್ವಯಂಗುರು ಪುರೋಹಿತಃ
ಬಿಲ್ವಪತ್ರಾರ್ಘ್ಯ ಮಂತ್ರೇಣ ದದ್ಯಾದ್ದೇವ್ಯೈ ಸಮಂತ್ರಕಂ॥
ಸರ್ವಸ್ವರೂಪೇ ಸರ್ವೇಶಿ ಸರ್ವಶಕ್ತಿ ಸ್ಸಮನ್ವಿತೇ।
ಬಿಲ್ವಾರ್ಘ್ಯಂಚ ಮಯಾದತ್ತಂ ದೇವೇಶಿ ಪ್ರತಿಗೃಹ್ಯತಾಂ॥
ಜ್ಞಾನೇಶ್ವರಿ ಗೃಹಾಣೇದಂ ಸರ್ವಸೌಖ್ಯ ವಿವರ್ಧಿನೀ।
ಗೃಹಾಣಾರ್ಘ್ಯಂ ಮಯಾದತ್ತಂ ದೇವೇಶಿ ವರದಾಭವ॥
ಶ್ರೀ ದುರ್ಗಾಯೈ ನಮಃ, ತರ್ಪಣಂ ತರ್ಪಯಾಮಿ॥
ಎಂದು ಬಿಲ್ವಪತ್ರಿ ಸಹಿತ ಜಲವನ್ನು ಬಿಡಬೇಕು

ಬಳಿಕ ದೇವೀ ಮಹಾತ್ಮೆಯ ಗ್ರಂಥ ಪಾರಾಯಣವನ್ನು ಮಾಡಬೇಕು ಅಥವಾ ತನಗೆ ಇಷ್ಟವಾದ ಮಂತ್ರವನ್ನು ಜಪಿಸಿ ಕೊನೆಯಲ್ಲಿ ಮಂಗಲವನ್ನು ಮಾಡಬೇಕು.

ಕ್ಷಮಾಪನಂ- ಸರ್ವಮಂಗಲ ಮಾಂಗಲ್ಯೇ ಶಿವೇಸರ್ವಾರ್ಥ ಸಾಧಿಕೇ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತುತೇ॥
ಶ್ರೀ ದುರ್ಗಾಯೈ ನಮಃ, ಎಂದು ಪುನಃ ಪುನಃ ನಮಸ್ಕರಿಸಬೇಕು

ಪೂಜಾ ಸಮಾಪ್ತಿ- ಆವಾಹನಂ ನಜಾನಾಮಿ ನಜಾನಾಮಿ ವಿಸರ್ಜನಂ।
ಪೂಜಾಂಚೈವ ನಜಾನಾಮಿ ಕ್ಷಮಸ್ವಪರಮೇಶ್ವರೀ॥
ಯಸ್ಯಸ್ಮೃತ್ಯಾ ಚನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು।

ನ್ಯೂನಂ ಸಂಪೂರ್ಣತಾಂಯಾತಿ ಸದ್ಯೋವಂದೇ ಸದಾಶಿವಂ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಸುರೇಶ್ವರಿ।
ಯತ್ಕೃತಂತು ಮಯಾದೇವಿ ಪರಿಪೂರ್ಣಂತ ದಸ್ತುತೇ ॥

ಅನೇನಯಥಾ ಜ್ಞಾನೇನಯಥಾ ಮಿಲಿತೋಪಚಾರ ದ್ರವ್ಯೈಃ ದುರ್ಗಾ ಪೂಜನೇನ ಭಗವತೀ ಶ್ರೀ ದುರ್ಗಾಂತರ್ಯಾಮಿ (ಶ್ರೀ ಪಾರ್ವತೀ ಪರಮೇಶ್ವರಃ) ಸುಪ್ರೀತಃ ಸುಪ್ರಸನ್ನ ವರದೋಭವತು ॥ ಎಂದು ಉಚ್ಚರಿಸಿ ಬಲ ಹಸ್ತದಲ್ಲಿ ಅಕ್ಷತೆ, ಪುಷ್ಪ ದಕ್ಷಿಣೆ ಸಹಿತ ಜಲವನ್ನು ಹಾಕಿಕೊಂಡು ಆ ಜಲವನ್ನು ಕಿರಿಬೆರಳಿನಿಂದ ಬಿಡಬೇಕು.

ಬಳಿಕ ಪೂರ್ವದಿಕ್ಕಿನ ಕಮಲದ ಮೇಲೆ "ಬ್ರಾಹ್ಮೀ" ಎಂಬ ಹೆಸರಿನ ದೇವಿಯನ್ನು ಆವಾಹನೆ ಮಾಡಿ ಪೂಜಿಸಬೇಕು.

ಈ ಮೊದಲು ತಿಳಿಸಿದ ಪ್ರಕಾರ ಮಣ್ಣು ಅಥವಾ ತಾಮ್ರದ ಕಲಶವನ್ನು ಸ್ಥಾಪಿಸಿ ಅದರ ಮೇಲೆ ಅಕ್ಕಿ ತುಂಬಿದ ಹರವಾದ ಪಾತ್ರೆಯನ್ನು ಇಟ್ಟು ಅದರಲ್ಲಿ "ಬ್ರಾಹ್ಮಿ" ಎಂಬ ಹೆಸರಿನ ಬಂಗಾರದ ದೇವಿ ಪ್ರತಿಮೆಯನ್ನು ಸ್ಥಾಪಿಸಿ ಪೂಜಿಸುವದು.

ಧ್ಯಾನ- ಅಮಲಕಮಲ ಸಂಸ್ಥಾ ಲೇಖಿನೀ ಪುಸ್ತಕೋ ದ್ಯತ್ಕರಯುಗಲ ಸರೋಜಾ
ಕುಂದಮಂದಾರ ಗೌರಾ। ಧೃತಶಕಧರ ಖಂಡೊಲ್ಲಾಸಿಕೋಟೀರ
ಚೂಡಾಭವತು ಭವ ಭಯಾನಾಂ ಭಂಗಿನೀ ಭಾರತೀನಃ ॥

ಎಂದು ಪ್ರಾರ್ಥಿಸಿ

ಓಂ ಭೂಃ ಬ್ರಾಹ್ಮೀ ಆವಾಹಯಾಮಿ, ಓಂ ಭುವಃ ಬ್ರಾಹ್ಮೀ ಆವಾಹಯಾಮಿ ಓಂ ಸುವಃ ಬ್ರಾಹ್ಮೀ ಆವಾಹಯಾಮಿ ಓಂ ಭೂರ್ಭುವಃ ಸ್ವಃ ಬ್ರಾಹ್ಮೀ ಆವಾಹಯಾಮಿ ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು

ಓಂ ಬ್ರಾಹ್ಮೈ ನಮಃ ಆವಾಹಯಾಮಿ ಆವಾಹಿತೋಭವ, ಸ್ಥಾಪಯಾಮಿ, ಸ್ಥಾಪಿತೋ ಭವ, ಸಮ್ಮುಖೋಭವ, ಅವಕುಂಠಿತೋ ಭವ, ವರದೋ ಭವ, ಎಂದು ಷಣ್ಮುದ್ರೆಗಳನ್ನು ತೋರಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು.

ಬಳಿಕ ಆಗ್ನೇಯ ದಿಕ್ಕಿನ ಕಮಲದ ಮೇಲೆ "ಮಾಹೇಶ್ವರೀ" ಎಂಬ ಹೆಸರಿನ ದೇವಿಯನ್ನು ಆವಾಹನೆ ಮಾಡಿ ಪೂಜಿಸಬೇಕು.

ಈ ಮೊದಲು ತಿಳಿಸಿದ ಪ್ರಕಾರ ಮಣ್ಣು ಅಥವಾ ತಾಮ್ರದ ಕಲಶವನ್ನು ಸ್ಥಾಪಿಸಿ ಅದರ ಮೇಲೆ ಅಕ್ಕಿ ತುಂಬಿದ ಹರವಾದ ಪಾತ್ರೆಯನ್ನು ಇಟ್ಟು ಅದರಲ್ಲಿ "ಮಾಹೇಶ್ವರಿ" ಎಂಬ ಹೆಸರಿನ ಬಂಗಾರದ ದೇವಿ ಪ್ರತಿಮೆಯನ್ನು ಸ್ಥಾಪಿಸಿ ಪೂಜಿಸುವದು.

ಧ್ಯಾನ- ರಕ್ತಾಭಾಮರುಣಾಂ ಶುಭಾಂಬರಧರಾ ಮಾನಂದ ಪೂರ್ಣಾನನಾಂ।

ಮುಕ್ತಾಹಾರ ವಿಭೂಷಣಾಂ ಕುಚಭರಾ ಕ್ರಾಂತಾಂ ಸುಕಾಂ ಚೀಗುಣಾಂ।
ದೇವೀಂ ದಿವ್ಯರಸಾನ್ನಪೂರ್ಣ ಕಲಶಾ ಮಂಭೋಜ ದರ್ವೀಕಾರಾಂ।
ಧ್ಯಾಯೇಚ್ಛಂ ಕರವಲ್ಲಭಾಂ ತ್ರಿನಯನಾ ಮಭ್ರಾಲಕಾಂ ಸುಂದರೀಂ

ಎಂದು ಪ್ರಾರ್ಥಿಸಿ ಓಂ ಭೂಃ ಮಾಹೇಶ್ವರ್ಯೈ ನಮಃ ಆವಾಹಯಾಮಿ ಓಂ ಭುವಃ ಮಾಹೇಶ್ವರ್ಯೈ ನಮಃ ಆವಾಹಯಾಮಿ, ಓಂ ಸುವಃ ಮಾಹೇಶ್ವರ್ಯೈ ನಮಃ ಆವಾಹಯಾಮಿ, ಓಂ ಭೂರ್ಭುವಃ ಸ್ವಃ ಮಾಹೇಶ್ವರ್ಯೈ ನಮಃ ಆವಾಹಯಾಮಿ

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು

ಓಂ ಮಾಹೇಶ್ವರ್ಯೈ ನಮಃ ಆವಾಹಯಾಮಿ ಆವಾಹಿತೋಭವ, ಸ್ಥಾಪಯಾಮಿ, ಸ್ಥಾಪಿತೋಭವ, ಸನ್ನಿಹಿತೋಭವ, ಸಮ್ಮುಖೋಭವ, ಅವಕುಂಠಿತೋಭವ, ವರದೋಭವ

ಎಂದು ಷಣ್ಮುದ್ರೆಗಳನ್ನು ತೋರಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು. ನಂತರ ದಕ್ಷಿಣ ದಿಕ್ಕಿನ ಕಮಲದ ಮೇಲೆ ''ಕೌಮಾರಿ'' ಎಂಬ ಹೆಸರಿನ ದೇವಿಯನ್ನು ಆವಾಹನೆ ಮಾಡಿ ಪೂಜಿಸಬೇಕು.

ಮೊದಲು ತಿಳಿಸಿದ ಪ್ರಕಾರ ಮಣ್ಣು ಅಥವಾ ತಾಮ್ರದ ಕಲಶ (ತಂಬಿಗೆ) ವನ್ನು ಸ್ಥಾಪಿಸಿ ಅದರ ಮೇಲೆ ಅಕ್ಕಿಯಿಂದ ತುಂಬಿದ ಹರವಾದ
ತಾಮ್ರದ ಪಾತ್ರೆಯನ್ನು ಇಟ್ಟು ಅದರಲ್ಲಿ ''ಕೌಮಾರಿ'' ಎಂಬ ಹೆಸರಿನ ಬಂಗಾರದ ಪ್ರತಿಮೆಯನ್ನು ಸ್ಥಾಪಿಸಿ ಪೂಜಿಸುವದು.

ಧ್ಯಾನ- ಓಂ ಗಿರಿರಾಜ ಕುಮಾರಿಕಾಂ ಭವಾನೀಂ ಶರಣಾಗತ ಪಾಲನೈಕದಕ್ಷಾಮ್।
ವರದಾಭಯ ಚಕ್ರಶಂಖ ಹಸ್ತಾಂವಾಧಾತ್ರೀಂ ಭಜತಾಂ ಸ್ಮರಾಮಿ ನಿತ್ಯಮ್॥

ಎಂದು ಪ್ರಾರ್ಥಿಸಿ ಓಂಭೂಃಕೌಮಾರ್ಯೈ ನಮಃ ಆವಾಹಯಾಮಿ, ಓಂಭುವಃ, ಕೌಮಾರ್ಯೈ ನಮಃ ಆವಾಹಯಾಮಿ, ಓಂಸುವಃ ಕೌಮಾರ್ಯೈ ನಮಃ ಆವಾಹಯಾಮಿ ಓಂಭೂರ್ಭುವಃಸ್ವಃ ಕೌಮಾರ್ಯೈ ನಮಃ ಆವಾಹಯಾಮಿ

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು.

ಓಂ ಕೌಮಾರ್ಯೈ ನಮಃ ಆವಾಹಯಾಮಿ, ಆವಾಹಿತೋಭವ, ಸ್ಥಾಪಯಾಮಿ ಸ್ಥಾಪಿತೋಭವ, ಸನ್ನಿಹಿತೋಭವ, ಸಮ್ಮುಖೋಭವ, ಅವಕುಂಠಿತೋಭವ ವರದೋಭವ

ಎಂದು ಷಣ್ಮುದ್ರೆಗಳನ್ನು ತೋರಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು.

ಬಳಿಕ ನೈಋತ್ಯ ದಿಕ್ಕಿನ ಕಮಲದ ಮೇಲೆ 'ವೈಷ್ಣವಿ' ಎಂಬ ಹೆಸರಿನ ದೇವಿಯನ್ನು ಆವಾಹನೆ ಮಾಡಿ ಪೂಜಿಸಬೇಕು.

ಈ ಮೊದಲು ತಿಳಿಸಿದ ಪ್ರಕಾರ ಮಣ್ಣು ಅಥವಾ ತಾಮ್ರದ ಕಲಶ (ತಂಬಿಗೆ) ವನ್ನು ಸ್ಥಾಪಿಸಿ ಅದರ ಮೇಲೆ ಅಕ್ಕಿಯಿಂದ ತುಂಬಿದ ಹರವಾದ ತಾಮ್ರದ ಪಾತ್ರೆಯನ್ನಿಟ್ಟು ಅದರಲ್ಲಿ 'ವೈಷ್ಣವಿ' ಎಂಬ ಹೆಸರಿನ ಬಂಗಾರದ ಪ್ರತಿಮೆಯನ್ನು ಸ್ಥಾಪಿಸಿ ಪೂಜಿಸುವದು.

ಧ್ಯಾನ- ಅಕ್ಷಸ್ರಕ್‌ಪರಶುಂಗದೇಷುಕುಲಿಶಂ ಪದ್ಮಂಧನುಃ ಕುಂಡಿಕಾಂ।
ದಂಡಂ ಶಕ್ತಿ ಮಸಿಂಚ ಚರ್ಮ ಜಲಜಂ ಘಂಟಾಂ ಸುರಾಭಾಜನಂ॥
ಶೂಲಂಪಾಶ ಸುದರ್ಶನೇಚ ದಧತೀಂ ಹಸ್ತೈಃ ಪ್ರವಾಲ ಪ್ರಭಾಂ।
ಸೇವ್ಯೇ ಸೈರಿಭ ಮರ್ದಿನೀ ಮಹಮಹಾಲಕ್ಷ್ಮೀಂ ಸರೋಜಸ್ಥಿತಾಂ॥

ಎಂದು ಪ್ರಾರ್ಥಿಸಿ ಓಂ ಭೂಃ ವೈಷ್ಣವ್ಯೈ ನಮಃ, ಓಂಭುವಃ ವೈಷ್ಣವೈ ನಮಃ, ಓಂ ಸುವಃ ವೈಷ್ಣವ್ಯೈ ನಮಃ, ಓಂ ಭೂರ್ಭುವಃ ಸ್ವಃ ವೈಷ್ಣವ್ಯೈ ನಮಃ ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು.

ಓಂ ವೈಷ್ಣವ್ಯೈ ನಮಃ ಆವಾಹಯಾಮಿ, ಆವಾಹಿತೋಭವ, ಸ್ಥಾಪಯಾಮಿ ಸ್ಥಾಪಿತೋಭವ, ಸನ್ನಿಹಿತೋಭವ, ಸಮ್ಮುಖೋಭವ, ಅವಕುಂಠಿತೋಭವ, ವರದೋಭವ ಎಂದು ಷಣ್ಮುದ್ರೆಗಳನ್ನು ತೋರಿಸಿ, ಷೋಡಶೋಪಚಾರಗಳಿಂದ ಪೂಜಿಸಬೇಕು. ಬಳಿಕ ಪಶ್ಚಿಮ ದಿಕ್ಕಿನ ಕಮಲದ ಮೇಲೆ 'ವಾರಾಹಿ' ಎಂಬ ಹೆಸರಿನ ದೇವಿಯನ್ನು ಆವಾಹನೆ ಮಾಡಿ ಪೂಜಿಸಬೇಕು.

ಈ ಮೊದಲು ತಿಳಿಸಿದ ಪ್ರಕಾರ ಮಣ್ಣು ಅಥವಾ ತಾಮ್ರದ ಕಲಶವನ್ನು ಸ್ಥಾಪಿಸಿ ಅದರ ಮೇಲೆ ಅಕ್ಕಿಯಿಂದ ತುಂಬಿದ ಹರವಾದ ತಾಮ್ರದ ಪಾತ್ರೆಯನ್ನಿಟ್ಟು ಅದರಲ್ಲಿ "ವಾರಾಹಿ" ಎಂಬ ಹೆಸರಿನ ಬಂಗಾರದ ಪ್ರತಿಮೆಯನ್ನು ಸ್ಥಾಪಿಸಿ ಪೂಜಿಸುವದು.

ಧ್ಯಾನ- ಯಾಸಾಪದ್ಮಾಸನಸ್ಥಾ ವಿಪುಲಕಟಿತಟೀ ಪದ್ಮಪತ್ರಾಯುತಾಕ್ಷೀ।
ಗಂಭೀರಾವರ್ತನಾಭಿಃ ಸ್ತನಭರನಮಿತಾ ಶುಭ್ರವಸ್ತ್ರೋತ್ತರೀಯಾ॥
ಲಕ್ಷ್ಮೀರ್ದಿವ್ಯೈರ್ಗಜೇಂದ್ರೈರ್ಮಣಿಗಣ ಖಚಿತೈಃ ಸ್ನಾಪಿತಾಹೇಮ ಕುಂಭೈಃ
ನಿತ್ಯಂಸಾ ಪದ್ಮಹಸ್ತಾ ಮಮವಸತು ಗೃಹೇ ಸರ್ವ ಮಾಂಗಲ್ಯ ಯುಕ್ತಾ॥

ಎಂದು ಪ್ರಾರ್ಥಿಸಿ ಓಂ ಭೂಃ ವಾರಾಹ್ಯೈ ನಮಃ, ಓಂಭುವಃ ವರಾಹ್ಯೈ ನಮಃ, ಓಂ ಸುವಃ ವಾರಾಹ್ಯೈ ನಮಃ, ಓಂ ಭೂರ್ಭುವಃ ಸ್ವಃ ವಾರಾಹ್ಯೈ ನಮಃ ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು.

ಓಂ ವಾರಾಹ್ಯೈ ನಮಃ ಆವಾಹಯಾಮಿ, ಆವಾಹಿತೋಭವ, ಸ್ಥಾಪಯಾಮಿ ಸ್ಥಾಪಿತೋಭವ, ಸನ್ನಿಹಿತೋ ಭವ, ಸಮ್ಮುಖೋ ಭವ, ಅವಕುಂಠಿತೋ ಭವ, ವರದೋ ಭವ

ಎಂದು ಷಣ್ಮುದ್ರೆಗಳನ್ನು ತೋರಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು. ಬಳಿಕ ವಾಯವ್ಯ ದಿಕ್ಕಿನ ಕಮಲದ ಮೇಲೆ ''ಇಂದ್ರಾಣಿ'' ಎಂಬ ಹೆಸರಿನ ದೇವಿಯನ್ನು ಆವಾಹನೆ ಮಾಡಿ ಪೂಜಿಸಬೇಕು.

ಹಿಂದೆ ತಿಳಿಸಿದ ಪ್ರಕಾರ ಮಣ್ಣು ಅಥವಾ ತಾಮ್ರದ ಕಲಶವನ್ನು ಸ್ಥಾಪಿಸಿ ಅದರ ಮೇಲೆ ಅಕ್ಕಿಯಿಂದ ತುಂಬಿದ ಹರವಾದ ತಾಮ್ರದ ಪಾತ್ರೆಯನ್ನಿಟ್ಟು ಅದರಲ್ಲಿ ''ಇಂದ್ರಾಣಿ'' ಎಂಬ ಹೆಸರಿನ ಬಂಗಾರದ ಪ್ರತಿಮೆಯನ್ನು ಸ್ಥಾಪಿಸಿ ಪೂಜಿಸುವದು.

ಧ್ಯಾನ- ಓಂ ಬಿಭ್ರಾಣಾ ಶೂಲಬಾಣಸ್ಯರಿಸು ದರಗದಾ ಚಾಪ ಬಾಣಾನ್
ಕರಾಬ್ಜೈಃ। ಮೇಘಶ್ಯಾಮಾ ಕಿರೀಟೋಲ್ಲಿಖಿತ ಜಲಧರಾಭೀಷಣಾ
ಭೂಷಣಾಢ್ಯಾ ॥ ಸಿಂಹಸ್ಕಂದಾಧಿರೂಢಾಚತಸೃಭಿರಸಿಖೇಟಾನ್ವಿತಾ
ಭಿಪರೀತಾ। ಕನ್ಯಾ ಭಿರ್ಭಿನ್ನದೈತ್ಯಾಭವತು ಭವಭಯಧ್ವಂಸಿನೀ ಶೂಲಿನೀನಃ॥

ಎಂದು ಪ್ರಾರ್ಥಿಸಿ ಓಂ ಭೂಃ ಇಂದ್ರಾಣ್ಯೈ ನಮಃ, ಓಂ ಭುವಃ ಇಂದ್ರಾಣ್ಯೈ ನಮಃ, ಓಂ ಸುವಃ ಇಂದ್ರಾಣ್ಯೈ ನಮಃ, ಓಂ ಭೂರ್ಭುವಃ ಸ್ವಃ ಇಂದ್ರಾಣ್ಯೈ ನಮಃ

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು.

ಓಂ ಇಂದ್ರಾಣ್ಯೈ ನಮಃ, ಆವಾಹಯಾಮಿ, ಆವಾಹಿತೋ ಭವ, ಸ್ಥಾಪಯಾಮಿ, ಸ್ಥಾಪಿತೋಭವ, ಸನ್ನಿಹಿತೋ ಭವ, ಸಮ್ಮುಖೋ ಭವ, ಅವಕುಂಠಿತೋ ಭವ, ವರದೋಭವ ಎಂದು ಷಣ್ಮುದ್ರೆಗಳನ್ನು ತೋರಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು.

ಆ ಮೇಲೆ ಉತ್ತರ ದಿಕ್ಕಿನ ಕಮಲದ ಮೇಲೆ ''ಚಾಮುಂಡಿ'' ಎಂಬ ಹೆಸರಿನ ದೇವಿಯನ್ನು ಆವಾಹನೆ ಮಾಡಿ ಪೂಜಿಸಬೇಕು.

ಹಿಂದೆ ತಿಳಿಸಿದ ಪ್ರಕಾರ ಮಣ್ಣು ಅಥವಾ ತಾಮ್ರದ ಕಲಶವನ್ನು ಸ್ಥಾಪಿಸಿ ಅದರ ಮೇಲೆ ಅಕ್ಕಿಯಿಂದ ತುಂಬಿದ ಹರವಾದ ತಾಮ್ರದ ಪಾತ್ರೆಯನ್ನು ಇಟ್ಟು ಅದರಲ್ಲಿ ''ಚಾಮುಂಡಿ'' ಎಂಬ ಹೆಸರಿನ ಬಂಗಾರದ ಪ್ರತಿಮೆಯನ್ನು ಸ್ಥಾಪಿಸಿ ಪೂಜಿಸುವದು.

ಧ್ಯಾನ- ಅರಿಶಂಖ ಕೃಪಾಣ ಬಾಣ ಖೇಟಾನ್ ಸಧನುಶ್ಶೂಲಕ ತರ್ಜನೀಂ ದಧಾನಾ।
ಮಹತೀಮಹಿಷೋತ್ತ ಮಾಂಗ ಸಂಸ್ಥಾನವ ಪೂರ್ವಾಸದೃಶೀ ಶ್ರೀಯೇಽಸ್ತು
ದುರ್ಗಾ ॥
ಹೇಮಪ್ರಖ್ಯಾಮಿಂದು ಖಂಡಾತ್ಮಮೌಳಿಂ ಶಂಖಾರೀಷ್ಟಾಭೀತಿ ಹಸ್ತಾಂ
ತ್ರಿನೇತ್ರಾಂ।
ಹೇಮಾಬ್ಜಸ್ಥಾಂ ಪೀತ ವಸ್ತ್ರಾಂ ಪ್ರಸನ್ನಾಂದೇವೀಂ ಚಾಮುಂಡೀಂ
ದಿವ್ಯ ರೂಪಾಂ ನಮಾಮಿ॥

ಎಂದು ಪ್ರಾರ್ಥಿಸಿ, ಓಂ ಭೂಃ ಚಾಮುಂಡ್ಯೈ ನಮಃ, ಓಂ ಭುವಃ ಚಾಮುಂಡ್ಯೈ ನಮಃ, ಓಂ ಸುವಃ ಚಾಮುಂಡ್ಯೈ ನಮಃ, ಓಂ ಭೂರ್ಭುವಃಸ್ವಃ ಚಾಮುಂಡ್ಯೈ ನಮಃ

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು.

ಓಂ ಚಾಮುಂಡ್ಯೈ ನಮಃ, ಆವಾಹಯಾಮಿ, ಆವಾಹಿತೋಭವ, ಸ್ಥಾಪಯಾಮಿ, ಸ್ಥಾಪಿತೋಭವ, ಸನ್ನಿಹಿತೋಭವ, ಸಮ್ಮುಖೋಭವ, ಅವಕುಂಠಿತೋಭವ, ವರದೋಭವ

ಎಂದು ಷಣ್ಮುದ್ರೆಗಳನ್ನು ತೋರಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು.

ಬಳಿಕ ಈಶಾನ್ಯ ದಿಕ್ಕಿನ ಕಮಲದ ಮೇಲೆ "ಲಕ್ಷ್ಮೀ" ಎಂಬ ಹೆಸರಿನ ದೇವಿಯನ್ನು ಆವಾಹನೆ ಮಾಡಿ ಪೂಜಿಸಬೇಕು.

ಈ ಮೊದಲು ತಿಳಿಸಿದ ಪ್ರಕಾರ ಮಣ್ಣು ಅಥವಾ ತಾಮ್ರದ ಕಲಶವನ್ನು ಸ್ಥಾಪಿಸಿ ಅದರ ಮೇಲೆ ಅಕ್ಕಿಯಿಂದ ತುಂಬಿದ ಹರವಾದ ತಾಮ್ರದ ಪಾತ್ರೆಯನ್ನು ಇಟ್ಟು, ಅದರಲ್ಲಿ "ಲಕ್ಷ್ಮೀ" ಎಂಬ ಹೆಸರಿನ ಬಂಗಾರದ ಪ್ರತಿಮೆಯನ್ನು ಸ್ಥಾಪಿಸಿ ಪೂಜಿಸುವದು.

ಧ್ಯಾನ- ನಮಸ್ತೇಸ್ತು ಮಹಾಮಾಯೇ ಶ್ರೀ ಪೀಠೇಸುರಪೂಜಿತೇ।
ಶಂಖಚಕ್ರ ಗದಾಹಸ್ತೇ ಮಹಾಲಕ್ಷ್ಮೀ ನಮೋಸ್ತುತೇ॥
ಸರ್ವಜ್ಞೇ ಸರ್ವವರದೇ ಸರ್ವದುಷ್ಟಭಯಂಕರೀ।
ಸರ್ವದುಃಖ ಹರೇದೇವಿ ಮಹಾಲಕ್ಷ್ಮೀ ನಮೋಽಸ್ತುತೇ॥

ಎಂದು ಪ್ರಾರ್ಥಿಸಿ, ಓಂ ಭೂಃ ಲಕ್ಷ್ಮ್ಯೈ ನಮಃ, ಓಂಭುವಃ ಲಕ್ಷ್ಮ್ಯೈ ನಮಃ, ಓಂ ಸುವಃ ಲಕ್ಷ್ಮ್ಯೈ ನಮಃ, ಓಂ ಭೂರ್ಭುವಃ ಸ್ವಃ ಲಕ್ಷ್ಮ್ಯೈ ನಮಃ

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು.

ಓಂ ಲಕ್ಷ್ಮ್ಯೈ ನಮಃ ಆವಾಹಯಾಮಿ, ಆವಾಹಿತೋಭವ, ಸ್ಥಾಪಯಾಮಿ ಸ್ಥಾಪಿತೋಭವ, ಸನ್ನಿಹಿತೋಭವ, ಸಮ್ಮುಖೋಭವ ಅವಕುಂಠಿತೋಭವ, ವರದೋಭವ

ಎಂದು ಷಣ್ಮುದ್ರೆಗಳನ್ನು ತೋರಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು.

ಈ ಪ್ರಕಾರ 8 ಜನ ಶಕ್ತಿ ದೇವತೆಗಳನ್ನು ಪೂಜೆಮಾಡಿ ಸದಾಚಾರಿಯೂ ಪಂಡಿತನೂ ಆದ ಓರ್ವ ಜಂಗಮಮೂರ್ತಿ ಅಥವಾ ಬ್ರಾಹ್ಮಣನನ್ನು ರಕ್ತ ಗಂಧ ಕುಂಕುಮ, ಅಕ್ಷತೆ, ಕೆಂಪು ಹೂವು, ಕೆಂಪು ವಸ್ತ್ರಾದಿಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಪಠಿಸುತ್ತ 8 ಜನ ಶಕ್ತಿದೇವತೆಗಳನ್ನೂ, ಬೆಳ್ಳಿಯ ಎಮ್ಮೆ ಸಹಿತ ಬಂಗಾರದ ದುರ್ಗಾ ಪ್ರತಿಮೆಯನ್ನೂ, ಅಧಿಕ ದಕ್ಷಿಣೆ ಸಹಿತ ದಾನ ಕೊಡಬೇಕು.

ಮಂತ್ರ- ಮಹಿಷೋಪರಿ ಸಂಸ್ಥಾಂತ್ವಾಂ ದದ್ಯಾ ಮಾಯುಷ್ಯವರ್ಧಯೇ।
ಸಮಸ್ತ ದೋಷ ನಿರ್ಮುಕ್ತಿ ಮಭಯಂ ಕುರುಶಂಕರೀ॥

ಹೀಗೆ ಪರಿಸುತ್ತದಾನ ಮಾಡಿದ್ದಾದರೆ ಸರ್ವ ಸಂಕಟಗಳೂ ಸರ್ವ ರೋಗಗಳೂ, ಅಪಮೃತ್ಯು ಮೊದಲಾದವು ನಿವಾರಣೆಯಾಗುವವು ಮತ್ತು ಸರ್ವತ್ರ ವಿಜಯವೂ, ಆಯುಷ್ಯವೂ, ಆರೋಗ್ಯವೂ, ಸೌಭಾಗ್ಯವೂ ಲಭಿಸುವವು ಎಂದು ಯಾಮಳ ತಂತ್ರದಲ್ಲಿ ಹೇಳಲ್ಪಟ್ಟಿದೆ.



## ಚಂದ್ರದಶಾ ಶನಿಭುಕ್ತಿಯಲ್ಲಿ ಶನಿಪ್ರೀತಿಕರ ಮಹಿಷೀ ದಾನವು

ಜನನ ಲಗ್ನಕುಂಡಲಿಯಲ್ಲಿ ಶನಿಯು ದುಷ್ಟ ಸ್ಥಾನಗಳಲ್ಲಿದ್ದು ಕ್ರೂರವಾಗಿದ್ದರೆ ಚಂದ್ರದಶಾ ಶನಿಭುಕ್ತಿಯಲ್ಲಿ ದೇಹ ಪೀಡೆಯು, ರಾಜದ್ವೇಷವು, ಕಲಹವು, ಜೀವನಾಶವು, ಧನಹಾನಿಯು, ಮೃತ್ಯುಭಯವು, ಮುಂತಾದವುಗಳ ಶಾಂತಿಗಾಗಿ ಸೂರ್ಯದಶಾ ರಾಹುಭುಕ್ತಿಯಲ್ಲಿ ತಿಳಿಸಿದ ಪ್ರಕಾರ ಮಹಿಷೀ ದಾನವನ್ನು ಮಾಡಿದರೆ ಕ್ಷೇಮವಾಗುವದೆಂದು ಜ್ಯೋತಿಷಾರ್ಣವ ಗ್ರಂಥದಲ್ಲಿ ಸೂಚಿಸಿದೆ. (20ನೇ ಪುಟ ನೋಡಿರಿ)



## ಚಂದ್ರದಶಾ ಬುಧಭುಕ್ತಿಯಲ್ಲಿ ಬುಧಪ್ರೀತಿಕರ ಲಕ್ಷ್ಮೀನಾರಾಯಣ ದಾನವು

ಚಂದ್ರದಶಾ ಬುಧಭುಕ್ತಿಯಲ್ಲಿ ಜನನ ಕುಂಡಲಿಯಲ್ಲಿ ಬುಧನು ದುಷ್ಟ ಸ್ಥಾನಗಳಲ್ಲಿದ್ದರೆ ಬಂಧುನಾಶವು, ರಾಜಕೋಪವು, ಹೆಂಡತಿ ಮಕ್ಕಳಿಗೆ ಪೀಡೆಯು, ಪಿತ್ತಜ್ವರಬಾಧೆಯು, ಅಪಮೃತ್ಯುಭಯವು. ಈ ದೋಷ ನಿವಾರಣೆಗಾಗಿ ಲಕ್ಷ್ಮೀನಾರಾಯಣ ಪ್ರತಿಮೆಯನ್ನು ದಾನ ಮಾಡುವದರಿಂದ ಶತ್ರುಗಳ ನಾಶವೂ, ಸರ್ವತ್ರ ವಿಜಯವೂ ಉಂಟಾಗುವವು.

ಗೋಮಯದಿಂದ ಸಾರಿಸಲ್ಪಟ್ಟ ಪವಿತ್ರ ಭೂಮಿಯಲ್ಲಿ ಯಜಮಾನನು ಭದ್ರಾಸನದಲ್ಲಿ ಕುಳಿತುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ "ಅಸ್ಯಾಂ ಶುಭತಿಥೌ ಮಮ ಸರ್ವಶತ್ರು ಕ್ಷಯಾರ್ಥಂ ಸರ್ವತ್ರ ವಿಜಯ ಪ್ರಾಪ್ತ್ಯರ್ಥಂ ಯಮಬಾಧಾ ಪರಿಹಾರಾರ್ಥಂ ಶಿವಸಾಯುಜ್ಯ (ವಿಷ್ಣು ಸಾಯುಜ್ಯ) ಪ್ರಾಪ್ತ್ಯರ್ಥಂ ಚಂದ್ರದಶಾ ಬುಧಭುಕ್ತೌ ಬುಧಪ್ರೀತಿಕರ ಲಕ್ಷ್ಮೀನಾರಾಯಣ ಪ್ರತಿಮಾದಾನಂ ಕರಿಷ್ಯೇ ತದಾದೌ ಶ್ರೀ ಮಹಾಗಣಾಧಿಪತಿ ಪೂಜಾಂ ಕರಿಷ್ಯೇ"

ಎಂದು ಸಂಕಲ್ಪ ಮಾಡಿ ಗಣಪತಿ ಪೂಜೆಯನ್ನು ಮಾಡಿ ರಂಗವಲ್ಲಿಯಿಂದ ಒಂದು ಚೌಕೋನವನ್ನು ರಚಿಸಿ ಅದರಲ್ಲಿ ಅಕ್ಕಿಯ ಗುಂಪೆಯನ್ನು (ಹತ್ತುಸೇರು ಅಥವಾ ಹತ್ತು ಸಂಖ್ಯೆಯ ಅಳತೆ) ಹಾಕಿ ಅದರೊಳು ಚಂದನದಿಂದ ಅಷ್ಟದಳ ಕಮಲವನ್ನು ಬರೆದು, ಅದರ ಮೇಲೆ ಆಕಳ ಹಾಲಿನಿಂದ ಪೂರ್ಣವಾಗಿ ತುಂಬಿದ ಒಂದು ಕೊಡ (ಕುಂಭ) ವನ್ನು ಸ್ಥಾಪಿಸಬೇಕು.

("ಯದತ್ರ ಸಂಸ್ಥಿತಂ.......ಯತ್ರಸ್ಥಂ ತತ್ರಗಚ್ಛತು")

ಈ ಮಂತ್ರದಿಂದ ಸುತ್ತಲೂ ಬಿಳಿಯ ಸಾಸಿವೆಗಳನ್ನು ಎರಚಿ

("ಆ ಪೋಹಿಷ್ಠಾ........ಆ ಪೋಜನ ಯಥಾಚನಃ")

ಈ ಮಂತ್ರದಿಂದ ಜಲವನ್ನು ಸಿಂಪಡಿಸಿ ರಂಗವಲ್ಲಿಯಿಂದ ಒಂದು ಚೌಕೋನವನ್ನು ರಚಿಸಿ,

("ಮಹೀದ್ಯೌಃ.......ಪಿಪೃತಾನ್ನೋಭರೀಮಭಿಃ")

ಈ ಮಂತ್ರದಿಂದ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ, ಮಧ್ಯ ಭೂಮಿಯನ್ನು ಮುಟ್ಟಿ.

("ಓಷಧಯಃ......ರಾಜನ್ ಪಾರಯಾಮಸಿ" ||)

ಈ ಮಂತ್ರದಿಂದ ಬಾಳೆಯ ಎಲೆಗಳನ್ನು ಹಾಸಿ

("ಯೇನತೋಕಾಯ.......ವಿಶ್ವಾಯ ಸೌಭಗಂ"||)

ಈ ಮಂತ್ರದಿಂದ ಹತ್ತುಬಳ್ಳ (ಸೇರು) ಅಕ್ಕಿಯ ಗುಂಪೆಯನ್ನು ರಚಿಸಿ ಅದರ ಮೇಲೆ ಚಂದನದಿಂದ ಅಷ್ಟದಳ ಕಮಲವನ್ನು ಬರೆದು, ಅದರ ಮೇಲೆ ಆಕಳ ಹಾಲಿನಿಂದ ತುಂಬಿದ ಒಂದು ಕುಂಭ (ಕೊಡ) ವನ್ನು

("ಆಕಲಶೇಷು......ಅಭಿದ್ರೋಣಾ ಕನಿಕ್ರದತ್"||)

ಈ ಮಂತ್ರದಿಂದ ಸ್ಥಾಪಿಸಬೇಕು.

("ಗಂಧದ್ವಾರಾಂ......ತಾಮಿ ಹೋಪಹ್ವಯೇ ಶ್ರಿಯಂ"||)

ಈ ಮಂತ್ರದಿಂದ ಕುಂಭದ ಮೇಲೆ ಗಂಧವನ್ನು ಧರಿಸಿ ಪುಷ್ಪಹಾರಗಳಿಂದ ಅಲಂಕರಿಸಿ

("ಕಾಂಡಾತ್ಕಾಂಡಾ.......ಸಹಸ್ರೇಣ ಶತೇನಚ"||)

ಈ ಮಂತ್ರದಿಂದ ಕುಂಭದ ಮೇಲೆ ದರ್ಭೆಗಳನ್ನಿಟ್ಟು

("ಅಶ್ವತ್ಥೇವೋ......ಯತ್ಸನವಥ ಪೂರುಷಂ"||)

ಈ ಮಂತ್ರದಿಂದ ಪಂಚಪಲ್ಲವ, ತುಳಸಿ ದಳಗಳನ್ನು ಇಟ್ಟು

''ಸಹಿರತ್ನಾನಿದಾಶುಷೇ ಸುವಾತಿಸವಿತಾ ಭಗಃ।
ತಂಭಾಗಂ ಚಿತ್ರಮೀ ಮಹೇ''॥

ಈ ಮಂತ್ರದಿಂದ ಪುಷ್ಯರಾಗ, ಗರುಡಪಾಚ, ವೈಢೂರ್ಯ, ಹವಳ, ಮುತ್ತುಗಳನ್ನು ಕುಂಭದಲ್ಲಿ ಹಾಕಿ

''ಹಿರಣ್ಯರೂಪಸ್ಸಹಿರಣ್ಯ ಸಂದೃಗಪಾನ್ನಪಾತ್ಸೇದು ಹಿರಣ ವರ್ಣಃ।
ಹಿರಣ್ಯಯಾತ್ಪರಿಯೋ ನೇರ್ನಿಷದ್ಯಾ ಹಿರಣ್ಯದಾದದತ್ಯನ್ನಮಸ್ಮೈ॥''

ಈ ಮಂತ್ರದಿಂದ ಕುಂಭದಲ್ಲಿ ಶಕ್ತ್ಯಾನುಸಾರ ಬಂಗಾರವನ್ನು ಹಾಕಿ

''ತಂತುಂ ತನ್ವನ್ ರಜಸೋಭಾನುಮನ್ವಿಹಿ। ಜ್ಯೋತಿಷ್ಮತಃ
ಪಥೋರಕ್ಷಧಿ ಯಾಕೃತಾನ್। ಅನುಲ್ಬಣಂ ವಯಸಜೋಗುವಾ
ಮಪೋಮನುರ್ಭವ ಜನಯಾದೈ ವಂಜನಂ'' ॥

ಈ ಮಂತ್ರವನ್ನು ಉಚ್ಚರಿಸುತ್ತ ಕುಂಭಕ್ಕೆ ಬಿಳಿಯ ದಾರವನ್ನು ಸುತ್ತಬೇಕು.

''ಯುವಾಸುವಾಸಾಃ ಪರಿವೀತ ಆಗಾತ್ ಸವುಶ್ರೇಯಾನ್ ಭವತಿ
ಜಾಯಮಾನಃ। ತಂ ಧೀರಾಸಃ ಕವಯ ಉನ್ನಯಂತಿ ಸ್ವಾಧಿಯೋ
ಮನಸಾ ದೇವಯಂತಃ'' ॥

ಈ ಮಂತ್ರವನ್ನು ಉಚ್ಚರಿಸುತ್ತ ಕುಂಭಕ್ಕೆ ಒಂದು ಕೆಂಪುವಸ್ತ್ರ ಒಂದು ಬಿಳಿಯ ವಸ್ತ್ರ ಹೀಗೆ 2 ವಸ್ತ್ರಗಳನ್ನು ಧರಿಸಿ

ಕಲಶಸ್ಯ ಮುಖೇರುದ್ರಃ ಕಂಠೇ ವಿಷ್ಣುಃ ಸಮಾಶ್ರಿತಃ।
ಮೂಲೇತತ್ರಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಸ್ಮೃತಾಃ॥
ಸರ್ವೇ ಸಮುದ್ರಾಃ ಸರಿತ ಸ್ತೀರ್ಥಾನಿ ಜಲದಾನದಾಃ।
ಆಯಾಂತು ಮಮಶಾಂತ್ಯರ್ಥಂ ದುರಿತಕ್ಷಯಕಾರಕಾಃ॥

ಎಂದು ಉಚ್ಚರಿಸುತ್ತ ಎರಡೂ ಕೈಗಳಿಂದ ಕುಂಭವನ್ನು ಮುಟ್ಟಿ ಜಲ, ಭಸ್ಮ ಕೆಂಪುಗಂಧ, ಕೆಂಪು ಅಕ್ಷತೆ, ಪತ್ರಿ ಪುಷ್ಪಾದಿಗಳಿಂದ ಕುಂಭವನ್ನು ಪೂಜಿಸಿ, ಕುಂಭದ ಮೇಲೆ ಕಂಚಿನ ಪಾತ್ರೆಯನ್ನು ಇಟ್ಟು ಅದರ ಮೇಲೆ ಕೆಂಪು ವಸ್ತ್ರವನ್ನು ಹರವಿ, ಅದರಲ್ಲಿ ಕುಂಕುಮದಿಂದ ದ್ವಾದಶ (12) ದಳ ಕಮಲವನ್ನು ಬರೆದು, ಈಶಾನ್ಯ ದಿಕ್ಕಿನಿಂದ ಅನುಕ್ರಮವಾಗಿ 12 ದಳಗಳಲ್ಲಿ ಕೇಶವ, ಜನಾರ್ದನ, ಮುಕುಂದ, ಮುರಮರ್ದನ, ಗೋವಿಂದ, ಪಕ್ಷಿವಾಹನ, ಕಮಲನಯನ, ಘನಶ್ಯಾಮ, ವೈಕುಂಠಪತಿ, ವಿಜಯ ಮಿತ್ರ, ಲಕ್ಷ್ಮೀಪತಿ, ನಾರಾಯಣ ಇವರನ್ನು ಸ್ಥಾಪಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು. ನಂತರ ಕುಂಭದ ಪಶ್ಚಿಮ ಭಾಗದಲ್ಲಿ ಐದು (5) ಕಮಲಗಳನ್ನು ರಂಗವಲ್ಲಿಯಿಂದ ರಚಿಸಿ

ಅವುಗಳ ಮೇಲೆ ಜವೆಗೋದಿ, ಭತ್ತ (ಮಧ್ಯದಲ್ಲಿ) ಹೆಸರು, ಗೋದಿ, ಉದ್ದುಗಳ ಗುಂಪೆಗಳನ್ನು ಹಾಕಿ ಆ ಐದೂ ಗುಂಪೆಗಳ ಮೇಲೆ ಜಲದಿಂದ ತುಂಬಿದ 5 ತಾಮ್ರದ ಕಲಶ (ತಂಬಿಗೆ) ಗಳನ್ನು ಸ್ಥಾಪಿಸಿ ಐದೂ ಕಲಶಗಳನ್ನು ಪಂಚಪಲ್ಲವ, ಪುಷ್ಪ ಹಾರಗಳಿಂದ ಅಲಂಕರಿಸಿ ಅದರೊಳು ಮಧ್ಯದ ಕಲಶದ ಮೇಲೆ ತಾಮ್ರದ ಹರವಾದ ಪಾತ್ರೆಯನ್ನು ಇಟ್ಟು ಅದರೊಳು ಹೆಸರು ತುಂಬಿ ಅದರ ಮೇಲೆ ರೇಶಿಮೆಯ ಹಳದಿ ವಸ್ತ್ರವನ್ನು ಹರವಿ ಅದರ ಮೇಲೆ ಪಂಚಾಮೃತದಿಂದ ಅಭಿಷೇಕ ಮಾಡಿದ ಲಕ್ಷ್ಮೀ ನಾರಾಯಣನ ಬಂಗಾರದ ಪ್ರತಿಮೆಯನ್ನು ಪ್ರತಿಷ್ಠಾಪಿಸಿ

ಓಂ ಭೂಃ ಲಕ್ಷ್ಮೀನಾರಾಯಣ ಮಾವಾಹಯಾಮಿ, ಓಂ ಭುವಃ ಲಕ್ಷ್ಮೀನಾರಾಯಣ ಮಾವಾಹಯಾಮಿ, ಓಗ್ಂ ಸುವಃ ಲಕ್ಷ್ಮೀನಾರಾಯಣ ಮಾವಾಹಯಾಮಿ ಓಂ ಭೂರ್ಭುವಸ್ಸ್ವ ಲಕ್ಷ್ಮೀ ನಾರಾಯಣ ಮಾವಾಹಯಾಮಿ

ಎಂದು ಉಚ್ಚರಿಸುತ್ತ ಮೂರ್ತಿಯ ಮೇಲೆ ಅಕ್ಷತೆಗಳನ್ನು ಹಾಕಬೇಕು. ನಂತರ ಓಂ ಭೂರ್ಭುವಃ ಸ್ವರೋಂ ಸಶಕ್ತಿ ಸಾಂಗ ಸಾಯುಧ ಸವಾಹನಸಪರಿವಾರ ಓಂ ಲಕ್ಷ್ಮೀನಾರಾಯಣ ಅತ್ರಗಚ್ಛಾಗಚ್ಛ। ಆವಾಹಯಾಮಿ ಆವಾಹಿತೋಭವ। ಸ್ಥಾಪಯಾಮಿ ಸ್ಥಾಪಿತೋಭವ। ಸನ್ನಿಹಿತೋಭವ। ಸಮ್ಮುಖೋಭವ ಅವಕುಂಠಿತೋಭವ। ವರದೋಭವ ಎಂದು ಷಣ್ಮುದ್ರೆಗಳನ್ನು ತೋರಿಸಿ

"ಓಂ ಶ್ರೀ ಲಕ್ಷ್ಮೀ ನಾರಾಯಣಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ" ಎಂದು ನಮಸ್ಕರಿಸಿ "ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ" ಎಂದು ಆಸನವನ್ನು ಮುಟ್ಟಿ "ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ" ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ "ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ" ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ "ಮುಖೇ ಆಚಮನೀಯಂ ಸಮರ್ಪಯಾಮಿ" ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಿ

"ಓಂ ಶ್ರೀ ಲಕ್ಷ್ಮೀ ನಾರಾಯಣಾಯ ನಮಃ" ಈ ಮಂತ್ರದಿಂದ ಗಂಧ, ಪುಷ್ಪಗಳಿಂದ ಪೂಜಿಸಿ ಅಷ್ಟೋತ್ತರ (108) ನಾಮಗಳನ್ನು ಉಚ್ಚರಿಸುತ್ತ ಪುಷ್ಪಗಳನ್ನು ಸಮರ್ಪಿಸಿ ಧೂಪ, ದೀಪಾದಿ ಷೋಡಶೋಪಚಾರಗಳಿಂದ ಪೂಜಾ ಮಾಡಬೇಕು. ಆಮೇಲೆ ಸುಶೀಲನೂ, ವಿದ್ಯಾವಂತನೂ, ಬಡವನೂ ಆದ ಓರ್ವ ಬ್ರಾಹ್ಮಣ ಅಥವಾ ಜಂಗಮ ಮೂರ್ತಿಯನ್ನು ರತ್ನಕಂಬಳಿಯ ಮೇಲೆ ಪೂರ್ವ ಅಥವಾ ಉತ್ತರಾಭಿಮುಖವಾಗಿ ಕೂಡ್ರಿಸಿ ಆತನ ಪಾದ ಪೂಜಾ ಮಾಡಿ ಗಂಧ, ಪುಷ್ಪ, ವಸ್ತ್ರ ಆಭರಣಾದಿಗಳನ್ನು ಸಮರ್ಪಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಲಕ್ಷ್ಮೀನಾರಾಯಣ ಪ್ರತಿಮೆಯನ್ನು ಕುಂಭ ವಗೈರೆ ಎಲ್ಲವನ್ನೂ ಯಥಾ ಶಕ್ತಿ ದಕ್ಷಿಣೆ ಸಹಿತ ದಾನ ಕೊಡಬೇಕು.

ಮಂತ್ರ- ಲಕ್ಷ್ಮೀರಮಣ ದೇವೇಶ ಸರ್ವಾಭೀಷ್ಟಫಲಪ್ರದ।
ದಾನೇನಾನೇನ ಸುಪ್ರೀತಃ ಪ್ರಯಚ್ಛಮಮವಾಂಛಿತಂ।
ದಾನ ಪ್ರತಿಷ್ಠಾ ಸಿದ್ಧ್ಯರ್ಥಂ ತದರ್ಥಂ ದಕ್ಷಿಣಾಮತಂ।
ಉಕ್ತ ಮಾರ್ಗೇಣ ಚೇದ್ದಾನಮನಂತ ಫಲದಾಯಕಂ।
ಭೂರಿದಾನಂಚ ವಿಪ್ರೇಭ್ಯಸ್ತಥಾ ಕುರ್ಯಾತ್ಸ್ವಶಕ್ತಿತಃ॥

ಈ ಪ್ರಕಾರ ಲಕ್ಷ್ಮೀನಾರಾಯಣನನ್ನು ದಾನ ಮಾಡುವದರಿಂದ ಮಾಟ, ಮದ್ದು ವಗೈರೆ ಎಲ್ಲ ಅಭಿಚಾರ ದೋಷಗಳು, ಜಲಗಂಡ ದೋಷಗಳು, ಅಗ್ನಿಭಯ, ಶಸ್ತ್ರಭಯ ಅಪಮೃತ್ಯು ಭಯ, ಯಂತ್ರ, ಮಂತ್ರ, ತಂತ್ರ ವಗೈರೆ ಸ್ಫೋಟಕಗಳು ನಿವಾರಣೆಯಾಗಿ ಶತ (100) ವರ್ಷಗಳವರೆಗೆ ಸುಖ-ಸಂತೋಷಗಳಲ್ಲಿರುವರು.



## ಚಂದ್ರದಶಾ ಕೇತುಭುಕ್ತಿಯಲ್ಲಿ ಕೇತು ಪ್ರೀತಿಕರ ಛಾಗ (ಮೇಕೆ) ದಾನವು

ಜನನ ಕುಂಡಲಿಯಲ್ಲಿ ಕೇತು ದುಷ್ಟ ಸ್ಥಾನಗಳಲ್ಲಿದ್ದುದಾದರೆ ಚಂದ್ರ ದಶಾಕೇತು ಭುಕ್ತಿಯಲ್ಲಿ ರೋಗ ಪೀಡೆಯು, ಶತ್ರುಭೀತಿಯು, ಧನನಾಶವು, ಸೆರೆಮನೆ ವಾಸವು, ಅಪಮೃತ್ಯು ಭಯವು. ಈ ದೋಷ ಪರಿಹಾರಕ್ಕಾಗಿ ಸೂರ್ಯದಶಾ ಶನಿಭುಕ್ತಿಯಲ್ಲಿ ತಿಳಿಸಿದ ಪ್ರಕಾರ ಛಾಗ (ಮೇಕೆ) ದಾನವನ್ನು ಮಾಡುವದರಿಂದ ರೋಗ ನಿವಾರಣೆಯು, ಯಜಮಾನನಿಗೆ ಆರೋಗ್ಯವು, ಆಯುರ್‌ವೃದ್ಧಿಯು, ಸರ್ವ ಸಂಪತ್‌ಪ್ರದಾಯಕವು ಆಗುವದೆಂದು ಯಾಮಳ ತಂತ್ರದಲ್ಲಿ ಹೇಳಿರುವದು. (ಪುಟ 26 ನೋಡಿರಿ)



## ಚಂದ್ರದಶಾ ಶುಕ್ರಭುಕ್ತಿಯಲ್ಲಿ ಶುಕ್ರಪ್ರೀತಿಕರ ಮಹಿಷೀ ದಾನವು

ಜನನ ಕುಂಡಲಿಯಲ್ಲಿ ಶುಕ್ರನು 6-8-12 ಈ ದುಷ್ಟ ಸ್ಥಾನಗಳಲ್ಲಿದ್ದು ಕ್ರೂರನಾಗಿದ್ದರೆ ಅವನ ಭುಕ್ತಿಯಲ್ಲಿ ದೇಹತಾಪವು, ಶತ್ರುಗಳ ಪೀಡೆಯು. ಈ ದೋಷ ಪರಿಹಾರಕ್ಕಾಗಿ ಶ್ರೀ ರುದ್ರಜಪ ಅಥವಾ ಏಕಾದಶ ರುದ್ರಾಭಿಷೇಕ ಬಿಳಿಯ ಆಕಳ ದಾನ ಮತ್ತು ಎಮ್ಮೆಯ ದಾನ ಮಾಡುವದರಿಂದ ಶಾಂತಿಯಾಗುವದೆಂದು ಯಾಮಳ ತಂತ್ರದಲ್ಲಿ ಹೇಳಿರುವದು. ಎಮ್ಮೆ (ಮಹಿಷಿ) ದಾನವನ್ನು ಸೂರ್ಯದಶಾ ರಾಹು ಭುಕ್ತಿಯಲ್ಲಿ ವಿವರಿಸಿದ ಪ್ರಕಾರ ಮಾಡಬೇಕು. (ಪುಟ 20 ನೋಡಿರಿ)

## ಚಂದ್ರದಶಾ ರವಿಭುಕ್ತಿಯಲ್ಲಿ ರವಿಪ್ರೀತಿಕರ ದುರ್ಗಾ ದಾನವು

ಜನನ ಕುಂಡಲಿಯಲ್ಲಿ ರವಿಯು 2–7 ಸ್ಥಾನಗಳಲ್ಲಿ ಪಾಪಗ್ರಹಯುತನಾಗಿಯೂ, ಬಲಹೀನನಾಗಿಯೂ ಇದ್ದರೆ ರವಿಭುಕ್ತಿಯಲ್ಲಿ ಜ್ವರಬಾಧೆಯು, ಅಗ್ನಿಭಯವು, ಸರಕಾರದವರಿಂದ ಉಪದ್ರವ, ಅಗ್ನಿಭಯ, ಅತಿಸಾರ, ಕ್ಷಯ, ವಾಯುಗುಲ್ಮ ಇತ್ಯಾದಿ ರೋಗ ಪೀಡೆಯು. ಈ ದೋಷ ಪರಿಹಾರಕ್ಕಾಗಿ ಚಂದ್ರದಶಾ ಗುರುಭುಕ್ತಿಯಲ್ಲಿ ತಿಳಿಸಿದ ಪ್ರಕಾರ ದುರ್ಗಾ ದಾನವನ್ನು ಮಾಡಬೇಕೆಂದು ಯಾಮಳ ತಂತ್ರದ ಸಂಹಿತಾರ್ಣವದಲ್ಲಿ ಹೇಳಿರುವದು. (ಪುಟ 39 ನೋಡಿರಿ)



## ಕುಜದಶಾದಲ್ಲಿ ಕುಜನಿಗೆ ಪ್ರಿಯಕರವಾದ ತಾಮ್ರಪದ್ಮ ದಾನವು

ಜನನ ಕುಂಡಲಿಯಲ್ಲಿ ಕುಜನು ದುಷ್ಟ ಸ್ಥಾನಗಳಲ್ಲಿದ್ದು ಕ್ರೂರನಾಗಿದ್ದರೆ ಅವನ ದಶಾಕಾಲದಲ್ಲಿ ಮಾನಹಾನಿಯು, ಧನಹಾನಿಯು, ಪ್ರಾಣಹಾನಿಯು, ಸ್ಥಾನ ಬಿಟ್ಟು ತಿರುಗಾಡುವಿಕೆಯು, ಸರಕಾರದ ಕೋಪವು, ಉಪದ್ರವವು, ದಾರಿದ್ರ್ಯವು, ದುಃಖವು, ಇವೆಲ್ಲವುಗಳ ನಿವಾರಣೆಗಾಗಿಯೂ ಆಯುಷ್ಯ ಆರೋಗ್ಯಗಳ ವೃದ್ಧಿಗಾಗಿಯೂ ತಾಮ್ರದ ಪದ್ಮ(ಕಮಲ)ವನ್ನು ದಾನ ಮಾಡಬೇಕು. ಅದು ಹೇಗೆಂದರೆ– ಮಂಗಳವಾರ ದಿವಸ ಮನೆಯಲ್ಲಿ ಅಥವಾ ದೇವಾಲಯದಲ್ಲಿ ಗೋಮಯದಿಂದ ಸಾರಿಸಿ ಶುದ್ಧಗೊಳಿಸಿದ ಭೂಮಿಯಲ್ಲಿ ರಂಗವಲ್ಲ್ಯಾದಿಗಳಿಂದ ಅಲಂಕಾರ ಮಾಡಿ ಅಲ್ಲಿ ಯಜಮಾನನು ಭದ್ರಾಸನದ ಮೇಲೆ ಕುಳಿತುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ.

"ಅಸ್ಯಾಂ ಶುಭತಿಥೌ ಮಮ ಸರ್ವಾರಿಷ್ಟನಿವಾರಣಾರ್ಥಂ ಆಯುರಾರೋಗ್ಯ ಸಿದ್ಧ್ಯರ್ಥಂ ಸರ್ವಾಭೀಷ್ಟ ಪ್ರಾಪ್ತ್ಯರ್ಥಂ ಕುಜಗ್ರಹ ಪ್ರೀತಿಕರ ತಾಮ್ರ ಪದ್ಮದಾನಂ ಕರಿಷ್ಯೇ–ತದಾದೌ ಶ್ರೀ ಮಹಾಗಣಾಧಿಪತಿ ಪೂಜಾಂ ಕರಿಷ್ಯೇ"

ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಿ ಬಳಿಕ ಆಚಾರ್ಯನಿಗೆ ಕೆಂಪುವಸ್ತ್ರ, ಪುಷ್ಪಹಾರ, ದಕ್ಷಿಣೆ, ತಾಂಬೂಲಗಳನ್ನು ಸಮರ್ಪಿಸಿದ ನಂತರ

("ಯದತ್ರ ಸುಸ್ಥಿತಂ.....ಯತ್ರಸ್ಥಂ ತತ್ರಗಚ್ಛತು"॥)

ಈ ಮಂತ್ರದಿಂದ ಸುತ್ತಲೂ ಬಿಳಿಯ ಸಾಸಿವೆಗಳನ್ನು ಎರಚಿ

("ಆಪೋಹಿಷ್ಠಾ.........ಆಪೋಜನ ಯಥಾಚನಃ"॥)

ಈ ಮಂತ್ರದಿಂದ ಜಲವನ್ನು ಸಿಂಪಡಿಸಿ ರಂಗವಲ್ಲಿಯಿಂದ ಅಷ್ಟದಳ ಕಮಲವನ್ನು ರಚಿಸಿ ತಾಮ್ರದ ಕಲಶವನ್ನು ಸ್ಥಾಪಿಸಿ ಅದರ ಮೇಲೆ ತೊಗರೆಯಿಂದ ತುಂಬಿದ ಒಂದು ಪಾತ್ರೆ (ತಾಟು) ಯನ್ನು ಇಟ್ಟು ಅದರಲ್ಲಿ21 ಎಸಳುಗಳುಳ್ಳ ತಾಮ್ರದ ಕಮಲವನ್ನು ಸ್ಥಾಪಿಸಿ ಪೂಜಿಸಬೇಕು.

("ಮಹೀದ್ಯೌಃ.......ಪಿಪೃತಾನೋ ಭರೀಮಭಿಃ"॥)

ಈ ಮಂತ್ರದಿಂದ ದಕ್ಷಿಣೋತ್ತರ ಭೂಮಿಯನ್ನು ಮುಟ್ಟಿ

(ಓಷಧಯಃ........ರಾಜನ್ ಪಾರಯಾಮಸಿ"॥)

ಈ ಮಂತ್ರದಿಂದ ಬಾಳೆಯ ಎಲೆಯನ್ನು ಹಾಸಿ

("ಯೇನತೋಕಾಯ......ವಿಶ್ವಾಯ ಸೌಭಗಂ"॥)

ಈ ಮಂತ್ರದಿಂದ ಒಂದು ಬಳ್ಳ (ಸೇರು) ತೊಗರೆ ಧಾನ್ಯದ ಗುಡ್ಡೆಯನ್ನು ರಚಿಸಿ

("ಆಕಲಶೇಷು.........ಅಭಿದ್ರೋಣಾಕನಿಕ್ರದತ್")

ಈ ಮಂತ್ರದಿಂದ ತೊಗರೆಯ ಗುಂಪೆಯ ಮೇಲೆ ತಾಮ್ರದ ಕಲಶವನ್ನು ಸ್ಥಾಪಿಸಿ

("ಇಮಂಮೇ......ಶೃಣುಹ್ಯಾಸುಷೋಮಯಾ"॥)

ಈ ಮಂತ್ರದಿಂದ ಕಲಶದಲ್ಲಿ ಜಲವನ್ನು ತುಂಬಿ

("ಗಂಧದ್ವಾರಾಂ.......ತಾಮಿಹೋಪಹ್ವಯೇಶ್ರಿಯಂ"॥)

ಈ ಮಂತ್ರದಿಂದ ಕಲಶದಲ್ಲಿ ಗಂಧವನ್ನು ಹಾಕಿ ಹಾಗೂ ಮೇಲೆಯೂ ಧರಿಸಿ ಪುಷ್ಪಹಾರಗಳಿಂದ ಅಲಂಕರಿಸಿ

("ಕಾಂಡಾತ್ಕಾಂಡಾ......ಸಹಸ್ರೇಣ ಶತೇನಚ"॥)

ಈ ಮಂತ್ರದಿಂದ ದರ್ಭೆಗಳನ್ನಿಟ್ಟು

(ಅಶ್ವತ್ಥೇವೋ ನಿಷದನಂ........ಯತ್ಸನವಥ ಪೂರುಷಂ"॥)

ಈ ಮಂತ್ರದಿಂದ ಪಂಚಪಲ್ಲವಗಳನ್ನು ಇಟ್ಟು

("ಯಾಃ ಫಲಿನೀರ್ಯಾ......ಮುಂಚತ್ವಗ್ಂ ಹಸಂಃ")

ಈ ಮಂತ್ರದಿಂದ ಕಲಶದ ಮೇಲೆ ತೆಂಗಿನಕಾಯಿಯನ್ನು ಇಟ್ಟು

("ಹಿರಣ್ಯರೂಪ.......ಹಿರಣ್ಯದಾದತ್ಯನ್ನಮಸ್ಮೈ"॥)

ಈ ಮಂತ್ರದಿಂದ ಕಲಶದಲ್ಲಿ ಬಂಗಾರವನ್ನು ಹಾಕಿ

("ತಂತುಂತನ್ವನ್.......ಜನಯಾದೈವ್ಯಂಜನಂ"॥)

ಈ ಮಂತ್ರದಿಂದ ಕಲಶಕ್ಕೆ ಕೆಂಪು ದಾರವನ್ನು ಸುತ್ತಿ

(ಯುವಾಸುವಾಃ......ಮನಸಾ ದೇವಯಂತಃ'' ॥)

ಈ ಮಂತ್ರದಿಂದ ಕಲಶಕ್ಕೆ ಕೆಂಪು ವಸ್ತ್ರವನ್ನು ಧರಿಸಿ

ಕಲಶಸ್ಯ ಮುಖೇರುದ್ರಃ ಕಂಠೇವಿಷ್ಣುಃ ಸಮಾಶ್ರಿತಃ।
ಮೂಲೇತತ್ರಸ್ಥಿತೋ ಬ್ರಹ್ಮಾ ಮಧ್ಯೇಮಾತೃಗಣಾಃಸ್ಮೃತಾಃ॥
ಸರ್ವೇ ಸಮುದ್ರಾಃ ಸರಿತ ಸ್ತೀರ್ಥಾನಿ ಜಲದಾನದಾಃ।
ಆಯಾಂತುಯ ಜಮಾನಸ್ಯ ದುರಿತಕ್ಷಯ ಕಾರಕಾಃ''

ಎಂದು ಉಚ್ಚರಿಸುತ್ತಕಲಶವನ್ನು ಮುಟ್ಟಿ ಜಪಿಸಿ

''ಪೂರ್ಣಾದೇವೀ ಪರಾಪತ ಸಪೂರ್ಣಾ ಪುನರಾಪತ।
ವಸ್ನೇವ ವಿಕ್ರಿಣಾವಹ ಇಷ ಮೂರ್ಜಗ್ಂ ಶತಕ್ರತೋ'' ॥

ಈ ಮಂತ್ರವನ್ನು ಅನ್ನುತ್ತಕಲಶದ ಮೇಲೆ ತೊಗರೆಯಿಂದ ತುಂಬಿದ ಅಗಲವಾದ ಪಾತ್ರೆ (ತಾಟು) ಯನ್ನು ಇಟ್ಟು ಅದರಲ್ಲಿರುವ ತೊಗರೆಯ ಮೇಲೆ ತ್ರಿಕೋನಾಕಾರದ ಆಕೃತಿ ರಚಿಸಿ ಅದರ ಮೇಲೆ ಪಂಚಾಮೃತದಿಂದ ಅಭಿಷೇಕ ಮಾಡಿದ 21 ಎಸಳು (ದಳ) ಗಳುಳ್ಳ ತಾಮ್ರದ ಕಮಲವನ್ನು ಇಟ್ಟು ಅದರ ಮೇಲೆ ಕತ್ತಿ ಶೂಲ, ಗಧೆ, ಪಾಶಗಳನ್ನು ಧರಿಸಿದ ವರದಹಸ್ತಚತುರ್ಭುಜ, ಮೇಷ ವಾಹನನಾದ ಬಂಗಾರದ ಕುಜನ ಪ್ರತಿಮೆಯನ್ನು ಸ್ಥಾಪಿಸಿ

ಧ್ಯಾನ- ಯಾಮ್ಯೇಗಧಾಶಕ್ತಿ ಧರಿಸ್ತ್ರಿ ಶೂಲೀವರಪ್ರದೋಯಾಮ್ಯ ಮುಖೋತಿರಿಕ್ತಃ।
ಕುಜಸ್ತ್ವವಂತೀ ವಿಷಮಸ್ತ್ರಿ ಕೋಣಸ್ತಸ್ಮಿನ್ ಭರದ್ವಾಜಕುಲೇ ಪ್ರಸೂತಃ॥
ರಕ್ತಾಂಬರೊ ರಕ್ತವಪುಃ ಕೀರಿಟೀ ಚತುರ್ಭುಜೋ ಮೇಷ
ಗಮೋಗದಾಭೃತ್।
ಧರಾಸುತಶ್ಶಕ್ತಿ ಧರಶ್ಚಶೂಲೀ ಸದಾಮಮ ಸ್ಯಾದ್ವರದಃ ಪ್ರಶಾಂತಃ॥

ಅಗ್ನಿ ಮೂರ್ಧಾದಿವಃ ಕಕುತ್ಪತಿಃ ಪೃಥಿವ್ಯಾ ಅಯಂ ಅಪಗ್ಂ ರೇತಾಗ್ಂ ಸಿಜಿನ್ವತಿ॥
ರಕ್ತ ಮಾಲ್ಯಾಂ ಬರಧರಂ ಮೇಷಾರೂಢಂ ಚತುರ್ಭುಜಂ।
ಶಕ್ತಿಶೂಲ ಗದಾಪಾಶಂ ವರದಂ ಪೂಜಯೇತ್ಕುಜಂ॥

ಎಂದು ಕುಜನನ್ನು ಪ್ರಾರ್ಥಿಸಿ

ಓಂ ಭೂಃ ಕುಜ ಗ್ರಹ ಮಾವಾಹಮಾಮಿ । ಓಂ ಭುವಃ ಕುಜಗ್ರಹ ಮಾವಾಹಯಾಮಿ। ಓಂ ಭೂರ್ಭುವಃ ಸ್ವಃ ಕುಜಗ್ರಹ ಮಾವಾಹಯಾಮಿ ಸ್ಥಾಪಯಾಮಿ। ಪೂಜಯಾಮಿ।

ಎಂದು ಉಚ್ಚರಿಸಿ ಆವಾಹನೆ ಮಾಡಿ ಪೂಜಿಸಬೇಕು.

ಶುದ್ಧೋದಕ, ಭಸ್ಮ, ಕೆಂಪು ಗಂಧ, ಕೆಂಪು ಅಕ್ಷತೆಗಳಿಂದ ಪೂಜಿಸಿ ಅಂಗಾರಕನ 21 ನಾಮಗಳನ್ನು ಉಚ್ಚರಿಸುತ್ತ ಕೆಂಪು ಕಣಗಿಲ ಹೂಗಳನ್ನು ಧರಿಸಬೇಕು.

ನಾಮಗಳು :- ಮಂಗಳಃ, ಭೂಮಿಪುತ್ರಃ, ಋಣಹರ್ತಾ, ಧನಪ್ರದಃ, ಸ್ಥಿರಾಸನಃ, ಮಹಾಕಾಯಃ, ಸರ್ವಕರ್ಮಾವರೋಧಕಃ, ಧರ್ಮಾತ್ಮಜಃ, ಕುಜಃ, ಭೌಮಃ, ಭೂತಿದಃ, ಭೂಮಿನಂದನಃ, ಅಂಗಾರಕಃ ಯಮಃ, ಸರ್ವರೋಗಾಪಹಾರಕಃ, ವೃಷ್ಟಿಹರ್ತಾ, ವೃಷ್ಟಿಕರ್ತಾ, ಸರ್ವಕಾಮ ಫಲಪ್ರದಃ॥

ಈ ನಾಮಗಳನ್ನು ಉಚ್ಚರಿಸುತ್ತ ಪುಷ್ಪಗಳನ್ನು ಧರಿಸಿ ಧೂಪ, ದೀಪಗಳನ್ನು ಬೆಳಗಿ ಬೆಲ್ಲ, ಅನ್ನವನ್ನು ನೈವೇದ್ಯ ಮಾಡಿ ತಾಂಬೂಲ, ದಕ್ಷಿಣೆಗಳನ್ನು ಸಮರ್ಪಿಸಿ.

ಭೂಮಿಪುತ್ರ ಮಹಾಕಾಯ ಸ್ವೇದೋದ್ಭವ ಪಿನಾಕಿನಃ।
ಶ್ರೇಯಸ್ತ್ವಂ ಪ್ರಸನ್ನೋಸಿ ಗೃಹಣಾರ್ಘ್ಯಂ ನಮೋಸ್ತುತೇ॥

ಎಂದು ಪ್ರದಕ್ಷಿಣ, ನಮಸ್ಕಾರಗಳನ್ನು ಮಂತ್ರ ಪುಷ್ಪಗಳನ್ನು ಸಮರ್ಪಿಸಬೇಕು. ನಂತರ ಆಚಾರ್ಯರಿಗೆ ಅರ್ಘ್ಯವನ್ನು ಕೊಟ್ಟು ಕೆಳಗಿನ ಮಂತ್ರವನ್ನು ಅನ್ನುತ್ತ ತಾಮ್ರದ ಕಮಲವನ್ನೂ ಬಂಗಾರದ ಕುಜ ಪ್ರತಿಮೆಯನ್ನೂ ತಾಮ್ರದ ಕಲಶ ಸಹಿತ ದಾನ ಕೊಡಬೇಕು.

ತುವರೀರಾಶಿಮಾರೂಢ ತಾಮ್ರ ಪಾತ್ರೇವಿನಿರ್ಮಿತಂ।
ದದಾಮಿಪದ್ಮಂ ಭೌಮೋತ್ಥ ಪೀಡಾಂದಹತು ಮೇಕುಜಃ॥
ಅನೇಕ ವಿಧಿನಾಭೌಮ ಪ್ರೀತಿಮಾದಾನಕೃನ್ನರಃ।
ಆದಿವ್ಯಾಧಿ ವಿನಿರ್ಮುಕ್ತ ಸ್ಸರ್ವ ಸೌಭಾಗ್ಯಮಶ್ನುತೇ॥

ಎಂದು ಉಚ್ಚರಿಸುತ್ತ ದಕ್ಷಿಣೆ ಸಹಿತ ದಾನ ಮಾಡುವದರಿಂದ ಕುಜದೋಷ ಶಾಂತಿಯಾಗುವದೆಂದು ಯಾಮಳ ತಂತ್ರದಲ್ಲಿ ಹೇಳಲಾಗಿದೆ.



## ಕುಜದಶಾ ಕುಜಭುಕ್ತಿಯಲ್ಲಿ ಕುಜಪ್ರೀತಿಕರ ಅನಡ್ವಾಹ (ಎತ್ತು) ದಾನವು

ಜನನ ಕುಂಡಲಿಯಲ್ಲಿ ಕುಜನು 6–8–12 ಸ್ಥಾನಗಳಲ್ಲಿದ್ದರೆ ಪಾಪ ಗ್ರಹಗಳೊಡನೆ ಕೂಡಿದ್ದರೆ, ನೀಚ ಗ್ರಹಗಳೊಡನೆ ಕೂಡಿದ್ದರೆ, ನೀಚ ರಾಶಿಗಳಲ್ಲಿದ್ದರೆ, ದ್ವಿತೀಯ ಹಾಗೂ ಸಪ್ತಮಾಧಿಪತಿಗಳೊಡನೆ ಕೂಡಿಕೊಂಡಿದ್ದರೆ, ಮಹಾ ವ್ಯಾಧಿ ಭಯವು, ಅಗ್ನಿಭಯವು, ಚೋರರ ಉಪದ್ರವವು. ಹೆಂಡತಿ–ಮಕ್ಕಳ ನಾಶವು, ಸರಕಾರದವರಿಂದ ಪೀಡೆಯು. ಈ ದೋಷ ಪರಿಹಾರಕ್ಕಾಗಿ ಸುಬ್ರಹ್ಮಣ್ಯ ಜಪ ಮಾಡಿಸಿದ ನಂತರ

ಸೂರ್ಯದಶಾ ಕುಜಭುಕ್ತಿಯಲ್ಲಿ ತಿಳಿಸಿದ ಪ್ರಕಾರ ಅನಡ್ವಾಹ (ವೃಷಭ) ದಾನ ಮಾಡುವದರಿಂದ ಸಮಸ್ತಪಾಪ ಪರಿಹಾರವು, ಆರೋಗ್ಯವು, ಭಾಗ್ಯವು ಎಂಬುದಾಗಿ ಜ್ಯೋತಿಷಾರ್ಣವ ಗ್ರಂಥದಲ್ಲಿ ಹೇಳಲಾಗಿದೆ. (ಪುಟ 17 ನೋಡಿ)



## ಕುಜದಶಾ ರಾಹುಭುಕ್ತಿಯಲ್ಲಿ ರಾಹು ಪ್ರೀತಿಕರ ಮಹಷೀ ದಾನ ಮತ್ತು ಕೃಷ್ಣಧೇನು ದಾನವು

ಜನನ ಕುಂಡಲಿಯಲ್ಲಿ ರಾಹು 6–8–12 ಸ್ಥಾನಗಳಲ್ಲಿದ್ದರೆ, ದ್ವಿತೀಯ ಸಪ್ತಮಾಧಿಪತಿಗಳೊಡನೆ ಕೂಡಿದ್ದರೆ ಕಳ್ಳರ ಉಪದ್ರವವು, ಅಗ್ನಿಭಯವು, ಭೂತಬಾಧೆಯು, ಅಪಸ್ಮಾರಾದಿ ರೋಗ ಪೀಡೆಯು, ವ್ರಣ ಬಾಧೆಯು. ಈ ದೋಷ ಪರಿಹಾರಕ್ಕಾಗಿ ಸೂರ್ಯದಶಾ ರಾಹು ಭುಕ್ತಿಯಲ್ಲಿ ತಿಳಿಸಿದ ಪ್ರಕಾರ ಎಮ್ಮೆ ಹಾಗೂ ಕಪ್ಪು ಬಣ್ಣದ ಆಕಳನ್ನು ದಾನ ಮಾಡುವದರಿಂದ ಪೀಡೆ ಪರಿಹಾರವಾಗುವದೆಂದು ನಾರದೀಯದಲ್ಲಿ ತಿಳಿಸಲಾಗಿದೆ (ಪುಟ 20 ನೋಡಿರಿ)



## ಕುಜದಶಾ ಗುರುಭುಕ್ತಿಯಲ್ಲಿ ಗುರುಪ್ರೀತಿಕರ ಸುವರ್ಣ ದಾನವು

ಜನನ ಕುಂಡಲಿಯಲ್ಲಿ ಗುರು ದ್ವಿತೀಯ ಸಪ್ತಮ ಸ್ಥಾನಗಳಲ್ಲಿದ್ದು 6–8–12ನೆಯ ಸ್ಥಾನಾಧಿಪತಿಗಳೊಡನೆ ಕೂಡಿದ್ದು ಅತ್ಯಂತ ಬಲಹೀನನಾಗಿದ್ದರೆ ಗುರುಭುಕ್ತಿಯಲ್ಲಿ ಮೂತ್ರ ಕೃಚ್ಛ್ರಾದಿ ರೋಗವು, ಪಿತ್ಥವಿಕಾರವು (ಬ್ಲಡ್ ಪ್ರೆಶರ್ ಬಿ.ಪಿ.) ಈ ದೋಷ ಪರಿಹಾರಕ್ಕಾಗಿ ಶಿವ ಸಹಸ್ರನಾಮ ಜಪ ಮತ್ತು . ಸೂರ್ಯದಶಾ ಗುರುಭುಕ್ತಿಯಲ್ಲಿ ತಿಳಿಸಿದಂತೆ ಸುವರ್ಣದಾನ ಮಾಡುವದರಿಂದ ಸರ್ವಭಯ ವರ್ಜ್ಯವು. (ಪುಟ 25 ನೋಡಿರಿ)



## ಕುಜದಶಾ ಶನಿಭುಕ್ತಿಯಲ್ಲಿ ಶನಿಪ್ರೀತಿಕರ ತಿಲಪಿಷ್ಟ ಮತ್ತು ಮೃತ್ಯು ಪ್ರತಿಮಾ ದಾನವು

ಜನನ ಕುಂಡಲಿಯಲ್ಲಿ ಶನಿಯು ನೀಚ ರಾಶಿಯಲ್ಲಿಯೂ, ಶತ್ರುಕ್ಷೇತ್ರಗಳಲ್ಲಿಯೂ 2–7 ಹಾಗೂ 6–8–12 ನೆಯ ಸ್ಥಾನಾಧಿಪತಿಗಳೊಡನೆ ಕೂಡಿಕೊಂಡು ಪಾಪಿಷ್ಟನಾಗಿದ್ದರೆ ದೇಹಕ್ಕೆ ತಾಪವು, ಕಲಹವು, ಚಿಂತೆಯು, ಶಿರೋರೋಗವು (ತಲೆಗೆ

ಸಂಬಂಧಿಸಿದ್ದು ಈ ದೋಷ ಪರಿಹಾರಕ್ಕಾಗಿ ಮೃತ್ಯುಂಜಯ ಜಪವನ್ನು ಮಾಡಿಸಿ ತಿಲಪಿಷ್ಟ ಮೃತ್ಯು ಪ್ರತಿಮಾದಾನ ಮಾಡುವದರಿಂದ ವಿಷ ಬಾಧೆಯು, ಕೃತ್ರಿಮ ಮಾಟ, ಮದ್ದು ತಂತ್ರಗಳಿಂದುಂಟಾದ ಸರ್ವ ದೋಷ ಹಾಗೂ ಸರ್ವ ಭಯ ನಿವಾರಣೆಯಾಗುವದು.



## ಮೃತ್ಯುಂಜಯ ಜಪ ಶಾಂತಿ ಪ್ರಯೋಗ

ಈ ಜಪ ಶಾಂತಿಯನ್ನು ಪೂಜ್ಯರೂ, ಸದಾಚಾರ ಸಂಪನ್ನರೂ, ಧರ್ಮ ಕಾರ್ಯಗಳನ್ನು ಮಾಡಲು ಸಮರ್ಥರೂ ಆದ ಮಾಹೇಶ್ವರರಿಂದ ಮಾಡಿಸತಕ್ಕದ್ದು ಅಥವಾ ತಾನು ಸ್ವತಃ ಮಾಡತಕ್ಕದ್ದು

ಮೃತ್ಯುಂಜಯ ಜಪವನ್ನು ಮಾಡತಕ್ಕವರು ಉಷಃಕಾಲದಲ್ಲಿ ಎದ್ದು ನಿತ್ಯ ಕ್ರಿಯೆಗಳನ್ನು ತೀರಿಸಿಕೊಂಡು ಜಪ ಮಾಡತಕ್ಕ ಸ್ಥಳವನ್ನು ಪಂಚಗವ್ಯ ಹಾಗೂ ಗೋರೋಜನ ಸಹಿತವಾಗಿ ಸಾರಣೆ ಮಾಡಿಸಿ ಶುಚಿಯಾಗಿ ಮಾಡಿ, ರಂಗವಲ್ಯಾದಿಗಳಿಂದ ಅಲಂಕರಿಸಿ ಕಂಬಲ್ಯಾದಿ ಆಸನಗಳ ಮೇಲೆ ಪೂರ್ವ ಅಥವಾ ಉತ್ತರಕ್ಕೆ ಮುಖಮಾಡಿ ಕುಳಿತುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ–

'ಓಂ ಗುರವೇ ನಮಃ, ಓಂ ಗಣಾಧಿಪತಯೇ ನಮಃ, ಓಂ ಇಷ್ಟದೇವತಾಯೈ ನಮಃ

ಎಂದು ಗುರುವನ್ನೂ, ಗಣಪತಿಯನ್ನೂ, ಇಷ್ಟ ದೇವತೆಯನ್ನೂ ಧ್ಯಾನಿಸಿ ಸಂಕಲ್ಪ ಮಾಡಬೇಕು– ದೇಶ ಕಾಲಾದಿಗಳನ್ನು ಉಚ್ಚರಿಸಿ ನಂತರ...........

ಏವಂಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ..........ಶುಭತಿಥೌ ಅಮುಕ ಗೋತ್ರಃ ಅಮುಕ.......ಶರ್ಮ ಮಮ ಸರ್ವಾರಿಷ್ಟಪರಿಹಾರದ್ವಾರಾ ಸರ್ವಾಭಿಷ್ಟಸಿದ್ಧ್ಯರ್ಥಂ ಜನ್ಮ ನಕ್ಷತ್ರ ಜನ್ಮರಾಶಿವಶಾತ್-ನಾಮನಕ್ಷತ್ರ ನಾಮರಾಶಿವಶಾತ್ ಸಂಭಾವಿತ ಸಮಸ್ತದುಷ್ಟಾರಿಷ್ಟ ಪರಿಹಾರಾರ್ಥಂ ಮಮ ಇಹ ಜನ್ಮನಿ ಜನ್ಮಾಂತರೇಷು ಅಜ್ಞಾನ ತೋಜ್ಞಾನತಶ್ಚ ಕೃತಾನಾಂ ಪಾಪಾನಾಂ ಅಪನೋದನಾರ್ಥಂ ಅಂಗ ಗ್ರಹವಶಾತ್ ಗೋಚಾರ ಗ್ರಹವಶಾತ್ ಷಣ್ಣಕ್ಷತ್ರ ಗ್ರಹವಶಾತ್ । ಲತ್ತೋಪಲತ್ತ ಗ್ರಹವಶಾತ್ ಸರ್ವತೋಭದ್ರ ವಶಾತ್ ಜನ್ಮ ಲಗ್ನ ಹೋರಾ ದ್ರೇಕ್ಕಾಣ ನವಾಂಶ ದ್ವಾದಶಾಂಶ ತ್ರಿಂಶಾಂಶಾತ್ಮಕ ಷಡ್ವರ್ಗ ವಶಾತ್ ಜಾತಕೋ ದೀರಿತ ಮಹದರ್ಶಾಂತರ್ದಶ ಅಂತರಾಂತರ್ದಶ ಸೂಕ್ಷ್ಮದಶ ಪ್ರಾಣದಶಾವಶಾತ್ । ವಾಮವೇಧಾ ಪಾರ್ಶ್ವವೇಧಾ ದಕ್ಷಿಣವೇಧಾ ಸಮ್ಮುಖ ವೇಧಾ ವಶಾತ್ ಮಮ ಜನ್ಮ ಕರ್ಮಾಧಾನ ಸಾಂಘಾತಿಕ ಸಾಮುದಾಯಿಕ ವೈನಾಶಿಕ ಮಾನಸಿಕಾದಿ ನಕ್ಷತ್ರ ವಶಾತ್ ದಿನಚರ್ಯ ಕಾಲಚರ್ಯ

ವಶಾತ್ ಸಿಂಹಾವಲೋಕನ ಮರ್ಕಟ ಮಂಡೂಕಾದಿ ಗತಿ ವಶಾತ್ ಕಾಲಚಕ್ರ ವಶಾದಿ ನಾನಾ ಮಾರ್ಗಾನುಸಾರೇಣ ಯೋ ಯೋದೋಷಸ್ಸಮಜ್ಜನಿತತ್ತದ್ದೋಷ ಪರಿಹಾರಾರ್ಥಂ ಯೇ ಯೇ ಗ್ರಹಾಃ ಅರಿಷ್ಟ ಸ್ಥಾನೇಷು ಸ್ಥಿತಾಃ ಶೇಷಾಂ ಗ್ರಹಾಣಾಂ ಶುಭ ಏಕಾದಶಸ್ಥಾನಸ್ಥಿತಫಲಾವಾಪ್ತ್ಯಾರ್ಥಂ ಯೇ ಯೇ ಗ್ರಹಾಃಶುಭಸ್ಥಾನೇಷುಸ್ಥಿತಾಃ ತೇಷಾಂಗ್ರಹಾಣಾಂ ಅತ್ಯಂತ ಅತಿಶಯ ಶುಭಫಲ ಪ್ರಾಪ್ತ್ಯರ್ಥಂ। ಮಮ ಶತ್ರುಕೃತ ಶೂನ್ಯಮಾರಣ ಮೋಹನಸ್ತಂಭನವಿದ್ವೇಷಣ ನವಪೊಂಪು ಶೂನ್ಯಪೊಂಪು ದೇವತಾಪೊಂಪು ಪಿಶಾಚಪೊಂಪು ಸರ್ಪಪೊಂಪು ಪರಿಹಾರಾರ್ಥಂ। ಪರೈಃ ಕೃತಕ್ರಿಯಮಾಣ ಕರಿಷ್ಯಮಾಣ ದುರ್ಮಂತ್ರ ದುರ್ಯಂತ್ರ ದುಸ್ತಂತ್ರ ಪುತ್ಥಳಿಕಾಸ್ಥಾಪನ ಪ್ರಯೋಗಾದ್ಯಾಭಿಚಾರಿಕ ದೋಷ ನಿವಾರಣಾರ್ಥಂ ಕೂಷ್ಮಾಂಡ ಭೂತ ಪ್ರೇತ ಪಿಶಾಚ ಬ್ರಹ್ಮರಾಕ್ಷಸ ಯಕ್ಷಶಾಕಿನಿ ಢಾಕಿನಿ ಮಾರಿಗಣಾದಿ ಸರ್ವಗ್ರಹೋಚ್ಚಾಟನಾರ್ಥಂ। ಭೌಮಾಂತರಿಕ್ಷ ದಿವ್ಯ ಮಹೋತ್ಪಾತ ದುಃಸ್ವಪ್ನ ದುಶ್ಶಕುನ ಅದ್ಭುತ ಆಗಾಮಿ ಸಂಚಿತ ದುಷ್ಟಾರಿಷ್ಟ ಪರಿಹಾರಾರ್ಥಂ ನವನವ ಜನಿತತಾಪತ್ರಯ ನಿವಾರಣಾರ್ಥಂ ಅಪಮೃತ್ಯು ಪರಿಹಾರದ್ವಾರಾ ಆಯುಷ್ಯಾಭಿವೃದ್ಧ್ಯರ್ಥಂ ದುಸ್ವಪ್ನ ದುಶ್ಶಕುನ ದಾರಿದ್ರ್ಯ ಚಿಂತಾದುರ್ಭಿಕ್ಷದುರ್ವ್ಯಸನ ದುಷ್ಕೀರ್ತಿ ಉತ್ಪಾತ ಭಯ ವಿಷಭಯ ದುಷ್ಟಗ್ರಹ ಪೀಡಾ ಪರಿಹಾರಾರ್ಥಂ ವಾತ ಪಿತ್ಥ ಶ್ಲೇಷ್ಮಾದಿ ಸಮಸ್ತ ಜ್ವರ ಶಿರೋಬಾಧಾ ಕುಕ್ಷಿಶೂಲರಾಜಯಕ್ಷ್ಮ ಭಗಂಧರಾದಿ ಸಮಸ್ತ ರೋಗ ನಿವಾರಣಾರ್ಥಂ। ಮಮಶತ್ರು ನಿಗ್ರಹಾರ್ಥಂ ಚಿಂತಿತ ಮನೋರಥ ಫಲಾವಾಪ್ತ್ಯರ್ಥಂ ಮನಸಾಭೀಷ್ಠ ಸಿದ್ಧ್ಯರ್ಥಂ ಧರ್ಮಾರ್ಥ ಕಾಮ ಮೋಕ್ಷಚತುರ್ವಿಧ ಫಲಪುರುಷಾರ್ಥ ಸಿದ್ಧ್ಯರ್ಥಂ ಮಮ ಪುತ್ರಮಿತ್ರ ಕಳತ್ರ ಭ್ರಾತೃ ಧನಧಾನ್ಯ ವಸ್ತ್ರಾಭರಣ ಗೋ ಮಹಿಷ ತುರಗ ಗಜ ರಥವಾಹನಾದಿ ವೃದ್ಧ್ಯರ್ಥಂ ಮೃತ್ಯುಂ ಜಯ ಪ್ರೀತ್ಯರ್ಥಂ ಮೃತ್ಯುಂಜಯ ಪ್ರಸಾದ ಸಿದ್ಧ್ಯರ್ಥಂ ಶತ (100) ಸಹಸ್ರ (1000) ಲಕ್ಷಾದಿ (100000) ಸಂಖ್ಯಯಾ ಶ್ರೀ ಮಹಾ ಮೃತ್ಯುಂಜಯ ಮಂತ್ರ ಜಪಂ (ಮಾಹೇಶ್ವರರಿಂದ ಜಪ ಮಾಡಿಸುತ್ತಿದ್ದರೆ) ಮಾಹೇಶ್ವರದ್ವಾರಾ ಕಾರಯಿಷ್ಯೇ (ತಾನು ಸ್ವತಃ ಮಾಡುತ್ತಿದ್ದರೆ) ಅಹಂ ಕರಿಷ್ಯೇ''

ಎಂದು ಸಂಕಲ್ಪವನ್ನು ಮಾಡತಕ್ಕದ್ದು ನಂತರ ಭೂತ ಶುದ್ಧಿ ಪ್ರಾಣ ಪ್ರತಿಷ್ಠೆಗಳನ್ನು ಮಾಡಬೇಕು.

''ಮಮ ಸರ್ವಾಭೀಷ್ಟಸಿದ್ಧ್ಯರ್ಥಂ ಭೂತ ಶುದ್ಧಿ ಪ್ರಾಣ ಪ್ರತಿಷ್ಠಾಂಚ ಕರಿಷ್ಯೇ''

ಎಂದು ಉಚ್ಚರಿಸಿ ಆ ಮೇಲೆ

''ಓಂ ಆಧಾರಶಕ್ತಿ ಕಮಲಾಸನಾಯ ನಮಃ''

ಎಂದು ಆಸನವನ್ನು ಪೂಜಿಸಿ

"ಪೃಥ್ವೀತಿ ಮಂತ್ರಸ್ಯ ಮೇರುಪೃಷ್ಠ ಋಷಿಃ (ಮಸ್ತಕದಲ್ಲಿ) ಕೂರ್ಮೋ ದೇವತಾ (ಹೃದಯದಲ್ಲಿ) ಸುತಲಚ್ಛಂದಃ (ಮುಖದಲ್ಲಿ) ಆಸನೇ ವಿನಿಯೋಗಃ।"

'ಪೃಥ್ವಿತ್ವಯಾಧೃ ತಾಲೋಕಾದೇವಿತ್ವಂ ವಿಷ್ಣುನಾಧೃತಾ।
ತ್ವಂಚಧಾರಯಮಾಂ ದೇವಿ ಪವಿತ್ರಂ ಕುರುಚಾಸನಂ" ॥

ಎಂದು ಉಚ್ಚರಿಸಿ ಭೂಮಿಯನ್ನು ಗಂಧ ಪುಷ್ಪಾದಿಗಳಿಂದ ಪೂಜಿಸಿ (ಪಾದಗಳಿಂದ ಮೊಳಕಾಲುಗಳ ವರೆಗೆ)

ಪಾದಾದಿ ಜಾನುಪರ್ಯಂತಂ ಪೃಥ್ವೀ ಸ್ಥಾನಂತಚ್ಚತುರಸ್ರಂ ಪೀತ ವರ್ಣಂ।
ಬ್ರಹ್ಮದೈವತಂ 'ವ' ಮಿತಿ ಬೀಜಯುಕ್ತಂ

ಎಂದು ಧ್ಯಾನಿಸಿ

(ಮೊಳಕಾಲುಗಳಿಂದ ಹೊಕ್ಕಳವರೆಗೆ)

"ಜಾನ್ವಾದಿನಾಭಿ ಪರ್ಯಂತಂ ಆಪಸ್ಥಾನಂ ತಚ್ಛಾರ್ಧ ಚಂದ್ರಾಕಾರಂ ಶುಕ್ಲವರ್ಣಂ ಪದ್ಮಲಾಂಛಿತಂ ವಿಷ್ಣು ದೈವತಂ 'ಲ' ಮಿತಿ ಬೀಜ ಯುಕ್ತಂ"

ಎಂದು ಧ್ಯಾನಿಸಿ

(ಹೊಕ್ಕಳದಿಂದ ಕುತ್ತಿಗೆಯವರೆಗೆ)

"ನಾಭ್ಯಾದಿ ಕಂಠಪರ್ಯಂತಂ ಅಗ್ನಿ ಸ್ಥಾನಂ ತ್ರಿಕೋಣಾಕಾರಂ ರಕ್ತವರ್ಣಂ ಸ್ವಸ್ತಿ ಕಲಾಂಛಿತಂ ರುದ್ರದೈವತಂ 'ರ' ಮಿತಿ ಬೀಜಯುಕ್ತಂ"

ಎಂದು ಧ್ಯಾನಿಸಿ

(ಕುತ್ತಿಗೆಯಿಂದ ಹುಬ್ಬುಗಳ ಮಧ್ಯದವರೆಗೆ)

"ಕಂಠಾದಿಭ್ರೂ ಮಧ್ಯ ಪರ್ಯಂತಂ ವಾಯುಸ್ಥಾನಂ ಷಟ್ಕೋಣಾಕಾರಂ ಷಡ್ಬಿಂದು ಲಾಂಛಿತಂ ಕೃಷ್ಣ ವರ್ಣಂ ಈಶ್ವರ ದೈವತಂ 'ಯ' ಮಿತಿ ಬೀಜ ಯುಕ್ತಂ"

ಎಂದು ಸ್ಮರಿಸಿ

(ಹುಬ್ಬುಗಳ ಮಧ್ಯದಿಂದ ಬ್ರಹ್ಮರಂಧ್ರದ ವರೆಗೆ)

'ಭ್ರೂಮಧ್ಯಾದಿ ಬ್ರಹ್ಮರಂಧ್ರ ಪರ್ಯಂತಂ ಆಕಾಶ ಸ್ಥಾನಂ ವೃತ್ತಾಕಾರಂ ಧ್ವಜಲಾಂಛಿತಂ ಸದಾಶಿವ ದೈವತಂ 'ಹ' ಮಿತಿ ಬೀಜಯುಕ್ತಂ'

ಎಂಬುದಾಗಿ ಭಾವಿಸಿ ತನ್ನ ದೇಹದಲ್ಲಿ ಪಂಚಮಹಾ ಭೂತಗಳನ್ನು ಧ್ಯಾನಿಸಿ ಪ್ರವಿಲಾಪನವನ್ನು ಮಾಡಬೇಕು ಅದು ಹೇಗೆಂದರೆ–

ಪೃಥಿವೀ ಮಪ್ಸು। ಅಪೋಗ್ನೌ। ಅಗ್ನಿಂವಾಯೌ। ವಾಯುಮಾಕಾಶೇ। ಆಕಾಶಂ ತಸ್ಮಾತ್ರಂ ಹಂಕಾರ ಮಹದಾತ್ಮಿಕಾಯಾಂ ಮಾತೃಕಾ ಸಂಜ್ಞಕ ಶಬ್ದ ಬ್ರಹ್ಮ ಸ್ವರೂಪಾಯಾಂ

ಹೃಲ್ಲೇಖಾರ್ಥ ಭೂತಾಯಾಂ ಪ್ರಕೃತಿಮಾ ಯಾಯಾಂ ಪ್ರವಿಲಾಪಯಾಮಿ। ತಥಾ ತ್ರಿವಿಧಾಂ ಮಾಯಾಂಚ ನಿತ್ಯಶುದ್ಧ ಬುದ್ಧ ಮುಕ್ತ ಸ್ವಭಾವಿ ಸ್ವಾತ್ಮ ಪ್ರಕಾಶ ರೂಪ ಸತ್ಯಜ್ಞಾನಾ ನಂತಾನಂದ ಲಕ್ಷಣೇ ಪರಮ ಕಾರಣೇ ಪರಮಾರ್ಥ ಭೂತೇ ಪರಬ್ರಹ್ಮಣೇ ಪ್ರವಿಲಾಪಯಾಮಿ। ತತ್ವನಿತ್ಯ ಶುದ್ಧಬುದ್ಧ ಮುಕ್ತ ಸ್ವಭಾವಂ ಸಚ್ಚಿದಾನಂದ ಸ್ವರೂಪಂ ಪರಿಪೂರ್ಣಂ ಬ್ರಹ್ಮೈ ವಾಹಮಸ್ಮಿ

ಎಂದು ಧ್ಯಾನಿಸಿ

"ಯಥೋಕ್ತಸ್ವರುಪಾತ್ ಪ್ರಣವಾತ್ಮಕಾತ್ ಪರಬ್ರಹ್ಮಣಃ ಸಕಾಶಾತ್ ಹೃಲ್ಲೇಖಾರ್ಥ ಭೂತಾ। ಸರ್ವಮಂತ್ರಮಯೀ ಮಾತೃಕಾ ಸಂಜ್ಞಕಾ ಶಬ್ದ ಬ್ರಹ್ಮಾತ್ಮಿಕಾ ಮಹದಹಂಕಾರಾದಿ ಪಂಚತನ್ಮಾತ್ರಾದಿ ಸಮಸ್ತ ಪ್ರಪಂಚ ಕಾರಣ ಭೂತಾ ಪ್ರಕೃತಿ ರೂಪಾಮಾಯಾ ರಜ್ಜು ಸರ್ಪವತ್ ವಿವರ್ತ ರೂಪೇಣ ಪ್ರಾದರ್ಭೂತಾ"

ಎಂದು ಸ್ಮರಿಸಿ

"ತಸ್ಯಾಮಾಯಾಯಾಃ ಸಕಾಶಾತ್ ಯಥೋಕ್ತ ಮಾಕಾಶ ಮುತ್ಪನ್ನಂ ಆಕಾಶಾತ್ ವಾಯುರುತ್ಪನ್ನಃ। ವಾಯೋ ರಗ್ನಿಃ ಅಗ್ನೇರಾಪಃ। ಆದ್ಭ್ಯಃ ಪೃಥಿವೀ ಸಮಜಾಯತ"

ಎಂದು ಧ್ಯಾನಿಸಿ

"ತೇಭ್ಯಃ ಪಂಚಮಹಾಭೂತೇಭ್ಯಃ ಸಕಾಶಾತ್ ಸ್ವಶರೀರಂ ತೇಜಃ ಪುಂಜಾತ್ಮಕಂ ಪುರುಷಾರ್ಥ ಸಾಧನ ದೇವ ಯೋಗ್ಯ ಮುತ್ಪನ್ನಂ"

ಎಂದು ಸ್ಮರಿಸಿ ನಂತರ

"ತಸ್ಮಿನ್ ದೇಹೇ ಸರ್ವಾತ್ಮಕಂ ಸರ್ವಜ್ಞಂ ಸರ್ವಶಕ್ತಿ ಸಂಯುಕ್ತಂ ಸಮಸ್ತ ದೇವತಾಮಯಂ ಸಚ್ಚಿದಾನಂದ ಸ್ವರೂಪಂ ಬ್ರಹ್ಮಾತ್ಮ ರೂಪೇಣಾನುಪ್ರವಿಷ್ಟಂ"

ಎಂಬುದಾಗಿ ಭಾವಿಸುವದು, ನಂತರ ಪ್ರಾಣ ಪ್ರತಿಷ್ಠೆ ಮಾಡುವದು.

ಓಂ ಅಸ್ಯ ಶ್ರೀ ಪ್ರಾಣಪ್ರತಿಷ್ಠಾ ಮಂತ್ರಸ್ಯ ಬ್ರಹ್ಮಾ ವಿಷ್ಣು ರುದ್ರಾ ಋಷಯಃ (ಶಿರಸ್ಸಿನಲ್ಲಿ), ಋಗ್ಯಜುಃ ಸಾಮಾನಿಛಂದಾಸಿ (ಮುಖದಲ್ಲಿ), ಪ್ರಾಣ ಶಕ್ತಿರ್ದೇವತಾ (ಹೃದಯದಲ್ಲಿ), ಆಂಬೀಜಂ (ನಾಭಿಯಲ್ಲಿ), ಹ್ರೀಂಶಕ್ತಿಃ (ಗುಹ್ಯದಲ್ಲಿ), ಕ್ರೌಂ ಕೀಲಕಂ (ಪಾದಗಳಲ್ಲಿ), ಮೃತ್ಯುಂಜಯ ದೇವತಾ ಪ್ರಾಣ ಪ್ರತಿಷ್ಠಾಪನೇ ವಿನಿಯೋಗಃ।

ಙಂ ಕಂ ಖಂ ಘಂ ಗಂ ನಭೋವಾಯ್ವಗ್ನಿ ಜಲ ಭೂಮ್ಯಾತ್ಮನೇ ಅಂಗುಷ್ಠಾಭ್ಯಾಂ ನಮಃ। ಞಂ ಚಂ ಛಂ ಝಂ ಜಂ ಶಬ್ದ ಸ್ಪರ್ಶ ರೂಪ ರಸ ಗಂಧಾತ್ಮನೇ ತರ್ಜನೀಭ್ಯಾಂ ನಮಃ। ಣಂ ಟಂ ಠಂ ಢಂ ಡಂ ಶ್ರೋ ತ್ವಕ್ಷಯನ ಜಿಹ್ವಾ ಘ್ರಾಣಾತ್ಮನೇ ಮಧ್ಯಮಾಭ್ಯಾಂ ನಮಃ ನಂ ತ್ರಥಂ ಧಂ ದಂ ವಾಕ್ ಪಾಣಿ ಪಾದ ಪಾಯೂಪಸ್ಥಾನಾತ್ಮನೇ ಅನಾಮಿಕಾಭ್ಯಾಂ ನಮಃ। ಮ ಪಂ ಫಂ ಭಂ ಬಂ ವಚನಾ ದಾನಗಮನ ವಿಸರ್ಗಾನಂದಾತ್ಮನೇ ಕನಿಷ್ಠಿಕಾಭ್ಯಾಂ ನಮಃ। ಶಂ ಯಂ ರಂ ವಂ ಲಂ ಹಂ ಷಂ ಕ್ಷಂ ಸಂ ಬುದ್ಧಿ ಮನೋಹಂಕಾರ ಚಿತ್ತಾತ್ಮನೇ ಕರತಲಕರ ಪೃಷ್ಠಾಭ್ಯಾಂ ನಮಃ।

ಅಂಗನ್ಯಾಸ । ಜಂ ಕಂ ಖಂ ಘಂ ಗಂ ನಭೋ ವಾಯ್ವಗ್ನಿ ಜಲ ಭೂಮ್ಯಾತ್ಮನೇ ಹೃದಯಾಯ ನಮಃ। ಞಂ ಚಂ ಛಂ ಝಂ ಜಂ ಶಬ್ದ ಸ್ಪರ್ಶ ರೂಪರಸ ಗಂಧಾತ್ಮನೇ ಶಿರಸೇ ಸ್ವಾಹಾ । ಣಂ ಟಂ ಠಂ ಢಂ ಡಂ ಶ್ರೋತ್ರ ತ್ವಜ್ಞಯನ ಜಿಹ್ವಾ ಘ್ರಾಣಾತ್ಮನೇ ಶಿಖಾಯೈ ವಷಟ್। ನಂ ತಂ ಥಂ ಧಂ ದಂ ವಾಕ್ ಪಾಣಿ ಪಾದ ಪಾಯೂಪ ಸ್ಥಾನಾತ್ಮನೇ ಕವಚಾಯಹುಂ। ಮಂ ಪಂ ಫಂ ಭಂ ಬಂ ವಚನಾ ದಾನಗಮನ ವಿಸರ್ಗಾನಂದಾತ್ಮನೇ ನೇತ್ರತ್ರ ಯಾಯವೌಷಟ್ ಶಂ ಯಂ ರಂ ವಂ ಲಂ ಹಂ ಷಂ ಕ್ಷಂ ಸಂ ಬುದ್ಧಿ ಮನೋಹಂಕಾರ ಚಿತ್ತಾತ್ಮನೇ ಅಸ್ತ್ರಾಯಫಟ್ ''

ಎಂದು ನ್ಯಾಸವನ್ನು ಮಾಡಿ ನಂತರ ನಾಭಿಯಿಂದ ಪಾದದವರೆಗೆ ''ಅಂ ನಮಃ'' ಎಂದೂ

ಹೃದಯದಿಂದ ನಾಭಿಯವರೆಗೆ

''ಹ್ರೀಂ ನಮಃ'' ಎಂದೂ

ಮುಖದಿಂದ ಹೃದಯದ ವರೆಗೆ

''ಕ್ರೌಂ ನಮಃ'' ಎಂದೂ ನ್ಯಾಸ ಮಾಡಬೇಕು, ಬಳಿಕ

''ಯಂತ್ವಗಾತ್ಮನೇ ನಮಃ'' ಎಂದು ವಾಯವ್ಯ ಮೂಲೆಯಲ್ಲಿಯೂ

''ರಂ ರಕ್ತಾತ್ಮನೇ ನಮಃ'' ಎಂದು ಆಗ್ನೇಯ ದಿಕ್ಕಿನಲ್ಲಿಯೂ

''ಲಂ ಮಾಸಾತ್ಮನೇ ನಮಃ'' ಎಂದು ಪೂರ್ವ ದಿಕ್ಕಿಗೂ

''ವಂ ಮೇದಾತ್ಮನೇ ನಮಃ'' ಎಂದು ಪಶ್ಚಿಮ ದಿಕ್ಕಿನಲ್ಲಿಯೂ

''ಶಂ ಅಸ್ಥ್ಯಾತ್ಮನೇ ನಮಃ'' ಎಂದು ನೈಋತ್ಯ ದಿಕ್ಕಿಗೂ

''ಷಂ ಶುಕ್ರಾತ್ಮನೇ ನಮಃ'' ಎಂದು ಉತ್ತರ ದಿಕ್ಕಿಗೂ

''ಸಂ ಪ್ರಾಣಾತ್ಮನೇ ನಮಃ'' ಎಂದು ದಕ್ಷಿಣ ದಿಕ್ಕಿಗೂ

''ಹಂ'' ಮಜ್ಞಾತ್ಮನೇ ನಮಃ'' ಎಂದು ಈಶಾನ್ಯ ದಿಕ್ಕಿಗೂ ''ಳಂ ಜೀವಾತ್ಮನೇ ನಮಃ'' ಎಂದು ಮಧ್ಯದಲ್ಲಿಯೂ ಈ ಪ್ರಕಾರ ಹೃದಯ ಕಮಲದಲ್ಲಿನ್ಯಾಸ ಮಾಡಬೇಕು.

ಈ ಪ್ರಕಾರವಾಗಿ ಹೃದಯ ಕಮಲದಲ್ಲಿನ್ಯಾಸ ಮಾಡಬೇಕು. ನಂತರ,

ರಕ್ತಾಂಬೋಧಿಸ್ಥಪೋತೋಲ್ಲ ಸದರುಣ ಸರೋಜಾಧಿರೂಢಾ ಕರಾಬ್ಜೈಃ।
ಪಾಶಂಕೋದಂಡ ಮಿಕ್ಷೋದ್ಭವಮಲಿಗುಣಮಪ್ಯಂ ಕುಶಂ ಪಂಚ ಬಾಣಾನ್॥
ಬಿಭ್ರಾಣಾ ಸೃಕ್ಕಪಾಲಂ ತ್ರಿನಯನ ವಿಲಸತ್ಪೀ ನವಕ್ಷೋರುಹಾಢ್ಯಾ
ದೇವೀ ಬಾಲಾರ್ಕ ವರ್ಣಾಭವತು ಸುಖಕರೀ ಪ್ರಾಣಶಕ್ತಿಃ ಪರಾನಃ''

ಎಂದು ಧ್ಯಾನಿಸಿ ಪ್ರಾಣ ಪ್ರತಿಷ್ಠೆಯನ್ನು ಮಾಡುವದು.

ಆಮೇಲೆ ಅಕ್ಕಿಯ ಗುಂಪೆಯ ಮೇಲೆ ಅಷ್ಟದಳ ಕಮಲವನ್ನೂ, ಅದರಲ್ಲಿ ಪ್ರಣವವನ್ನೂ ಬರೆದು ತಾಮ್ರದ ಒಂದು ಕಲಶವನ್ನು ವಿದ್ಯುಕ್ತವಾಗಿ ಸ್ಥಾಪಿಸಿ ವಸ್ತ್ರಭೂಷಣಗಳಿಂದ ಅಲಂಕರಿಸಿ ಅಲ್ಲಿ ಬೆಲ್ಲ ಉಪ್ಪು, ಅರಳೆ, ಬೂದಗುಂಬಳಕಾಯಿ, ದೀಪಗಳನ್ನು ಇಟ್ಟು ಮೂಲ ಮಂತ್ರದಿಂದ ಮೃತ್ಯುಂಜಯನನ್ನು ಆವಾಹನೆ ಮಾಡಿ ಷೋಡಶೋಪಚಾರಗಳಿಂದ ಪೂಜಿಸಬೇಕು.

ಮೃತ್ಯುಂಜಯ ಜಪ- ಓಂ ಅಸ್ಯ ಶ್ರೀಮಹಾಮೃತ್ಯುಂಜಯ ಮಂತ್ರಸ್ಯ ವಸಿಷ್ಠ ಋಷಿಃ। (ಮಸ್ತಕದಲ್ಲಿ) ಅನುಷ್ಟುಪ್ ಛಂದಃ। (ಮುಖದಲ್ಲಿ) ಶ್ರೀತ್ರ್ಯಂಬಕ ರುದ್ರೋ ದೇವತಾ। (ಹೃದಯದಲ್ಲಿ) ಶ್ರೀಬೀಜಂ ಹ್ರೀಂ ಶಕ್ತಿಃ ಮಮ ಅಭೀಷ್ಟಸಿದ್ಧ್ಯರ್ಥೇ ಜಪೇ ವಿನಿಯೋಗಃ''॥

ಎಂದು ವಿನಿಯೋಗ ಮಾಡಿ ಋಷ್ಯಾದಿ ನ್ಯಾಸ ಮಾಡುವದು.

''ಓಂ ವಸಿಷ್ಠ ಋಷಯೇ ನಮಃ'' ಎಂದು ಶಿರಸ್ಸಿನಲ್ಲಿಯೂ

''ಅನುಷ್ಟುಪ್ ಛಂದಸೇ ನಮಃ'' ಎಂದು ಮುಖದಲ್ಲಿಯೂ

''ಶ್ರೀ ತ್ರ್ಯಂಬಕ ರುದ್ರೋ ದೇವತಾಯೈ ನಮಃ'' ಎಂದು ಹೃದಯದಲ್ಲಿಯೂ

''ಶ್ರೀಂ ಬೀಜಾಯೈ ನಮಃ'' ಎಂದು ಗುಹ್ಯ ಸ್ಥಾನದಲ್ಲಿಯೂ

''ಹ್ರೀಂ ಶಕ್ತ್ಯೈ ನಮಃ'' ಎಂದು ಪಾದದಲ್ಲಿಯೂ ನ್ಯಾಸ ಮಾಡಿ ನಂತರ ಕರನ್ಯಾಸ ಮಾಡಬೇಕು.

ಕರನ್ಯಾಸ- ಓಂ ಹ್ರೌಂ ಓಂ ಜೂಂ ಸಃ ಭೂರ್ಭುವಃ ಸ್ವಃ ತ್ರ್ಯಂಬಕಂ ಓಂ ನಮೋ ಭಗವತೇ ರುದ್ರಾಯ ಶೂಲಪಾಣಯೇ ಸ್ವಾಹಾ ಅಂಗುಷ್ಠಾಭ್ಯಾಂ ನಮಃ। ಓಂ ಹ್ರೌಂ ಓಂ ಜೂಂ ಸಃ ಭೂರ್ಭುವಃ ಸ್ವ ಯಜಾಮಹೇ ಓಂ ನಮೋ ಭಗವತೇ ರುದ್ರಾಯ ಅಮೃತ ಮೂರ್ತಯೇ ಮಾಂಜೀವಯ ತರ್ಜನೀಭ್ಯಾಂ ನಮಃ। ಓಂ ಹ್ರೌಂ ಓಂ ಜೂಂ ಸಃ ಭೂರ್ಭುವಃ ಸ್ವಃ ಸುಗಂಧಿಂ ಪುಷ್ಟಿ ವರ್ಧನಂ ಓಂ ನಮೋ ಭಗವತೇ ರುದ್ರಾಯ ಚಂದ್ರ ಶಿರಸೇ ಜಟಿನೇ ಸ್ವಾಹಾ- ಮಧ್ಯಮಾಭ್ಯಾಂ ನಮಃ। ಓಂ ಹ್ರೌಂ ಓಂ ಜೂಂ ಸಃ ಭೂರ್ಭುವಃಸ್ವಃ ಉರ್ವಾರುಕಮಿವ ಬಂಧನಾತ್ ಓಂ ನಮೋ ಭಗವತೇ ರುದ್ರಾಯ-ತ್ರಿಪುರಾಂತಕಾಯ ಹ್ರಾಂ ಹ್ರೀಂ ಅನಾಮಿಕಾಭ್ಯಾಂ ನಮಃ। ಓಂ ಹ್ರೌಂ ಓಂ ಜೂಂ ಸಃ ಭೂರ್ಭುವಃಸ್ವಃ ಮೃತ್ಯೋರ್ಮುಕ್ಷೀಯ ಓಂ ನಮೋ ಭಗವತೇ ರುದ್ರಾಯ ತ್ರಿಪುರಾಂತಕಾಯ ಹ್ರಾಂ ಹ್ರೀಂ ಅನಾಮಿಕಾಭ್ಯಾಂ ನಮಃ। ಓಂ ಹ್ರೌಂ ಓಂ ಜೂಂ ಸಃ ಭೂರ್ಭುವಸ್ಸ್ವ ಮೃತ್ಯೋ ರ್ಮುಕ್ಷೀಯ ಓಂ ನಮೋ ಭಗವತೇ ರುದ್ರಾಯ ತ್ರಿಲೋಚನಾಯ ಋಗ್ಯಜುಃ ಸಾಮಮಂತ್ರಾಯ ಕನಿಷ್ಠಿಕಾಭ್ಯಾಂ ನಮಃ। ಓಂ ಹ್ರೌಂ ಓಂ ಜೂಂ ಸಃ ಭೂಭುವಃಸ್ವಃ ಮಾಮೃತಾತ್ ಓಂ

ನಮೋ ಭಗವತೇ ರುದ್ರಾಯ ಅಗ್ನಿತ್ರಯಾಯ ಜ್ವಲ ಜ್ವಲಮಾಂ ರಕ್ಷರಕ್ಷ ಅಘೋರಾಸ್ತ್ರಾಯ ಕರತಲಕರ ಪೃಷ್ಠಾಭ್ಯಾಂ ನಮಃ।

ಅಂಗನ್ಯಾಸ- ಓಂ ಹ್ರೌಂ ಓಂ ಝೂಂ ಸಃ ಭೂರ್ಭುವಃ ಸ್ವಃ ತ್ರ್ಯಂಬಕಂ ಓಂ ನಮೋ ಭಗವತೇ ರುದ್ರಾಯ ಶೂಲಪಾಣಯೇ ಸ್ವಾಹಾ ಹೃದಯಾಯ ನಮಃ । ಓಂ ಹ್ರೌಂ ಓಂಜೂಂ ಸಃ ಭೂರ್ಭುವಃ ಸ್ವಃ ಯಜಾಮಹೇ ಓಂ ನಮೋ ಭಗವತೇ ರುದ್ರಾಯ ಅಮೃತ ಮೂರ್ತಯೇ ಮಾಂಜೀವಯ ಶಿರಸೇ ಸ್ವಾಹಾ। ಓಂ ಹ್ರೌಂ ಓಂ ಜೂಂ ಸಃ ಭೂರ್ಭುವಃ ಸ್ವಃ ಸುಗಂಧಿಂ ಪುಷ್ಟಿವರ್ಧನಂ ಓಂ ನಮೋ ಭಗವತೇ ರುದ್ರಾಯ ಚಂದ್ರ ಶಿರಸೇ ಜಟಿನೇ ಶಿಖಾಯೈ ವಷಟ್ । ಓಂ ಹ್ರೌಂ ಓಂ ಜೂಂ ಸಃ ಭೂರ್ಭುವಃ ಸ್ವಃಉರ್ವಾ ರುಕಮಿವ ಬಂಧನಾತ್ ಓಂ ನಮೋ ಭಗವತೇ ರುದ್ರಾಯ ತ್ರಿಪುರಾಂತಕಾಯ ಹ್ರಾಂ ಹ್ರೀಂ ಕವಚಾಯಹುಂ। ಓಂ ಹ್ರೌಂ ಓಂ ಜೂಂ ಸಃ ಭೂರ್ಭುವಃ ಸ್ವಃ ಮೃತ್ಯೋರ್ಮುಕ್ಷೀಯ ಓಂ ನಮೋ ಭಗವತೇ ರುದ್ರಾಯ ತ್ರಿಲೋಚನಾಯ ಋಗ್ಯಜುಃ ಸಾಮ ಮಂತ್ರಾಯ ನೇತ್ರತ್ರಯಾಯ ವೌಷಟ್। ಓಂ ಹ್ರೌಂ ಓಂ ಜೂಂ ಸಃ ಭೂರ್ಭುವಃ ಸ್ವಃ ಮಾಮೃತಾತ್ ಓಂ ನಮೋ ಭಗವತೇ ರುದ್ರಾಯ ಅಗ್ನಿತ್ರಯಾಯ ಜ್ವಲಜ್ವಲಮಾಂ ರಕ್ಷ ರಕ್ಷ ಅಘೋರಾಸ್ತ್ರಾಯ ಅಸ್ತ್ರಾಯ ಫಟ್ ಓಂ ಭೂರ್ಭುವಸ್ಸುವರೋ ಮಿತಿ ದಿಗ್ಬಂಧಃ॥

ಎಂದು ಹೃದಯನ್ಯಾಸವನ್ನು ಮಾಡಿದ ಬಳಿಕ ಅಕ್ಷರ ನ್ಯಾಸ ಮಾಡುವದು.

"ತ್ರ್ಯಂ ನಮಃ" ಎಂದು ಬಲಪಾದದ ತುದಿಯಲ್ಲಿಯೂ

"ಬಂ ನಮಃ ಕಂ ನಮಃ ಯಂ ನಮಃ ಜಾಂ ನಮಃ" ಎಂದು ಬಲಪಾದದ ನಾಲ್ಕು ಸಂದಿಗಳಲ್ಲಿಯೂ

"ಮಂ ನಮಃ" ಎಂದು ಎಡ ಪಾದದ ತುದಿಯಲ್ಲಿಯೂ

"ಹೇಂ ನಮಃ ಸುಂ ನಮಃ ಗಂ ನಮಃ ಧಿಂ ನಮಃ"

ಎಂದು ಎಡ ಪಾದದ ನಾಲ್ಕು ಸಂದಿಗಳಲ್ಲಿಯೂ

"ಪುಂ ನಮಃ" ಎಂದು ಗುಹ್ಯ ಸ್ಥಾನದಲ್ಲಿಯೂ

"ಷ್ಟಿಂ ನಮಃ" ಎಂದು ಗುದ ಸ್ಥಾನದಲ್ಲಿಯೂ

"ವಂ ನಮಃ" ಎಂದು ಹೊಟ್ಟೆಯಲ್ಲಿಯೂ

"ರ್ಧಂ ನಮಃ" ಎಂದು ಹೃದಯದಲ್ಲಿಯೂ

"ನಂ ನಮಃ" ಎಂದು ಕಂಠದಲ್ಲಿಯೂ

"ಉಂ ನಮಃ" ಎಂದು ಬಲಗೈ ತುದಿಯಲ್ಲಿಯೂ

"ವಾಂ ನಮಃ ರುಂ ನಮಃ ಕಂ ನಮಃ ಮಿಂ ನಮಃ" ಎಂದು ಬಲಗೈಯ ನಾಲ್ಕು ಸಂದಿಗಳಲ್ಲಿಯೂ

"ವಂ ನಮಃ" ಎಂದು ಎಡಗೈ ತುದಿಯಲ್ಲಿಯೂ

"ಬಂ ನಮಃ ಧಂ ನಮಃ ನಾಂ ನಮಃ ನ್ಮೃಂ ನಮಃ" ಎಂದು ಎಡಗೈಯ ನಾಲ್ಕು ಸಂದಿಗಳಲ್ಲಿಯೂ

"ತ್ಯೋಂ ನಮಃ" ಎಂದು ಮುಖದಲ್ಲಿಯೂ

"ಮುಂ ನಮಃ" ಎಂದು ಎರಡು ತುಟಿಗಳಲ್ಲಿಯೂ

"ಕ್ಷೀಂ ನಮಃ" ಎಂದು ಮೂಗಿನಲ್ಲಿಯೂ

"ಯಂ ನಮಃ" ಎಂದು ಎರಡೂ ನೇತ್ರಗಳಲ್ಲಿಯೂ

"ಮಾಂ ನಮಃ" ಎಂದು ಎರಡೂ ಕಿವಿಗಳಲ್ಲಿಯೂ

"ಮೃಂ ನಮಃ" ಎಂದು ಎರಡು ಹುಬ್ಬುಗಳಲ್ಲಿಯೂ

"ತಾಂ ನಮಃ" ಎಂದು ತಲೆಯಲ್ಲಿಯೂ

ಈ ಪ್ರಕಾರ ಅಕ್ಷರ ನ್ಯಾಸವನ್ನು ಮಾಡಬೇಕು. ನಂತರ ಪದನ್ಯಾಸ ಮಾಡಬೇಕು.

"ತ್ರ್ಯಂಬಕಂ" ಎಂದು ಶಿರಸ್ಸಿನಲ್ಲಿಯೂ

"ಯಜಾಮಹೇ" ಎಂದು ಎರಡು ಹುಬ್ಬುಗಳಲ್ಲಿಯೂ

"ಸುಗಂಧಿಂ" ಎಂದು ಎರಡು ನೇತ್ರಗಳಲ್ಲಿಯೂ

"ಪುಷ್ಟಿವರ್ಧನಂ" ಎಂದು ಮುಖದಲ್ಲಿಯೂ

"ಉರ್ವಾರುಕಂ" ಎಂದು ಕಂಠದಲ್ಲಿಯೂ

"ಮಿವ" ಎಂದು ಹೃದಯದಲ್ಲಿಯೂ

"ಬಂಧನಾತ್" ಎಂದು ಹೊಟ್ಟೆಯಲ್ಲಿಯೂ

"ಮೃತ್ಯೋಃ" ಎಂದು ಗುಹ್ಯದಲ್ಲಿಯೂ

"ಮುಕ್ಷೀಯ" ಎಂದು ಎರಡು ತೊಡೆಗಳಲ್ಲಿಯೂ

"ಮಾ" ಎಂದು ಎರಡು ಮೊಳಕಾಲುಗಳಲ್ಲಿಯೂ

"ಅಮೃತಾತ್" ಎಂದು ಎರಡು ಪಾದಗಳಲ್ಲಿಯೂ ಪದ ನ್ಯಾಸವನ್ನು ಮಾಡಬೇಕು ನಂತರ ಧ್ಯಾನ ಮಾಡಬೇಕು.

"ಹಸ್ತಾಭ್ಯಾಂ ಕಲಶದ್ವಯಾವೃತರಸೈ ರಾಪ್ಲಾವಯಂತಂ ಶಿರೋ।"

ದ್ವಾಭ್ಯಾಂತೌ ದಧತಂ ಮೃಗಾಕ್ಷವಲಯೇ ದ್ವಾಭ್ಯಾಂ ವಹಂತಂ ಪರಂ।

ಅಂಕನ್ಯಸ್ತ ಕರದ್ವಯಾಮೃತ ಘಟಂ ಕೈಲಾಸ ಕಾಂತಂ ಶಿವಂ।
ಸ್ವಚ್ಛಾಂ ಭೋಜಗತಂ ನವೇಂದು ಮುಕುಟಾ ಭಾತಂತ್ರಿನೇತ್ರಂ ಭಜೇ" ॥1॥
"ಮೃತ್ಯುಂಜಯ ಮಹಾದೇವ ತ್ರಾಹಿಮಾಂಶರಣಾಗತಂ।
ಜನ್ಮ ಮೃತ್ಯು ಜರಾರೋಗ್ಯೈ: ಪೀಡಿತಂ ಕರ್ಮಬಂಧನೈಃ॥
ತಾವಕ ಸ್ತ್ವದ್ಗತ ಪ್ರಾಣ ಸ್ತ್ವಚ್ಚಿತ್ತೋಹಂ ಸದಾ ಮೃಡ।
ಇತಿ ವಿಜ್ಞಾಪ್ಯ ದೇವೇಶಂ ಜಪೇ ಮೃತ್ಯುಂಜಯಂ ಮನುಂ॥

ಎಂದು ಧ್ಯಾನಿಸಬೇಕು.

ಮೂಲಮಂತ್ರ- "ಓಂ ಹ್ರೌಂ ಓಂ ಜೂಂ ಸಃ ಭೂರ್ಭುವಃ ಸ್ವಃ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ । ಉರ್ವಾರುಕ ಮಿವ ಬಂಧನಾ ನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ಭೂರ್ಭುವಃ ಸ್ವರೋಂ ಜೂಂ ಸಹಃ ಹ್ರೌಂ ಓಂ"

ಈ ಮೂಲ ಮಂತ್ರವನ್ನು ಸಂಕಲ್ಪ ಮಾಡಿದ ಸಂಖ್ಯಾನುಸಾರವಾಗಿ ರುದ್ರಾಕ್ಷಮಾಲೆಯ ಸಹಾಯದಿಂದ ಏಕಾಗ್ರಚಿತ್ತದಿಂದ ಜಪಿಸಬೇಕು. ಜಪ ಮುಗಿದ ನಂತರ ಹಿಂದೆ ತಿಳಿಸಿದ ಪ್ರಕಾರ ಹೃದಯಾದಿ ಅಂಗನ್ಯಾಸವನ್ನು ಮಾಡಿ ಸಮಾಪ್ತಿಗೊಳಿಸುವದು. ನಂತರ-

ಗುಹ್ಯಾತಿ ಗುಹ್ಯ ಗೋಪ್ತಾತ್ವಂ ಗೃಹಾಣಾಸ್ಮ ತ್ಕೃತಂಜಪಂ।
ಸಿದ್ಧಿರ್ಭವತು ಮೇದೇವ ತ್ವತ್ಪ್ರಸಾದಾನ್ಮಹೇಶ್ವರ।

ಎಂದು ಉಚ್ಚರಿಸಿ ತನ್ನ ಶಕ್ತ್ಯಾನುಸಾರವಾಗಿ ಮಾಹೇಶ್ವರರನ್ನು ಭೋಜನ ದಕ್ಷಿಣಾದಿಗಳಿಂದ ತೃಪ್ತಿಪಡಿಸಬೇಕು.

—ಇತಿ ಮೃತ್ಯುಂಜಯ ಜಪಶಾಂತಿ ವಿಧಾನವು—

ಮಾಘಮಾಸ ಶುಕ್ಲಪಕ್ಷ ಪೂರ್ಣಿಮಾ (ಭಾರತ ಹುಣ್ಣಿವೆ) ದಿವಸ ಅಥವಾ ರೋಗೋತ್ಪತ್ತಿಯಾದ ದಿವಸ ಇಲ್ಲವೆ ಯಾವದೇ ಪರ್ವ ಕಾಲದಲ್ಲಿ ದೇವಾಲಯದೊಳು ಅಥವಾ ಮನೆಯ ಶುದ್ಧ ಪ್ರದೇಶದೊಳು ಗೋಮಯದಿಂದ ಸಾರಿಸಿ ರಂಗವಲ್ಲಿಯಿಂದ ಅಲಂಕರಿಸಿದ ಸ್ಥಳದಲ್ಲಿ

ಯದತ್ರ ಸಂಸ್ಥಿತಂ ಭೂತಂ ಸ್ಥಾನ ಮಾಶ್ರಿತ್ಯ ಸರ್ವದಾ।
ಸ್ಥಾನಂತ್ಯಕ್ತ್ವಾ ತು ತತ್ಸರ್ವಂ ಯತ್ರಸ್ಥಂ ತತ್ರಗಚ್ಛತು॥

ಎಂಬ ಮಂತ್ರದಿಂದ ಸುತ್ತಲೂ ಬಿಳಿಸಾಸಿವೆಗಳನ್ನು ಎರಚಿ ಒಂದು ಕೆಂಪು ಬಟ್ಟೆಯನ್ನು ಹರವಿ ಅದರ ಮೇಲೆ ಎಳ್ಳಿನ ಗುಂಪೆಯನ್ನು ಹಾಕಿ

ಅದರ ಮೇಲೆ ಎಳ್ಳಿನ ಪುಡಿ (ಹಿಟ್ಟು)ಯಿಂದ ಪುರುಷಾಕಾರದ ಮೃತ್ಯುದೇವತೆಯ ಪ್ರತಿಮೆಯನ್ನು ದಕ್ಷಿಣಾಭಿಮುಖವಾಗಿ ಸ್ಥಾಪಿಸಿ, ಆ ಮೂರ್ತಿಗೆ ತಾಮ್ರದ ತಗಡಿನಿಂದ ಎರಡು ಹುಬ್ಬುಗಳನ್ನೂ, ಎರಡು ನೇತ್ರಗಳನ್ನೂ, ಎರಡೂ ಕೈಗಳಿಗೆ ಬೆಳ್ಳಿ, ಹಣೆಗೆ ಬಂಗಾರದ ಆಭರಣಗಳನ್ನು ಇಟ್ಟು ದೇಹಕ್ಕೆ ಒಂದು ಕೆಂಪು ವಸ್ತ್ರವನ್ನು ಹೊದಿಸಿ ತಲೆಗೆ ಮತ್ತೊಂದು ಕೆಂಪು ವಸ್ತ್ರವನ್ನು ಸುತ್ತಿ(ಧರಿಸಿ) ಯಜಮಾನನು ಪೂರ್ವಾಭಿಮುಖವಾಗಿ ಕುಳಿತುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ,

"ಮಮ ಸರ್ವಾರಿಷ್ಟ ನಿವಾರಣಾರ್ಥಂ, ಚಸಮಸ್ತ ಪಾಪ ಪರಿಹಾರಾರ್ಥಂ ಕುಜ ದಶಾಯಾಂ ಶನಿ ಪ್ರೀತಿಕರ ಮೃತ್ಯು ಪ್ರತಿಮಾ ಪೂಜಾಂಚ ದಾನಂ ಕರಿಷ್ಯೇತದಾದೌ ಗಣಪತಿ ಪೂಜಾಂ ಕರಿಷ್ಯೇ"

ಎಂದು ಸಂಕಲ್ಪವನ್ನು ಮಾಡಿ ಗಣಪತಿಯನ್ನು ಪೂಜಿಸಿದ ನಂತರ ಮೃತ್ಯು ದೇವತೆಯನ್ನು ಧ್ಯಾನ ಮಾಡಬೇಕು.

ಧ್ಯಾನ- ದಂಷ್ಟ್ರಾಕರಾಳವದನಂ ಘೋರ ರೂಪಂ ಭಯಂಕರಂ।
ದಂಶಪಾಶಧರಂ ದೇವಂ ದಕ್ಷಿಣಾಭಿಮುಖಂ ಸದಾ ॥

ಈ ಪ್ರಕಾರ ಮೃತ್ಯು ದೇವನನ್ನು ಧ್ಯಾನಿಸಿ

ಓಂ ಭೂಃ ಮೃತ್ಯುದೇವಂ ಆವಾಹಯಾಮಿ । ಓಂ ಭುವಃ ಮೃತ್ಯುದೇವಂ ಆವಾಹಯಾಮಿ। ಓಗ್ಂ ಸುವಃ ಮೃತ್ಯುದೇವಂ ಆವಾಹಯಾಮಿ। ಓಂ ಭೂರ್ಭುವಸ್ಸುವಃ ಮೃತ್ಯುದೇವಂ ಆವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಎಂದು ಆವಾಹನೆ ಮಾಡಿ ಶುದ್ಧೋದಕ, ಭಸ್ಮ ಕೆಂಪು ಗಂಧ, ಕುಂಕುಮ, ಕೆಂಪು ಅಕ್ಷತೆ, ಕೆಂಪು ಹೂ, ಧೂಪ, ದೀಪಗಳಿಂದ ಪೂಜಿಸಿ ಕೃಸರಾನ್ನವನ್ನು ನೈವೇದ್ಯ ಮಾಡಿ ಪ್ರದಕ್ಷಿಣೆ, ನಮಸ್ಕಾರಗಳನ್ನೂ, ಮಂತ್ರ ಪುಷ್ಪಗಳನ್ನೂ ಸಮರ್ಪಿಸಿ.

ಸದಾಚಾರಿಯೂ, ವಿದ್ವಾಂಸನೂ ಆದ ಒಬ್ಬ ಬ್ರಾಹ್ಮಣ ಅಥವಾ ಜಂಗಮ ಮೂರ್ತಿಯನ್ನು ಕರೆತಂದು ಆತನನ್ನು ದಕ್ಷಿಣಕ್ಕೆ ಮುಖ ಮಾಡಿ ಕೂಡ್ರಿಸಿ ಭಸ್ಮ, ಗಂಧ, ಪುಷ್ಪಹಾರ, ವಸ್ತ್ರಾದಿಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಮೃತ್ಯು ದೇವತೆಯನ್ನು ದಕ್ಷಿಣೆ ಸಹಿತ ದಾನ ಮಾಡಬೇಕು.

ಮಂತ್ರ- ಮೃತ್ಯು ಸಂಜ್ಞ ಮಹಾಕಾಯ ಕರ್ಮಸಾಕ್ಷಿನ್ನೃಣಾಂ ಸದಾ।
ತವದಾನೇನ ಮಂತ್ರಾಹಿ ಮೃತ್ಯು ರೋಗಾದಿ ಸಂಕಟಾತ್ ॥
ದತ್ವೈವಂತು ತತೋದದ್ಯಾದ್ದಕ್ಷಿಣಾನ್ ಸ್ವರ್ಣಪಂಚಕಂ।

ದನಪ್ರತಿಷ್ಠಾ ಸಿದ್ಧ್ಯರ್ಥಂ ದಾತುಶ್ರೇಯೋವಿವೃದ್ಧಯೇ।
ಅನೇನವಿಧಿನಾ ಯಸ್ತು ಮೃತ್ಯುದಾನಂ ಸಮಾಚರೇತ್।
ಮಹಾಪಾತಕ ಯುಕ್ತೋವಾ ಪ್ರಾಪ್ತೋವಾಚೋಪಪಾತಕೈಃ।
ಮಿತ್ರವಾಹಾ ಕೃತಘ್ನೋವಾ ನಾಸ್ತಿಕೋವಾಪಿ ಹಿಂಸಕಃ।
ಸರ್ವಪಾಪನಿರ್ಮುಕ್ತಸ್ಸಜೀವೇಚ್ಛರದಾಂ ಶತಂ॥
ಇಹಭುಕ್ತ್ವಾಖಿಲಾನ್ ಭೋಗಾನ್‌ನಂತ್ಯೇ ಯಮಪುರಂವ್ರಜೇತ್।
ದಿವ್ಯಮಾಲ್ಯಾಂಬರ ಧರೋ ದಿವ್ಯಾಭರಣ ಭೂಷಿತಃ।
ಸುರೂಪ ಸ್ಸುಭಗ ಶ್ರೀಮಾನ್ ದಿವ್ಯ ಸ್ತ್ರೀ ಭಿಸ್ಸಮನ್ವಿತಃ।
ತತ್ರಸ್ಥಿತ್ವೈ ರ್ಮಹಾಭಾಗ್ಯೆ ಸ್ತೂಯಮಾನೋ ದಿವಾನಿಶಂ।
ರಮಿತ್ವಕಲ್ಪಮೇಕಂತು ತತೋ ವಿಷ್ಣುಪುರಂ ವ್ರಜೇತ್॥

ಎಂದು ಉಚ್ಚರಿಸುತ್ತ ದಾನ ಮಾಡುವದರಿಂದ ಸಮಸ್ತ ಅನಿಷ್ಟಶಾಂತಿಯಾಗುವದೆಂದು ದಶಾಚಂದ್ರಿಕೆಯಲ್ಲಿ ವಿವರಿಸಿದೆ.



## ಕುಜದಶಾ ಬುಧ ಭುಕ್ತಿಯಲ್ಲಿ ಬುಧಪ್ರೀತಿಕರ ಅಶ್ವದಾನವು

ಜನನ ಲಗ್ನಕುಂಡಲಿಯಲ್ಲಿ ಬುಧನು 6–8–12 ಸ್ಥಾನಗಳಲ್ಲಿದ್ದರೆ ನೀಚರಾಶಿಗತನಾಗಿ, ದಶಾಧಿಪತಿಯಾದ ಕುಜನೊಡನೆ ಕೂಡಿದ್ದರೆ ಕುಜದಶಾ ಬುಧ ಭುಕ್ತಿಯಲ್ಲಿ ಪಶುಗಂಡ, ಹೃದ್ರೋಗ, ಶತ್ರುಭಯ, ದೇಶಬ್ರಷ್ಟರಾಗುವಿಕೆಯು, ನಾನಾರೋಗಪೀಡೆಯು. ಈ ದೋಷ ಪರಿಹಾರಕ್ಕಾಗಿ ಸೂರ್ಯ ಪ್ರಾರ್ಥನೆಯನ್ನು ಮಾಡಿ, ಅಶ್ವ (ಕುದುರೆ) ದಾನ ಮಾಡುವದರಿಂದ ಸರ್ವಾರಿಷ್ಟ ನಿವಾರಣೆಯು.

ಸೂರ್ಯ ಅಥವಾ ಚಂದ್ರಗ್ರಹಣಗಳ ಪುಣ್ಯಕಾಲಗಳಲ್ಲಿ ಅಥವಾ ಉಪದ್ರವ ಇರುವ ಕಾಲದಲ್ಲಿ ದೇವಾಲಯ ಮೊದಲಾದ ಪವಿತ್ರ ಸ್ಥಳವನ್ನು ಗೋಮಯದಿಂದ ಸಾರಿಸಿ, ರಂಗವಲ್ಯಾದಿಗಳಿಂದ ಅಲಂಕರಿಸಿದ ಭೂಪ್ರದೇಶದಲ್ಲಿ ಯಜಮಾನನು ಭದ್ರಾಸನದಲ್ಲಿ ಪೂರ್ವಾಭಿಮುಖನಾಗಿ ಕುಳಿತುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ–

''ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ.......ಶುಭ ತಿಥೌ ಮಯಾಕೃತಾನಾಂ ಸರ್ವೇಷಾಂ ಪಾಪಾನಾಂ ನಿವೃತ್ಯರ್ಥಂಚ ಸರ್ವೋಪದ್ರವ ನಾನಾರೋಗ ನಿವಾರಣಾರ್ಥಂ ಸರ್ವ ಮಂಗಳಾಪ್ರಾಪ್ತಿ ಆಯುರಾರೋಗ್ಯ ಸಿದ್ಧಿಂ ಉತ್ತರತ್ರ ಅಶ್ವರೋಮ ಸಂಖ್ಯಾದಿ ಸಮ್ಮಿಲಿತ ದಿವ್ಯ ವರ್ಷ ಪರ್ಯಂತಂ ಸೂರ್ಯಲೋಕ ನಿವಾಸ ಸಿದ್ಧ್ಯರ್ಥಂ ಸಕಲಾಭೀಷ್ಟ ಪ್ರದಾಯಕ ಶ್ರೀಸೂರ್ಯ ನಾರಾಯಣ ಪ್ರೀತಿಂ ಕಾಮಯಮಾನಃ ಕೂರ್ಮಪುರಾಣೋಕ್ತ ಪ್ರಕಾರೇಣ ಅಶ್ವದಾನಂ ಕರಿಷ್ಯೇ, ತದಾದೌ ಗಣಪತಿ ಪೂಜಾಂ ಕರಿಷ್ಯೇ''

ಎಂದು ಸಂಕಲ್ಪವನ್ನು ಮಾಡಿ, ಗಣಪತಿಯನ್ನು ಪೂಜಿಸಿದ ಬಳಿಕ ಅಶ್ವ (ಕುದುರೆ) ಪೂಜೆಯನ್ನು ಮಾಡಬೇಕು.

## ಅಶ್ವ (ಕುದುರೆ) ಪೂಜಾ

ರಂಗವಲ್ಯಾದಿಗಳಿಂದ ಅಲಂಕೃತವಾದ ಸ್ಥಳದಲ್ಲಿ ಸರ್ವ ಸುಲಕ್ಷಣಗಳಿಂದ ಕೂಡಿದ ಮತ್ತುಸ್ನಾನ ಮಾಡಿಸಿದ ಕುದುರೆಯನ್ನು ಪೂರ್ವಾಭಿಮುಖವಾಗಿ ನಿಲ್ಲಿಸಿ ಅದಕ್ಕೆ ಕೆಂಪು ಬಣ್ಣದ ರೇಶಿಮೆಯ ಮಡಿಯನ್ನು ಹೊದಿಸಿ ಐದು ತೊಲೆ ಬೆಳ್ಳಿ ಅಥವಾ ಬಂಗಾರದ ಖುರ (ಕೊಳಗ)ಗಳನ್ನು ಮಾಡಿಸಿ ಕೊಳಗಗಳನ್ನು ಅದರ ಖುರಗಳಿಗೆ ಜೋಡಿಸಿ, ಕುದುರೆಯ ಕೊರಳಲ್ಲಿ ಬಂಗಾರದ ನಕ್ಷತ್ರ ಮಾಲಿಕೆಯನ್ನು ಹಾಕಿ ಬಾಲಕ್ಕೆ ಮುತ್ತಿನ ಮಾಲೆಯನ್ನು ಹಾಕಿ ''ಓಂ ಅಶ್ವಾಯ ನಮಃ'' ಈ ಮಂತ್ರದಿಂದ ಕುದುರೆಯನ್ನು ಷೋಡಶೋಪಚಾರಗಳಿಂದ ಪೂಜಿಸಿ ನಂತರ ಕುದುರೆಯ ಎದುರಿನಲ್ಲಿ ಕೈಜೋಡಿಸಿ ನಿಂತು ಪ್ರಾರ್ಥನೆಯನ್ನು ಮಾಡಬೇಕು.

ಪ್ರಾರ್ಥನೆ- ಗಂಧರ್ವಕುಲ ಜಾತಸ್ತ್ವಂ ಮಾಭೂಯ ಕುಲದೂಷಕಃ।
ಬ್ರಾಹ್ಮಣಸ್ಯಚ ಸೂರ್ಯಸ್ಯ ವರುಣಸ್ಯಚ।
ಪ್ರಭಾವಶ್ಚ ಹುತಾಶಸ್ಯ ವರ್ಧಯಸ್ವತುರಂಗಮ।
ತೇಜಸಾಚೈವ ಸೂರ್ಯಸ್ಯ ಮುನೀನಾಂ ತಪಸಾ ತಥಾ।
ರುದ್ರಸ್ಯ ಬ್ರಹ್ಮಚರ್ಯೇಣ ಪವನಸ್ಯ ಬಲೇನಚ।
ಸ್ಮರತ್ವಂ ರಾಜಪುತ್ರತ್ವಂ ಕೌಸ್ತುಭಂಚ ಮಣಿಂಸ್ಮರ।
ಯಾಗತಿಂ ಬ್ರಹ್ಮಹಾಗಚ್ಛೇತ್ಪಿತೃಹಾ ಮಾತೃಹಾ ತಥಾ।
ಭೂಮ್ಯಾರ್ಥೆ ನೃತವಾದೀಚ ಕ್ಷತ್ರೀಯಸ್ಯಪರಾಙ್ಮುಖ।

ಸೂರ್ಯಾ ಚಂದ್ರಮಸೌ ವಾಯುರ್ಯಾವತ್ಪಶ್ಯಂತಿ ದೃಷ್ಕೃತಿಂ।
ಪ್ರಜಸ್ತ್ವಂತಾಂ ಗತಿಂ ಕ್ಷಿಪ್ರಂ ತಚ್ಚಪಾಪಂ ಭವೇತ್ತವ।
ವಿಕೃತಿಂ ಹಯಮೇ ಧೇತ್ವಂ ಯುದ್ಧೇದ್ಧಾನಿ ತುರಂಗಮ।
ರಿಪೂನ್ ವಿಜಿತ್ಯ ಸಮರೇ ಸಹಭರ್ತ್ರಾ ಸುಖೀಭವ॥

ಈ ಪ್ರಕಾರ ಅಶ್ವ (ಕುದುರೆ)ವನ್ನು ಪ್ರಾರ್ಥಿಸಿದ ಬಳಿಕ ಸುಶೀಲನೂ, ಸದಾಚಾರಿಯೂ, ವೇದಶಾಸ್ತ್ರಗಳನ್ನು ಬಲ್ಲವನೂ ಆದ ಬ್ರಾಹ್ಮಣ ಅಥವಾ ಜಂಗಮ ಮೂರ್ತಿಯನ್ನು ಆತನನ್ನು ಸೂರ್ಯನಾರಾಯಣ ಸ್ವರೂಪನೆಂದು ಭಾವಿಸಿ ಆತನನ್ನು ಗಂಧ, ಅಕ್ಷತೆ, ಪುಷ್ಪಹಾರ, ವಸ್ತ್ರಾದಿಗಳಿಂದ ಪೂಜಿಸಿ ಸತ್ಕರಿಸಿ ಆ ಅಶ್ವ (ಕುದುರೆ)ವನ್ನು ಆತನಿಗೆ ದಾನ ಕೊಡಬೇಕು.

ದಾನಮಂತ್ರ : ಉಚ್ಛೈಶ್ರವ ಸ್ತ್ವಂ ಶುಭದ ರಾಜ್ಞಾಂ ವಿಜಯದಾಯಕ।
ಸೂರ್ಯವಾಹ ನಮಸ್ತುಭ್ಯ ಮತಶ್ಯಾಂತಿಂ ಪ್ರಯಚ್ಛಮೇ।
ಅಶ್ವೈ ಇಮಂ ಸರ್ವಾಲಂಕಾರ ಶೋಭಿತ ಗಂಧ ಪುಷ್ಪಾದ್ಯಲಂಕೃತ
ಸೂರ್ಯದೇವತಾಕಮಶ್ವಂ ಪೂರ್ವೋಕ್ತಫಲ ಕಾಮಸ್ತುಭ್ಯ
ಮಹಂ ಸಂಪ್ರದದೇ ನಮಮ ನಮಮ

ಈ ಮಂತ್ರವನ್ನು ಉಚ್ಚರಿಸುತ್ತಕುದುರೆಯನ್ನು ನೂರು ವರಹ ಅಥವಾ ಇಪ್ಪತ್ತೈದು ವರಹ ಇಲ್ಲವೆ ನೂರು ನಾಣ್ಯಗಳನ್ನು ತಾಂಬೂಲ ಸಹಿತವಾಗಿ ದಾನ ಮಾಡುವದರಿಂದ ಸರ್ವ ಪೀಡೆಗಳು ಕಳೆದು ಹೋಗುವವು ಎಂಬುದಾಗಿ ಕೂರ್ಮ ಪುರಾಣದಲ್ಲಿ ಉಕ್ತವಾಗಿದೆ.



## ಕುಜದಶಾ ಕೇತು ಭುಕ್ತಿಯಲ್ಲಿ ಕೇತುಪ್ರೀತಿಕರ ಛಾಗ (ಮೇಕೆ) ದಾನವು

ಕುಜದಶಾ ಕೇತುಭುಕ್ತಿಯಲ್ಲಿ ಜನನ ಲಗ್ನ ಕುಂಡಲಿಯೊಳು ಕೇತುವು 6–8–12 ಸ್ಥಾನಗಳಲ್ಲಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, ಮಾರಕ ಗ್ರಹಗಳೊಡನೆ ಕೂಡಿದ್ದರೆ ಮಾಟ, ಮದ್ದು ಮೊದಲಾದ ವಿಷಭಯವು, ಚೋರಭಯವು, ಶತ್ರುಗಳಿಂದ ಪೀಡೆಯು, ಹೆಂಡತಿ, ಮಕ್ಕಳಿಗೆ ಉಪದ್ರವಗಳು, ಆಪ್ತೇಷ್ಟ ಬಂಧುಗಳೊಡನೆ ವಿರೋಧವು, ಪರಸ್ಥಳ ಪ್ರವಾಸವು, ಅಪಮೃತ್ಯು ಭಯವು. ಈ ದೋಷ ಪರಿಹಾರಕ್ಕಾಗಿ ಶ್ರೀ ರುದ್ರ ಜಪವನ್ನು ಮಾಡಿಸಿ ಛಾಗ (ಮೇಕೆ) ದಾನವನ್ನು ಮಾಡುವದರಿಂದ ಸರ್ವ ಅನಿಷ್ಟಗಳು

ಪರಿಹಾರವಾಗುವವು ಎಂಬುದಾಗಿ ಜ್ಯೋತಿಷಾರ್ಣವ ಗ್ರಂಥದಲ್ಲಿ ಉಕ್ತವಾಗಿದೆ. (ರವಿದಶಾ ಶನಿಭುಕ್ತಿಯಲ್ಲಿ ತಿಳಿಸಿದ ಪ್ರಕಾರ ಛಾಗ(ಮೇಕೆ) ದಾನವನ್ನು ಮಾಡಬೇಕು.)

(ಪುಟ–32 ನೋಡಿರಿ)



## ಕುಜದಶಾ ಶುಕ್ರಭುಕ್ತಿಯಲ್ಲಿ ಶುಕ್ರಪ್ರೀತಿಕರ ದುರ್ಗಾ ದಾನವು

ಕುಜದಶಾ ಶುಕ್ರಭುಕ್ತಿಯಲ್ಲಿ ಶುಕ್ರನು ಜನನ ಲಗ್ನ ಕುಂಡಲಿಯಲ್ಲಿ 6–8–12 ಸ್ಥಾನಗಳಲ್ಲಿದ್ದರೆ, ಮಾರಕ ಗ್ರಹಗಳೊಡನೆ ಅಥವಾ ಪಾಪ ಗ್ರಹಗಳೊಡನೆ ಕೂಡಿದ್ದರೆ ಇಲ್ಲವೆ ಈ ಗ್ರಹಗಳ ದೃಷ್ಟಿಯಲ್ಲಿದ್ದರೆ, ರೋಗೋಪದ್ರವವು, ದುಃಖವು, ಕಲಹವು, ಅಪಮೃತ್ಯು ಭಯವು. ಈ ದೋಷ ಪರಿಹಾರಕ್ಕಾಗಿ ನವದುರ್ಗಾ ಜಪವನ್ನು ಮಾಡಿಸಿ ದುರ್ಗಾ ಮೂರ್ತಿಯನ್ನು ದಾನ ಮಾಡುವದರಿಂದ ಕ್ಷೇಮವಾಗುವದಲ್ಲದೆ ಆರೋಗ್ಯ, ಆಯುಷ್ಯಗಳು ವೃದ್ಧಿಯಾಗುವವು ಎಂಬುದಾಗಿ ಪಾರಾಶರ್ಯ ಗ್ರಂಥದಲ್ಲಿ ತಿಳಿಸಲಾಗಿದೆ. (ಚಂದ್ರದಶಾ ಗುರುಭುಕ್ತಿಯಲ್ಲಿ ಸೂಚಿಸಿದ ಪ್ರಕಾರ ದುರ್ಗಾದಾನವನ್ನು ಮಾಡಬೇಕು)

(ಪುಟ–39 ನೋಡಿರಿ)



## ಕುಜದಶಾ ರವಿಭುಕ್ತಿಯಲ್ಲಿ ರವಿ ಪ್ರೀತಿಕರ ಪದ್ಮದಾನವು

ಕುಜದಶಾ ರವಿಭುಕ್ತಿಯಲ್ಲಿ ರವಿಯು ಜನನ ಲಗ್ನ ಕುಂಡಲಿಯಲ್ಲಿ 6–8–12 ಸ್ಥಾನಗಳಲ್ಲಿದ್ದರೆ, ಪಾಪಗ್ರಹಗಳೊಡನೆ ಅಥವಾ ಮಾರಕ ಗ್ರಹಗಳೊಡನೆ ಕೂಡಿದ್ದರೆ ಮತ್ತು ಆ ಗ್ರಹಗಳ ದೃಷ್ಟಿಗೊಳಪಟ್ಟಿದ್ದರೆ ತಾಪಜ್ವರ, ಪಿತ್ತಜ್ವರ ಬಾಧೆಯು, ದೇಹದಲ್ಲಿ ಗಂಡಮಾಲೆ, ಭಗಂದರ ಮೊದಲಾದ ವ್ರಣಬಾಧೆಯು, ಹುರುಕು, ಖಜ್ಜಿ ಗಜಕರ್ಣ ವಗೈರೆ ಚರ್ಮರೋಗೋಪದ್ರವವು. ಈ ದೋಷ ಪರಿಹಾರಕ್ಕಾಗಿ ಯಾಮಳೋಕ್ತ ಪ್ರಕಾರವಾಗಿ ಪದ್ಮ(ಕಮಲ) ದಾನ ಮಾಡುವದರಿಂದ ವಾತ, ಪಿತ್ತ ಕಫಗಳಿಂದ ಉತ್ಪನ್ನವಾಗುವ ಸರ್ವ ರೋಗಗಳು ಉಪಶಾಂತವಾಗಿ ಆಯುಷ್ಯ, ಆರೋಗ್ಯ ವೃದ್ಧಿಯಾಗುವವು. ಅಗ್ನಿಮಾಂದ್ಯ, ರಾಜಯಕ್ಷ್ಮ(ಕ್ಷಯ) ಮಾಟ, ಮದ್ದು ಮೊದಲಾದ ಕೃತ್ರಿಮ ವಿಷಬಾಧೆಗಳು, ದುಷ್ಟ ಸ್ಥಾನಗಳಲ್ಲಿರತಕ್ಕ ಗ್ರಹಪೀಡೆಗಳು ಪರಿಹಾರವಾಗಿ ದೇಹದಲ್ಲಿ ಬಲ, ಪುಷ್ಟಿ, ತೇಜಸ್ಸುಗಳು ಹೆಚ್ಚಾಗುವವು ಎಂಬುದಾಗಿ ಜ್ಯೋತಿಃ ಸಂಹಿತೆಯಲ್ಲಿ ಉಕ್ತವಾಗಿದೆ.

ಪದ್ಮದಾನ:- (ಯಾಮಳೋಕ್ತಪ್ರಕಾರ) ರವಿವಾರ, ಮಂಗಳವಾರಗಳಲ್ಲಿ ಅಷ್ಟಮಿ, ಚತುರ್ದಶಿ, ಅಮವಾಸ್ಯ ತಿಥಿಗಳಲ್ಲಿ ಜನ್ಮನಕ್ಷತ್ರ, ವ್ಯತೀಪಾತಾದಿ ಯೋಗ ಕೂಡಿದ ದಿವಸ ಸ್ವಗೃಹದಲ್ಲಿ ಅಥವಾ ಪರಿಶುದ್ಧವಾದ ಸ್ಥಳದಲ್ಲಿ ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಸ್ಥಳದೊಳು ರಂಗವಲ್ಲಿಯಿಂದ ಅಷ್ಟ (ಎಂಟು) ದಳ ಕಮಲವನ್ನು ಬರೆದು ಅದರ ಮೇಲೆ ಪ್ರಸ್ತಪ್ರಮಾಣ ಅಕ್ಕಿಯ ಗುಂಪೆಯನ್ನು ಹಾಕಿ ಅದರಲ್ಲಿ ಅಷ್ಟದಳ ಕಮಲವನ್ನು ಬರೆದು ಅದರ ಮೇಲೆ ಕೆಂಪು ವಸ್ತ್ರವನ್ನು ಹಾಸಬೇಕು. ಆ ವಸ್ತ್ರದಲ್ಲಿ ಕೆಂಪು ಗಂಧದಿಂದ ಎಂಟು ದಳಗಳುಳ್ಳ ಕಮಲವನ್ನು ರಚಿಸಿ ಅದರ ಮೇಲೆ ಎರಡು ವಿಳ್ಯದೆಲೆಗಳನ್ನು ಹಾಸಿ ಅದರಲ್ಲಿ 1 ತೊಲೆ ಬಂಗಾರದಿಂದ ನಿರ್ಮಿಸಲ್ಪಟ್ಟ (1ತೊಲಿ, ಅರ್ಧತೊಲಿ, ಕಾಲು ತೊಲಿ ಈ ಪ್ರಕಾರ ಧನದ ಅಭಾವಕ್ಕನುಸಾರವಾಗಿ ಕಡಿಮೆ ತೂಕದ ಕಮಲ ತಯಾರಿಸಬಹುದು) ಪದ್ಮ ಎಳ್ಳಿನ (ಕಮಲ)ವು ಆರು ಅಂಗುಲ ವೃತ್ತಾಕಾರ (ದುಂಡಗೆ) ಇದ್ದು ಎಂಟು ದಳಗಳುಳ್ಳದ್ದಾಗಿರಬೇಕು. ಕಮಲವನ್ನು ಕೆಂಪು ಗಂಧ, ಕೆಂಪು ಅಕ್ಷತೆ, ಪತ್ರಿ, ಪುಷ್ಪಗಳಿಂದ ಪೂಜಿಸಿ ನೈವೇದ್ಯವನ್ನು ಸಮರ್ಪಿಸಿ ನಂತರ ಪೂರ್ವಾದಿ ಎಂಟು ದಿಕ್ಕುಗಳಿಗಿರುವ ಕಮಲದ ಎಂಟೂ ದಳಗಳಲ್ಲಿ ಸೂರ್ಯನ ಎಂಟು ನಾಮ (ಹೆಸರು) ಗಳನ್ನು ಬರೆದು ಎಂಟೂ ನಾಮಗಳನ್ನು ಗಂಧಾಕ್ಷತಾದಿಗಳಿಂದ ಪೂಜಿಸಬೇಕು.

ಪೂರ್ವ– ದಿವಾಕರಾಯ ನಮಃ
ಆಗ್ನೇಯ– ಸೂರ್ಯಾಯ ನಮಃ
ದಕ್ಷಿಣ– ರೋಗಜಾಲಹರಾಯ ನಮಃ
ನೈಋುತ್ಯ– ಸರ್ವಪ್ರಾಣಿನಿವಾಸಾಯ ನಮಃ
ಪಶ್ಚಿಮ– ಮಾರ್ತಾಂಡಾಯ ನಮಃ
ವಾಯವ್ಯ– ಭಾನವೇ ನಮಃ
ಉತ್ತರ– ತ್ರಯೀಮಯಾಯ ನಮಃ
ಈಶಾನ್ಯ– ಪುತ್ರಾಯ ನಮಃ

ಈ ಪ್ರಕಾರ ಎಂಟು ದಿಕ್ಕುಗಳಲ್ಲಿರುವ ಎಂಟು ದಳಗಳಲ್ಲಿ ಈ ಎಂಟು ನಾಮಗಳನ್ನು ಬರೆದು ಇವೇ ನಾಮಗಳನ್ನು ಉಚ್ಚರಿಸುತ್ತ ಆಯಾ ದಳಗಳಲ್ಲಿರುವ ನಾಮಗಳನ್ನು ಪೂಜಿಸಬೇಕು. ನಂತರ ಎಕ್ಕೆ ಕಟ್ಟಿಗೆ, ತುಪ್ಪ, ಎಳ್ಳುಗಳಿಂದ ಸಮಿತ್ತುಗಳಿಂದ ಸೌರಾಷ್ಟಾಕ್ಷರ ಮಂತ್ರದಿಂದ 108 ಸಾರೆ ಆಹುತಿಕೊಡಬೇಕು. ಈ ಪ್ರಕಾರ ಹೋಮಕಾರ್ಯವನ್ನು ಮಾಡಿದ ನಂತರ ಗುರುಗಳನ್ನು ಪೂರ್ವಾಭಿಮುಖವಾಗಿ ಕೂಡ್ರಿಸಿ ಗಂಧ, ವಸ್ತ್ರ, ಭೂಷಣ, ಪುಷ್ಪ ಹಾರಾದಿಗಳಿಂದ ಪೂಜಿಸಿ ಯಜಮಾನನು ಪಶ್ಚಿಮಾಭಿಮುಖವಾಗಿ ನಿಂತುಕೊಂಡು ದಕ್ಷಿಣೆ ತಾಂಬೂಲ ಸಹಿತವಾಗಿ ಆ ಸುವರ್ಣ ಪದ್ಮ(ಕಮಲ)ವನ್ನು ಭಕ್ತಿಪೂರ್ವಕವಾಗಿ ಈ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ದಾನಕೊಡಬೇಕು.

ದಾನಮಂತ್ರ :- ಮೃತ್ಯುಂಜಯದಿವಾನಾಥಾ ಮಹಾರೋಗ ಭಯಾದ್ಧಿ ಮಾಂ।
ಸ್ವರ್ಣಪದ್ಮ ಪ್ರದಾನೇನ ತ್ರಾಹಿ ತ್ರಾಹಿ ಮಹಾಭಯಾತ್ ।
ವಾತ ಪಿತ್ಥ ಕಪೋದ್ಭೂತ ಗ್ರಹಣ್ಯಾದ್ಯಾಮಯಾ ಕುಲಂ।
ಪದ್ಮದಾನೇನ ತತ್ಸರ್ವಂ ವಿನಾಶಯದಿವಾಕರ।
ತತಸ್ತುದಕ್ಷಿಣಾ ದಾನಂ ಯಥಾವಿತ್ತಾನುಸಾರತಃ।
ಏವಂ ಯಃ ಕುರುತೇದಾನ ನಿರೋಗೀ ಜಾಯತೇ ಧ್ರುವಂ।
ಅರುಚಿ ಗ್ರಹಣೀ ರೋಗ ಜಾಲಾದ್ಯೈಃ ಪರಿವರ್ಜಿತಃ।
ಬಲಕಾಂತಿ ಯುತೋ ಮರ್ತ್ಯಸ್ಸುಖೀಭವತು ಸರ್ವದಾ ॥

ಈ ಪ್ರಕಾರ ಸುಶೀಲನೂ, ಸದಾಚಾರಿಯೂ, ಪಂಡಿತನೂ ಆದ ಬ್ರಾಹ್ಮಣನಿಗೆ ಅಥವಾ ಮಾಹೇಶ್ವರನಿಗೆ ದಾನ ಮಾಡಿದರೆ ದೋಷ ಶಾಂತಿಯಾಗುವದು.



## ಕುಜದಶಾ ಚಂದ್ರಭುಕ್ತಿಯಲ್ಲಿ ಚಂದ್ರ ಪ್ರೀತಿಕರ ದುರ್ಗಾ ದಾನವು

ಜನನ ಲಗ್ನ ಕುಂಡಲಿಯಲ್ಲಿ ಚಂದ್ರನು ನೀಚರಾಶಿ, ಶತ್ರು ರಾಶಿಗಳಲ್ಲಿದ್ದರೆ ಕ್ಷೀಣ ಚಂದ್ರನಾಗಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, ಮಾರಕ ಗ್ರಹಗಳೊಡನೆ ಕೂಡಿಕೊಂಡಿದ್ದರೆ ಕುಜದಶಾ ಚಂದ್ರಭುಕ್ತಿಯಲ್ಲಿ ಚಂದ್ರನು ಮಾರಕನಾಗುವದರಿಂದ ದೇಹದಲ್ಲಿ ಪಾಂಡುರೋಗ ಶ್ಲೇಷ್ಮರೋಗಗಳುಂಟಾಗುವವು. ಈ ದೋಷ ಪರಿಹಾರಕ್ಕಾಗಿ ಚಂದ್ರದಶಾ ಗುರುಭುಕ್ತಿಯಲ್ಲಿ ತಿಳಿಸಿದ ಪ್ರಕಾರ (39 ಪುಟ ನೋಡಿರಿ) ದುರ್ಗಾದಾನ ಮಾಡುವದರಿಂದ ದೋಷ ಪರಿಹಾರವಾಗುವದು ಎಂಬುದಾಗಿ ನಾರದೀಯ ಗ್ರಂಥದಲ್ಲಿ ಉಲ್ಲೇಖವಾಗಿದೆ.



## ರಾಹುದಶೆಯಲ್ಲಿ ರಾಹು ಪ್ರೀತಿಕರ ಸ್ವರ್ಣ ಲೋಹ ದಾನವು

ಜನನ ಲಗ್ನ ಕುಂಡಲಿಯಲ್ಲಿ ರಾಹು ದುಷ್ಟ ಸ್ಥಾನಗಳಲ್ಲಿ ಇದ್ದುದಾದರೆ ನಾನಾ ರೀತಿಯ ಉಪಾಧಿಗಳುಂಟಾಗುವವು. ಸ್ವದೇಶದಲ್ಲಿ ತಿರುಗಾಡುವದು, ಸ್ವಜನ–ಪರಜನರೊಡನೆ ಕಲಹವು, ಮಿತ್ರಭೇದವು ಶತ್ರುಗಳ ಭಯವು, ಮಾನಹಾನಿಯು, ಧನ ನಾಶವು, ಅಸ್ತ್ರ, ಶಸ್ತ್ರಗಳ ಭಯವು, ಸರ್ಪಭಯವು, ವಿಷಭಯವು,

ದುಷ್ಟ ಜನರಿಂದ ಉಪದ್ರವವು. ಇವೆಲ್ಲವುಗಳ ಪರಿಹಾರಕ್ಕಾಗಿ ಸುವರ್ಣ (ಬಂಗಾರ) ಲೋಹ (ಕಬ್ಬಿಣ) ದಾನ ಮಾಡಬೇಕು. ಅದು ಹೇಗೆಂದರೆ– ಶನಿವಾರ, ಮಂಗಳವಾರಗಳಲ್ಲಿ ಕೃಷ್ಣಪಕ್ಷದ ಅಷ್ಟಮಿ, ಚತುರ್ದಶಿ, ಅಮವಾಸ್ಯ ಹುಣ್ಣಿಮೆ, ಸಂಕ್ರಮಣ ಈ ಪರ್ವ ಕಾಲಗಳಲ್ಲಿ ದೇವಾಲಯದೊಳು ಅಥವಾ ಮನೆಯಲ್ಲಿ ಗೋಮಯದಿಂದ ಸಾರಿಸಿದ ಶುದ್ಧ ಪ್ರದೇಶದಲ್ಲಿ ರಂಗವಲ್ಲಿಯನ್ನು ಹಾಕಿ ಅಲ್ಲಿ ಗುಂಪೆಯನ್ನು ಮಾಡಿ ಅದರ ಮೇಲೆ ಕಬ್ಬಿಣದಿಂದ ತಯಾರಿಸಿದ ಮೊರವನ್ನು ಇಟ್ಟು ಅದರಲ್ಲಿ ಬಂಗಾರದ ರಾಹು ಪ್ರತಿಮೆಯನ್ನು ಒಂದು ವಸ್ತ್ರವನ್ನು ಹಾಸಿ, ಒಂದು ವಸ್ತ್ರವನ್ನು ಹೊದಿಸಿ ಇಡಬೇಕು. (ರಾಹು ಪ್ರತಿಮೆಯು ಖಡ್ಗ, ಶೂಲವರ, ಚರ್ಮಹಸ್ತ, ನೀಲಸಿಂಹಾಸನ ಯುಕ್ತವಾಗಿರಬೇಕು) ಮತ್ತು ಪ್ರತಿಮೆಯನ್ನು

"ಕಯಾನಶ್ಚಿತ್ರ ಆಭುವ ದೂತೀ ಸದಾ ವೃಧಸ್ಸಖಾ । ಕಯಾಶಚಿಷ್ಠಯಾವೃತಾ" ॥

ಈ ಮಂತ್ರದಿಂದ ನೀಲಿ ಗಂಧ, ನೀಲಿ ಅಕ್ಷತೆ, ಕರಿಕೆ, ನೀಲಿ ಪುಷ್ಪ, ಧೂಪ, ದೀಪಗಳಿಂದ ಪೂಜಿಸಿ ಲವಣ (ಉಪ್ಪು) ಕೂಡಿದ ಪಾಯಸವನ್ನು ನೈವೇದ್ಯ ಮಾಡಬೇಕು ಮತ್ತು ಈ ಮಂತ್ರದಿಂದ ಧ್ಯಾನ ಮಾಡಬೇಕು.

ಧ್ಯಾನಮಂತ್ರ– ಕರಾಳವದನಂ ಖಡ್ಗ ಚರ್ಮ ಶೂಲ ವರಾನ್ವಿತಂ।
ನೀಲ ಸಿಂಹಾಸನ ಸ್ಥಷ್ಚ ರಾಹುಸ್ತೇತ್ರ ಪ್ರಶಸ್ಯತೇ ॥

ಈ ಮಂತ್ರದಿಂದ ರಾಹು ಸ್ತೋತ್ರ ಮಾಡಬೇಕು.

ನಂತರ ಓರ್ವ ಮಾಹೇಶ್ವರ ಅಥವಾ ಬ್ರಾಹ್ಮಣನನ್ನು ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ದಕ್ಷಿಣೆ, ತಾಂಬೂಲ ಸಹಿತ ಕಬ್ಬಿಣದ ಮೊರ, ಬಂಗಾರದ ರಾಹು ಪ್ರತಿಮೆಗಳನ್ನು ದಾನ ಮಾಡಬೇಕು.

ದಾನಮಂತ್ರ– ತಿಲರಾಶಿಂ ಸ್ವರ್ಣಲೋಹ ಪಾತ್ರ ಭೂತಂ ಫಣೇಶ್ವರ
ದದಾಮಿ ದೋಷನಾಶಾಯ ಸರ್ವಕಾಮ್ಯಾರ್ಥಸಿದ್ಧಯೇ ॥

ಹೀಗೆ ಲೋಹ, ಸ್ವರ್ಣಗಳನ್ನು ಯಾಮಳ ಕಲ್ಪೋಕ್ತ ಪ್ರಕಾರ ದಾನ ಮಾಡುವದರಿಂದ ದೋಷಿಯಾದ ರಾಹುವಿನಿಂದ ಉಂಟಾಗತಕ್ಕ ಎಲ್ಲ ದೋಷಗಳು ನಿವಾರಣೆಯಾಗಿ ಯಜಮಾನನು ಆರೋಗ್ಯ ಭಾಗ್ಯದೊಡನೆ ನೂರು ವರ್ಷ ಸುಖವಾಗಿ ಬಾಳುವನು ಎಂಬುದಾಗಿ ಯಾಮಳ ತಂತ್ರದಲ್ಲಿ ಉಕ್ತವಾಗಿದೆ.



## ರಾಹುದಶಾ ರಾಹು ಭುಕ್ತಿಯಲ್ಲಿ ಪ್ರೀತಿಕರ ನಾಗದಾನವು

ಜನನ ಲಗ್ನಕುಂಡಲಿಯಲ್ಲಿ ರಾಹು 6–8–12 ಸ್ಥಾನಗಳಲ್ಲಿದ್ದರೆ, ಕ್ರೂರ ಗ್ರಹಗಳೊಡನೆ ಅಥವಾ ಮಾರಕ ಗ್ರಹಗಳೊಡನೆ ರಾಹು ಕೂಡಿದ್ದರೆ ಇಲ್ಲವೆ ಮಾರಕ ಸ್ಥಾನಗಳಲ್ಲಿದ್ದರೆ ರಾಹುದಶಾ ರಾಹು ಭುಕ್ತಿಯಲ್ಲಿ ಹೃದ್ರೋಗವು, ಮೂರ್ಛೆಯು (ಎಚ್ಚರ ತಪ್ಪುವದು) ಚಾತುರ್ಥಿಕ ಜ್ವರವು, ಪಿಶಾಚ ಬಾಧೆಯು ವಿಷಜಂತು ಭಯವು, ಕಲಹವು, ಸರ್ವ ಕಾರ್ಯಗಳಲ್ಲಿ ವಿಘ್ನವು, ಬ್ರಹ್ಮಹತ್ಯಾ ಶೂದ್ರಸ್ತ್ರೀ, ವಿಧವಾ ಸ್ತ್ರೀ ಹತ್ಯಾದೋಷವು ಇತ್ಯಾದಿ ದೋಷ ಪರಿಹಾರಕ್ಕಾಗಿ ದುರ್ಗಾ ಜಪ, ನಾಗದಾನ ಮಾಡಬೇಕು ಎಂಬುದಾಗಿ ಹೋರಾಸಾರದಲ್ಲಿ ಹೇಳಲ್ಪಟ್ಟಿದೆ. ಚಂದ್ರದಶಾ ಕುಜಭುಕ್ತಿಯಲ್ಲಿ ತಿಳಿಸಿದಂತೆ ನಾಗದಾನ ಮಾಡಬೇಕು. (35 ನೆಯ ಪುಟ ನೋಡಿರಿ)



## ರಾಹುದಶಾ ಗುರುಭುಕ್ತಿಯಲ್ಲಿ ಗುರು ಪ್ರೀತಿಕರ ಸ್ವರ್ಣದಾನವು

ಜನನ ಲಗ್ನ ಕುಂಡಲಿಯಲ್ಲಿ ಗುರುವು 6–8–12 ಸ್ಥಾನಗಳಲ್ಲಿದ್ದರೆ, ನೀಚರಾಶಿ ಅಥವಾ ಕ್ರೂರ ರಾಶಿಗಳಲ್ಲಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ ಮಾರಕ ಗ್ರಹ ಸಂಬಂಧವುಳ್ಳವನಾಗಿದ್ದರೆ ರಾಹುದಶಾ ಗುರುಭುಕ್ತಿಯಲ್ಲಿ ಬುದ್ಧಿ ಭ್ರಂಶವು, ಹೆಂಡತಿ ಮಕ್ಕಳಿಗೆ ಪೀಡೆಯು, ಹೃದ್ರೋಗವು, ಪಿತ್ತರೋಗವು, ಎತ್ತರವಾದ ಸ್ಥಳದಿಂದ ಬೀಳುವಿಕೆಯು, ಅಪಮೃತ್ಯುಭಯವು. ಈ ದೋಷ ಪರಿಹಾರಕ್ಕಾಗಿ ಯಾಮಳೋಕ್ತವಿಧಿಯಿಂದ ಶತರುದ್ರ ಜಪವನ್ನು ಮಾಡಿಸಿ (ಸ್ವರ್ಣ) ಬಂಗಾರ ದಾನ ಮಾಡುವದರಿಂದ ಕ್ಷೇಮವಾಗುವದು ಎಂಬುದಾಗಿ ಹೋರಾಸಾರದಲ್ಲಿ ಹೇಳಲ್ಪಟ್ಟಿದೆ. ರವಿದಶಾ ಗುರುಭುಕ್ತಿಯಲ್ಲಿ ತಿಳಿಸಿದಂತೆ ಸುವರ್ಣ ದಾನ ಮಾಡಬೇಕು. (ಪುಟ 25 ನೋಡಿರಿ)



## ರಾಹುದಶಾ ಶನಿಭುಕ್ತಿಯಲ್ಲಿ ಶನಿಪ್ರೀತಿಕರ ಛಾಗ ದಾನವು

ಜನನ ಲಗ್ನ ಕುಂಡಲಿಯಲ್ಲಿ ಶನಿಯು ನೀಚರಾಶಿಗಳಲ್ಲಿದ್ದರೆ, ಶತ್ರು ಕ್ಷೇತ್ರದಲ್ಲಿದ್ದರೆ, ಮಾರಕ ಗ್ರಹಗಳೊಡನೆ ಕೂಡಿದ್ದರೆ, 6–8–12 ಸ್ಥಾನಗಳಲ್ಲಿದ್ದರೆ, ರಾಹುದಶಾ ಶನಿಭುಕ್ತಿಯಲ್ಲಿ ಕಲಹವು, ರಾಜದ್ವೇಷವು (ಮಂತ್ರಿ, ಮಾನ್ಯರೊಡನೆ ವೈರವು) ಬಂಧುನಾಶವು, ದುಃಖವು ಆಪ್ತ ಬಂಧುಮಿತ್ರರ ಹಾನಿಯು (ಮರಣ)

ಚತುಷ್ಪಾದ ಪಶುನಾಶವು, ಕ್ಷಯ, ಪ್ರಮೇಹ, ಗುಲ್ಮರೋಗ, ಗನೋರಿಯಾ, ಗಂಡಮಾಲೆ, ಭಗಂದರ ಮೊದಲಾದ ರೋಗಬಾಧೆಯು, ಹೃದ್ರೋಗವು ಕಷ್ಟವು ಮೃತ್ಯುಭಯವು ಇತ್ಯಾದಿ ರಾಹುದಶಾ ಶನಿಭುಕ್ತಿಯಲ್ಲಿ ಉಂಟಾಗುವವು. ಈ ದೋಷ ಪರಿಹಾರಕ್ಕಾಗಿ ಛಾಗ (ಮೇಕೆ) ದಾನ ಮಾಡುವವದರಿಂದ ಶಾಂತಿಯಾಗುವದು ಎಂಬುದಾಗಿ ಜ್ಯೋತಿಷಾರ್ಣವ ಗ್ರಂಥದಲ್ಲಿ ಉಲ್ಲೇಖವಾಗಿದೆ. ರವಿದಶಾ ಶನಿಭುಕ್ತಿಯಲ್ಲಿ ಹೇಳಿರುವಂತೆ ಛಾಗ ದಾನ ಮಾಡಿರಿ. (ಪುಟ 26 ನೋಡಿರಿ)



## ರಾಹುದಶಾ ಬುಧಭುಕ್ತಿಯಲ್ಲಿ ಬುಧಪ್ರೀತಿಕರ ತ್ರಿಮೂರ್ತಿದಾನವು

ಜನನ ಲಗ್ನ ಕುಂಡಲಿಯಲ್ಲಿ ಬುಧನು ನೀಚ ಕ್ಷೇತ್ರಗಳಲ್ಲಿದ್ದರೆ ಅಸ್ತಂಗತನಾಗಿದ್ದರೆ, ಬುಧನು ರವಿ ರಾಹು, ಶನಿ, ಮಂಗಳ ಗ್ರಹಗಳೊಡನೆ ಕೂಡಿದ್ದರೆ, ದುಷ್ಟರಾಶಿಗಳಲ್ಲಿದ್ದರೆ ರಾಹುದಶಾ ಬುಧಭುಕ್ತಿಯಲ್ಲಿ ಅಕಾಲ ಮೃತ್ಯುಭಯವು ಹಿಂಸೆಗೊಳಗಾಗುವಿಕೆಯು, ದಾರಿದ್ರ್ಯವು, ಪೀಡೆಯು. ಈ ದೋಷ ಪರಿಹಾರಕ್ಕಾಗಿ ವಿಷ್ಣು ಸಹಸ್ರ ನಾಮಗಳನ್ನು ಜಪಿಸಬೇಕು ಮತ್ತು ಸಾಲಿಗ್ರಾಮದಾನ ತುಳಸೀ ಪದ್ಮ ಮಹಾ ಪೂಜೆಯನ್ನು ಸಾಲಂಕಾರ ದಾನವನ್ನು ತ್ರಿಮೂರ್ತಿ ದಾನಮಾಡುವವದರಿಂದ ದೋಷ ಪರಿಹಾರವಾಗುವದು ಎಂಬುದಾಗಿ ಮತ್ಸ್ಯ ಪುರಾಣದಲ್ಲಿ ಉಕ್ತವಾಗಿದೆ.

ತ್ರಿಮೂರ್ತಿದಾನ:

ಸಾಲಿಗ್ರಾಮ ಮಹಿಮೆ :- ಸಾಲಿಗ್ರಾಮ ಶಿಲೆಯು ಯಾವ ದೇಶದಲ್ಲಿರುವದೋ ಆ ದೇಶದಲ್ಲಿ ವಾಸಿಸುವ ಪ್ರಜೆಗಳಿಗೆ ಪಾಪಲೇಶವುಂಟಾಗುವದಿಲ್ಲ. ಯಾವನ ದೇಹದ ಮೇಲೆ ಸಾಲಿಗ್ರಾಮ ತೊಳೆದ ಜಲವು ಬೀಳುವದೋ ಆ ಮಾನವನು ಶ್ರೇಷ್ಠ ಮನುಷ್ಯನು ಅಥವಾ ರಾಜನಾಗುವನು ಮತ್ತು ಅವನಿಗೆ ಗೋವಧೆಯ ಪಾಪ, ಬ್ರಹ್ಮಹತ್ಯಾದೋಷ, ಭ್ರೂಣ (ಕೂಸು) ಹತ್ಯಾ ದೋಷ, ಗುರುಪತ್ನಿಯ ಅಪಹರಣ, ಆಕಳ ಅಪಹರಣ ಇತ್ಯಾದಿ ಸರ್ವಪಾಪಗಳಿಂದ ಅವನು ಮುಕ್ತನಾಗಿ ಯೋಗಿಗಳಿಗೆ ದುರ್ಲಭವಾದ ಜನನ–ಮರಣ ಈ ಪುನರಾವೃತ್ತಿ ರಹಿತವಾದ ವಿಷ್ಣು ಲೋಕದಲ್ಲಿ ಅನಂತ ಕಾಲದವರೆಗೆ ವಾಸಿಸುವನು. ಸಾಲಿಗ್ರಾಮ ಇರುವಂಥವರ ಮನೆಯು ಸಾಕ್ಷಾತ್ ವೈಕುಂಠವೆಂದು ಮುನಿಗಳು ಹೇಳುತ್ತಾರೆ. ಸಾಲಿಗ್ರಾಮ ಶಿಲೆಯು, ತುಳಸಿಯು, ಕಮಲದ ಸಮೂಹವು ಇರುವಂಥ ಸ್ಥಳದಲ್ಲಿ ಶ್ರೀ ವಿಷ್ಣುವು ವಾಸಮಾಡಿಕೊಂಡಿರುತ್ತಾನೆ. ಸಾಲಿಗ್ರಾಮ ಶಿಲೆಯು ಮತ್ತು ವಿಷ್ಣುಚಕ್ರವು ಇರುವಲ್ಲಿ ಸಮಸ್ತ ನದಿಗಳು ಇರುತ್ತವೆ. ಆದ್ದರಿಂದ ಸಾಲಿಗ್ರಾಮ ಶಿಲೆಯನ್ನು ದಾನಮಾಡಬೇಕು.

ದ್ವಿತಿಯಾ ದ್ವಾದಶಿ ತಿಥಿಗಳು, ಸಂಕ್ರಮಣ, ಗ್ರಹಣ ಈ ಪುಣ್ಯಕಾಲಗಳಲ್ಲಿ ನದೀ ತೀರದಲ್ಲಿ ಅಥವಾ ಮನೆಯಲ್ಲಿ ಇಲ್ಲವೆ ಯಾವದಾದರೊಂದು ಆಹ್ಲಾದಕರ ಸ್ಥಳವನ್ನು

ಗೋಮಯದಿಂದ ಸಾರಿಸಿ ಅಲ್ಲಿ ಐದು ಪ್ರಕಾರದ ಬಣ್ಣಗಳಿಂದ ಕಮಲವನ್ನು ಬರೆದು ಅದರ ಮೇಲೆ ತಾಮ್ರದ ಸಿಂಹಾಸನವನ್ನು ಇಟ್ಟು ಮೇಲೆ ರೇಶಿಮೆಯ ವಸ್ತ್ರವನ್ನು ಹಾಸಿ ಅದರ ಮೇಲೆ ಮತ್ಸ್ಯ, ಕೂರ್ಮ ಕೇಶವ ಮೂರ್ತಿಗಳನ್ನು ಇರಿಸಿ (ಆ ಮೂರ್ತಿಗಳಲ್ಲಿ ಚಕ್ರಶುದ್ಧಿ, ಶಿಲಾಶುದ್ಧಿ ವರ್ಣಶುದ್ಧಿಗಳನ್ನು ಪರೀಕ್ಷಿಸಬೇಕು.) ಅವುಗಳನ್ನು ಷೋಡಶೋಪಚಾರಗಳಿಂದ ಪೂಜಿಸಿ 108 ಶ್ರೀರಾಮ ನಾಮಗಳನ್ನು 108 ನೃಸಿಂಹ ನಾಮಗಳು, 108 ಕೃಷ್ಣನಾಮಗಳನ್ನು ಪಠಣಮಾಡಿ ಧೂಪ, ದೀಪ, ನೈವೇದ್ಯಾದಿಗಳನ್ನು ಸಮರ್ಪಿಸಿ ಸುಶೀಲನೂ, ಶ್ರೋತ್ರಿಯನೂ ಆದ ಬ್ರಾಹ್ಮಣನಿಗೆ ತನ್ನ ಶಕ್ತ್ಯಾನುಸಾರ ದಕ್ಷಿಣೆಯೊಡನೆ ಆ ಮೂರ್ತಿಗಳನ್ನೂ, ಸಾಲಿಗ್ರಾಮವನ್ನೂ, ತುಳಸಿ, ಪದ್ಮ (ಕಮಲ)ಗಳನ್ನೂ ದಾನಮಾಡುವದರಿಂದ ಅತಿ ಪಾಪ, ಅನುಪಾಪ, ಉಪಪಾತಕ ಸಂಕರಣ, ಮಲೀನೀಕರಣ, ಅಪಾತ್ರೀಕರಣ, ಜಾತಿಭ್ರಂಶ, ಮೊದಲಾದವುಗಳೆಲ್ಲ ನಿವಾರಣೆಯಾಗಿ ಶುದ್ಧ ಸ್ಫಟಿಕದಂತೆ ಪರಿಶುದ್ಧನಾಗಿ ಪುತ್ರಪೌತ್ರರೊಡನೆ ಸಮಸ್ತ ಭೋಗಗಳನ್ನು ಭೋಗಿಸಿ ದೇಹಾಂತ್ಯಕಾಲದಲ್ಲಿ ದಿವ್ಯವಾದ ವಿಮಾನವನ್ನು ಆರೋಹಣ ಮಾಡಿಕೊಂಡು ಸೂರ್ಯ ಸನ್ನಿಧಾನವನ್ನು ಸೇರಿ ದಿವ್ಯ ಮಾಲೆಗಳನ್ನೂ, ಗಂಧಾದಿ ಸುಗಂಧ ಪರಿಮಳ ದ್ರವ್ಯಗಳನ್ನೂ ಧರಿಸಿಕೊಂಡು ದಿವ್ಯನಾರೀಗಣದೊಂದಿಗೆ ಛತ್ರ, ಚಾಮರ, ಬೀಸಣಿಕೆ ಮೊದಲಾದವುಗಳಿಂದ ಸೇವಿಸಲ್ಪಟ್ಟವನಾಗಿ ದೇವತೆಗಳು, ಗಂಧರ್ವರು, ಸಿದ್ಧಪುರುಷರೊಡನೆ ಕೂಡಿಕೊಂಡು ಯಥೇಚ್ಛವಾದ ಸುಖಭೋಗಗಳನ್ನು ಭೋಗಿಸುತ್ತ ವಿಷ್ಣು ಲೋಕದಲ್ಲಿ ಚಿರಕಾಲದವರೆಗೆ ವಾಸಮಾಡಿಕೊಂಡಿರುವನು. ನಂತರ ಕರ್ಮ ಕ್ಷಯವಾದ ಬಳಿಕ ರೂಪ, ಸೌಭಾಗ್ಯ ಸಹಿತನಾಗಿ ಸಪ್ತದ್ವೀಪಾಧಿಕಾರಿಯಾಗಿರುವನು.



## ರಾಹುದಶಾ ಕೇತುಭುಕ್ತಿಯಲ್ಲಿ ಕೇತುಪ್ರೀತಿಕರ ನಾಗದಾನವು

ಜನನ ಲಗ್ನ ಕುಂಡಲಿಯಲ್ಲಿ ಕೇತುವು ದುಷ್ಟಸ್ಥಾನಗಳಲ್ಲಿದ್ದರೆ ಮಾರಕ ಗ್ರಹಗಳೊಡನೆ ಕೂಡಿದ್ದರೆ ರಾಹುದಶಾ ಕೇತುಭುಕ್ತಿಯಲ್ಲಿ ರಾಜದ್ರೋಹವು ವಾತಜ್ವರಾದಿ ರೋಗ ಪೀಡೆಯು, ಹೆಂಡತಿ ಮಕ್ಕಳಿಗೆ ಉಪದ್ರವವು, ಸ್ಥಾನ ಬಿಟ್ಟು ತಿರುಗಾಡುವಿಕೆಯು. ಈ ದೋಷ ಪರಿಹಾರಕ್ಕಾಗಿ ಚಂದ್ರದಶಾ ಕುಜಭುಕ್ತಿಯಲ್ಲಿ ತಿಳಿಸಿರುವಂತೆ (ಪುಟ 35 ನೋಡಿರಿ) ಯಾಮಳೋಕ್ತ ವಿಧಾನದಿಂದ ನಾಗದಾನ ಮಾಡಿದರೆ ಕ್ಷೇಮವೂ, ಆರೋಗ್ಯವೂ ಉಂಟಾಗುವವು.

## ರಾಹುದಶಾ ಶುಕ್ರಭುಕ್ತಿಯಲ್ಲಿ ಶುಕ್ರಪ್ರೀತಿಕರ ದುರ್ಗಾ ದಾನವು

ಜನನ ಲಗ್ನ ಕುಂಡಲಿಯಲ್ಲಿ ಶುಕ್ರನು 6–8–12 ಸ್ಥಾನಗಳಲ್ಲಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, ನೀಚಕ್ಷೇತ್ರ ಅಥವಾ ರಿಪುಕ್ಷೇತ್ರಗಳಲ್ಲಿದ್ದರೆ ರಾಹುದಶಾ ಶುಕ್ರಭುಕ್ತಿಯಲ್ಲಿ ಕುಕ್ಷಿಬಾಧೆಯು, ಶಿರೋರೋಗವು, ಮನೋವ್ಯಥೆಯು ಇತ್ಯಾದಿ ದೋಷ ಪರಿಹಾರಕ್ಕಾಗಿ ಚಂದ್ರದಶಾ ಗುರುಭುಕ್ತಿಯಲ್ಲಿ ಹೇಳಿರುವಂತೆ (ಪುಟ 39 ನೋಡಿರಿ) ದುರ್ಗಾದೇವಿಯ ಪ್ರತಿಮೆಯನ್ನು ಮಾಡಿಸಿ ಪೂಜಿಸಿ ದುರ್ಗಾಜಪ ಮಾಡಿಸಿ ದಾನ ಮಾಡುವದರಿಂದ ರೋಗಶಾಂತಿಯಾಗುವದು ಮತ್ತು ಆರೋಗ್ಯ, ಆಯುಷ್ಯಗಳು ವೃದ್ಧಿಯಾಗುವವು.



## ರಾಹುದಶಾ ರವಿಭುಕ್ತಿಯಲ್ಲಿ ರವಿಪ್ರೀತಿಕರ ತಿಲಪದ್ಮ ದಾನವು

ಜನನ ಲಗ್ನಕುಂಡಲಿಯಲ್ಲಿ ರವಿಯು ವ್ಯಯ ಸ್ಥಾನದಲ್ಲಿದ್ದರೆ, ನೀಚರಾಶಿಗಳಲ್ಲಿದ್ದರೆ, 3–6–11ನೆಯ ಸ್ಥಾನಾಧಿಪತಿಗಳೊಡನೆ ಅಥವಾ ಮಾರಕ ಗ್ರಹಗಳೊಡನೆ ಕೂಡಿದ್ದರೆ ರಾಹುದಶಾ ರವಿಭುಕ್ತಿಯಲ್ಲಿ ಧನಹಾನಿಯು, ಪಿತೃಹಾನಿಯು, ಪಶು ಹಾನಿಯು, ಶರೀರದಲ್ಲಿ ರೋಗಪೀಡೆಯು, ಆಪ್ತಬಂಧು, ಮಿತ್ರರ ಮರಣವು. ಈ ದೋಷ ಪರಿಹಾರಕ್ಕಾಗಿ ತಿಲ, ಪದ್ಮದಾನವನ್ನು ಮಾಡಬೇಕು. ಅದು ಹೇಗೆಂದರೆ – ಗ್ರಹಣ ಮೊದಲಾದ ಪುಣ್ಯ ಕಾಲಗಳಲ್ಲಿ ಸ್ವಗೃಹದೊಳು ಗೋಮಯದಿಂದ ಸಾರಿಸಿದ ಶುದ್ಧಭೂಮಿಯನ್ನು ರಂಗವಲ್ಯಾದಿಗಳಿಂದ ಅಲಂಕರಿಸಿ ಅಲ್ಲಿ ದ್ರೋಣ ಪ್ರಮಾಣದಷ್ಟು ಎಳ್ಳಿನ ಗುಂಪೆಯನ್ನು ರಚಿಸಿ ಅದರ ಮೇಲೆ ಅಷ್ಟದಳ ಕಮಲವನ್ನು ಬರೆದು ಅದರ ಮೇಲೆ ಎಳ್ಳು ತುಂಬಿದ ತಾಮ್ರದ ಪಾತ್ರೆಯನ್ನು ಇಟ್ಟು ಅದರ ಮೇಲೆ ಒಂದು ಫಲ ಅಥವಾ ಒಂದು ತೊಲೆ ಇಲ್ಲವೆ ಶಕ್ತ್ಯಾನುಸಾರ ಬಂಗಾರದಿಂದ ಮಾಡಿಸಿದ ಅಷ್ಟ (ಎಂಟು) ದಳ ಕಮಲವನ್ನು ಇಟ್ಟು ಅದನ್ನು ಎರಡು ಕೆಂಪು ವಸ್ತ್ರಗಳಿಂದ ಹೊದಿಸಿ ಯಜಮಾನನು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ ಸಂಕಲ್ಪ ಮಾಡಬೇಕು– ''ಮಮ ಇಹಜನ್ಮನಿ ಜನ್ಮಾಂತರೇಷು ಸಂಭಾವಿತಾನಾಂ । ಗುರುಭಾರ್ಯಾಗಮನ, ಪಶುಯೋನಿ ರೇತೋ ವಿಸರ್ಜನ, ಗುರುಸಮರ್ಪಿತ ದ್ರವ್ಯ ಹರಣಾದೀನಾಂ। ಮೂತ್ರ ಕೃಚ್ಛ್ರನಿದಾನ ಭೂತಾನಾಂ ಸರ್ವೇಷಾಂ ಪಾಪಾನಾಂ । ನಿವೃತ್ತಿ ದ್ವಾರಾ ಶರೀರೇ ವರ್ತಮಾನ ನಾನಾರೋಗ ನಿವೃತ್ತ್ಯರ್ಥಂ

ದೃಢಕಾಯ ತಯಾ । ಶತವರ್ಷ ಜೀವಿತ್ವ ಸಿದ್ಧ್ಯರ್ಥಂ ಸಕಲಾಭೀಷ್ಟ ಪ್ರದಾಯಕ ಶ್ರೀ ಸೂರ್ಯನಾರಾಯಣ ಪ್ರೀತ್ಯರ್ಥಂ। ಬೋಧಾಯನೋಕ್ತ ಪ್ರಕಾರೇಣ ತಿಲಪದ್ಮದಾನಂ ಕರಿಷ್ಯೇ ತದಾದೌ ಮಹಾಗಣಪತಿ ಪೂಜಾಂ ಕರಿಷ್ಯೇ'' ಎಂಬುದಾಗಿ ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಿದ ನಂತರ ಆ ಸುವರ್ಣ ಪದ್ಮ (ಕಮಲ)ದಲ್ಲಿ ಸೂರ್ಯನನ್ನು ಆವಾಹನೆ ಮಾಡಬೇಕು.

ಧ್ಯಾನಂ- ವೇದೀ ಮಧ್ಯೇ ಲಲಿತ ಕಮಲೇ ಕರ್ಣಿಕಾಯಾಂ ರಥಸ್ಥಃ।
ಸಪ್ತಾಶ್ವಾ ಕೋರ್ಣಃಅರುಣರುಚಿ ವಪುಃ ಸಪ್ತರಜ್ಜುರ್ದ್ವಿ ಬಾಹುಃ॥
ಗೋತ್ರೇರಮ್ಯೇ ಬಹುವಿಧ ಗುಣೇಕಾಶ್ಯಪಾಖ್ಯೇ ಪ್ರಸೂತಃ।
ಕಾಳಿಂಗಾಖ್ಯೇ ವಿಷಯ ಜನಿತಃ ಪ್ರಾಙ್ಮುಖಃ ಪದ್ಮಹಸ್ತಃ॥
ಪದ್ಮಾಸನಃ ಪದ್ಮಕರೋದ್ವಿಬಾಹುಃ ಪದ್ಮದ್ಯುತಿಃ ಸಪ್ತತುರಂಗ ಬಾಹು ಃ।
ದಿವಾಕರೋ ಲೋಕಗುರುಃ ಕಿರೀಟಿಮಯಿಪ್ರಸಾದಂ ವಿದಧಾತುದೇವಃ॥

ಆಸತ್ಯೇನ ರಜಸಾವರ್ತಮಾನೋನಿವೇಶಯನ್ನಮೃತಂ ಮರ್ತ್ಯಂಚ।
ಹಿರಣ್ಯಯೇನ ಸವಿತಾ ರಥೇನಾದೇವೋಯಾತಿ ಭುವನಾನಿ ಪಶ್ಯನ್॥

ಎಂದು ಸೂರ್ಯದೇವನನ್ನು ಧ್ಯಾನಿಸಿ ನಂತರ,

ಓಂ ಭೂಃ ಸೂರ್ಯದೇವ ಮಾವಾಹಯಾಮಿ। ಓಂ ಭುವಃ ಸೂರ್ಯ ದೇವ ಮಾವಾಹಯಾಮಿ। ಓಂ ಸುವಃ ಸೂರ್ಯದೇವ ಮಾವಾಹಯಾಮಿ। ಓಂ ಭೂರ್ಭುವಃ ಸ್ವಃ ಸೂರ್ಯದೇವ ಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಓಂ ಭೂರ್ಭುವಃ ಸ್ವರೋಂ ಸಶಕ್ತಿಸಾಂಗ ಸಾಯುಧ ಸವಾಹನ, ಸಪರಿವಾರ ಓಂ ಸೂರ್ಯದೇವ ಅತ್ರಾಗಚ್ಛಾಗಚ್ಛ। ಆವಾಹಯಾಮಿ ಆವಾಹಿತೋಭವ। ಸ್ಥಾಪಯಾಮಿ ಸ್ಥಾಪಿತೋಭವ। ಸಮ್ಮುಖೋಭವ। ಅವಕುಂಠಿತೋಭವ। ವರದೋಭವ॥

ಎಂದು ಷಣ್ಮುದ್ರೆಗಳನ್ನು ತೋರಿಸಿ.

"ಓಂ ಸೂರ್ಯಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ'' ಎಂದು ನಮಸ್ಕರಿಸಿ, 'ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ' ಎಂದು ಆಸನವನ್ನು ಮುಟ್ಟಿ 'ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ ''ಹಸ್ತಯೋಃ ಅರ್ಘ್ಯ ಮರ್ಘ್ಯಂ ಸಮರ್ಪಯಾಮಿ'' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ 'ಮುಖೇ ಆಚಮನೀಯಂ ಸಮರ್ಪಯಾಮಿ' ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಿ 'ಓಂ ಸೂರ್ಯಾಯ ನಮಃ' ಈ ಮಂತ್ರದಿಂದ ಕೆಂಪು

ಗಂಧ, ಕೆಂಪು ಅಕ್ಷತೆ, ಎಕ್ಕೆ ಹೂ, ಧೂಪ, ದೀಪಾದಿ ಷೋಡಶೋಪಚಾರ ಪೂಜೆಯನ್ನು ಮಾಡಿ ಪರಮಾನ್ನದ ನೈವೇದ್ಯವನ್ನು ಸಮರ್ಪಿಸಿದ ನಂತರ ಪೂಜಾ ಸಮಾಪ್ತಿಗೊಳಿಸಬೇಕು. ಬಳಿಕ ಓರ್ವ ಬ್ರಾಹ್ಮಣ (ಜಂಗಮಮೂರ್ತಿ) ನನ್ನು ವಸ್ತ್ರ, ಪುಷ್ಪಹಾರಾದಿಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ತಿಲ, ಪದ್ಮದಾನವನ್ನು ಮಾಡಬೇಕು.

ಮಂತ್ರ- ಖಗಃ ಪೂಷಾ ಪತಂಗೋರ್ಕಃ ದ್ವಾದಶಾತ್ಮಾತ್ರಯೀತನುಃ।
ಪದ್ಮೇನಾನೇನ ದತ್ತೇನ ಪ್ರೀತ ಸ್ತರಣಿ ರಸ್ತುಮೇ॥
ಅಸ್ಮೈ ಬ್ರಾಹ್ಮಣಾಯ ಶ್ರೀ ಸೂರ್ಯನಾರಾಯಣ ಸ್ವರೂಪಾಯ ಶ್ರೀ ಸೂರ್ಯ ನಾರಾಯಣ ಪ್ರೀತ್ಯರ್ಥಂ- ಭೂಭಾಗೋಪರಿ ಗೋಮಯಾನು ಲೇಪಿತ ರಂಗವಲ್ಯಾದಿ ರಚಿತ ದ್ರೋಣ ಪರಿಮಿತ ತಿಲನಿರ್ಮಿತಂ।
ತಿಲಪೂರಿತ ತಾಮ್ರಪಾತ್ರೋ ಪರಿಸ್ಥಿತ ಪಲಪರಿಮಾಣ ಸ್ವರ್ಣನಿರ್ಮಿತ ವಸ್ತ್ರವೇಷ್ಟಿತ ಸ್ವರ್ಚಿತಂ ಪದ್ಮಾಧಿಷ್ಠಿತಂ ಸರ್ವಲಕ್ಷಣ ಲಕ್ಷಿತಂ।
ಸ್ವರ್ಚಿತಂ ತಿಲಪದ್ಮಂ ಪೂರ್ವೋಕ್ತಫಲ ಕಾಮಯಮಾನ ಇತಿ॥

ಈ ಪ್ರಕಾರ ತಾಂಬೂಲ ಶಕ್ತ್ಯಾನುಸಾರ ದಕ್ಷಿಣೆ ಸಹಿತ ದಾನ ಮಾಡಬೇಕು ಮತ್ತು ಅವರಿಂದ ಶುಭಾಶೀರ್ವಾದ ಪಡೆಯಬೇಕು ಎಂಬುದಾಗಿ ಹೇಮಾದ್ರಿಯಲ್ಲಿ ಉಕ್ತವಾಗಿದೆ.



## ರಾಹುದಶಾ ಚಂದ್ರಭುಕ್ತಿಯಲ್ಲಿ ಚಂದ್ರಪ್ರೀತಿಕರ ವಹ್ನಿ (ಅಗ್ನಿ) ದಾನವು

ಜನನ ಲಗ್ನ ಕುಂಡಲಿಯಲ್ಲಿ ಚಂದ್ರನು ನೀಚ ರಾಶಿಗಳಲ್ಲಿದ್ದರೆ 6–8–12 ಸ್ಥಾನಗಳಲ್ಲಿದ್ದರೆ, ಕ್ರೂರ ಗ್ರಹಗಳೊಡನೆ ಅಥವಾ ಮಾರಕ ಗ್ರಹಗಳೊಡನೆ ಕೂಡಿದ್ದರೆ ರಾಹುದಶಾ ಚಂದ್ರಭುಕ್ತಿಯಲ್ಲಿ ಕ್ಷಯ, ಕಾಲರಾ, ಅತಿಸಾರಾದಿ ರೋಗಪೀಡೆ ಯುಂಟಾಗುವದು. ಈ ದೋಷ ಪರಿಹಾರಕ್ಕಾಗಿ ವಹ್ನಿ (ಅಗ್ನಿ) ದಾನವನ್ನು ಮಾಡಬೇಕು ಎಂಬುದಾಗಿ ಹೇಮಾದ್ರಿ ಗ್ರಂಥದಲ್ಲಿ ಉಲ್ಲೇಖವಾಗಿದೆ ಮತ್ತು ಈ ದಾನವನ್ನು ಕರ್ಕ ಹಾಗೂ ಮಕರ ಸಂಕ್ರಮಣ ಪುಣ್ಯ ಕಾಲಗಳಲ್ಲಿ ಅಥವಾ ಉಪದ್ರವ ಕಾಲದಲ್ಲಿ ಮಾಡತಕ್ಕದ್ದು

ವಹ್ನಿ ಮೂರ್ತಿ ರಚನಾ- ದೇವಾಲಯ ಮೊದಲಾದ ಪವಿತ್ರ ಸ್ಥಳವನ್ನು ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿ ಅಲ್ಲಿ ಕೆಂಪು ವಸ್ತ್ರವನ್ನು ಹರವಿ ಅದರ ಮೇಲೆ ಅಗ್ನಿಯ ಪ್ರತಿಮೆಯನ್ನು ಇಟ್ಟು ಪ್ರತಿಮೆಗೆ ಕೆಂಪು ವಸ್ತ್ರವನ್ನು ಹೊದಿಸಿ ದಾನ ಸಂಕಲ್ಪ ಮಾಡಬೇಕು. (ಪ್ರತಿಮೆಯು ಒಂದುಪಲ ಅಥವಾ ಅರ್ಧಪಲ

ಅಥವಾ ಯಜಮಾನನ ಶಕ್ತ್ಯಾನುಸಾರ ಬಂಗಾರದಿಂದ ನಿರ್ಮಿಸಲ್ಪಟ್ಟಿರಬೇಕು.)

ಯಜಮಾನನು ನಿತ್ಯಕ್ರಿಯೆಗಳನ್ನು ತೀರಿಸಿಕೊಂಡು ಸ್ನಾನ, ಶಿವಾರ್ಚನಾದಿಗಳನ್ನು ಪೂರೈಸಿ ಭದ್ರಾಸನದ ಮೇಲೆ ಕುಳಿತುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ ಸಂಕಲ್ಪ ಮಾಡಬೇಕು. ದೇಶಕಾಲಾದಿಗಳನ್ನು ಉಚ್ಚರಿಸಿ "ಮಮ ಇಹಜನ್ಮನಿ ಪೂರ್ವಜನ್ಮನಿ ಸಂಭವಿತಾನಾಂ ಸ್ಮಾರ್ತಾಗ್ನಿ ನಿರ್ವಾಪತ್ರೇತಾಗ್ನಿ ನಿರ್ವಾಪಾದೀನಾಂ ಕ್ಷಯ ಅತಿಸಾರಾದಿ ರೋಗನಿದಾನ ಭೂತಾನಾಂ ಪಾಪಾನಾಂ ನಿವೃತ್ತಿದ್ವಾರಾ ಮಮಶರೀರೇ ವರ್ತಮಾನ ಕ್ಷಯ, ಅತಿಸಾರ ರೋಗ ನಿವಾರಣಾರ್ಥಂ ಸರ್ವ ಮಂಗಳಾವಾಪ್ತ್ಯರ್ಥಂ ಶ್ರೀ ವಹ್ನಿ ಪ್ರೀತ್ಯರ್ಥಂ ಬೋಧಾಯನೋಕ್ತ ಪ್ರಕಾರೇಣ ವಹ್ನಿ ಮೂರ್ತಿ ದಾನಂ ಕರಿಷ್ಯೇ ತದಾದೌ ಶ್ರೀ ಮಹಾಗಣಪತಿ ಪೂಜಾಂ ಕರಿಷ್ಯೇ" ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಬೇಕು. ಬಳಿಕ ವಹ್ನಿ ಪೂಜಾ ಮಾಡಬೇಕು.

ವಹ್ನಿಪೂಜಾ-ಧ್ಯಾನಂ- ಜ್ವಾಲಾ ಜ್ವಾಲಾ ಕುಲಾಂ ರಕ್ತ ಚಂದನೇನ ವಿಭೂಷಿತಾಂ।
ರಕ್ತೇನ ವಾಸಸಾಚ್ಛನ್ನಾಂ ಮೇಷ ಸ್ಕೋಪರಿ ಸಂಸ್ಥಿತಾಂ॥
ಪಿಂಗಭ್ರೂಶ್ಮಶೃಕೇಶಾಢ್ಯಾಂ ಪಿಂಗಾಕ್ಷತ್ರಿತಯಾನ್ವಿತಾಂ।
ಚತುರ್ಭುಜಾಂ ಶಕ್ತಿವರ ಸೃವಾಭಯ ಧರಾಂಶಿವಾಂ॥
ರಕ್ತಮಾಲ್ಯೇನ ಸಂವೀತಾಂ ಮುಕ್ತಾದಾಮ ಪರಿಷ್ಕೃತಾಂ।
ಕನಕಾಚಲ ವರ್ಣಾಭಾಂ ದ್ವಾದಶಾರ್ಕ ಪ್ರಭಾನಿಭಾಂ॥
ವಹ್ನಿ ಮೂರ್ತಿಂ ಚಿಂತಯಾಮಿ ಸರ್ವಸಂಪತ್ ಪ್ರದಾಯಿನೀಂ।

ಅಗ್ನಿರ್ಮೂರ್ಧಾ ದಿವಃ ಕಕುತ್ಪತಿಃ ಪೃಥಿವ್ಯಾ ಅಯಂ।
ಅಪಾಗ್ಂ ರೇತಾಗ್ಂ ಸಿಜಿನ್ವತಿ॥

ಎಂದು ಅಗ್ನಿ ದೇವನನ್ನು ಧ್ಯಾನಿಸಿ ನಂತರ,

ಓಂ ಭೂಃ ಅಗ್ನಿದೇವ ಮಾವಾಹಯಾಮಿ । ಓಂ ಭವಃ ಅಗ್ನಿದೇವ ಮಾವಾಹಯಾಮಿ । ಓಂ ಸುವಃ ಅಗ್ನಿದೇವ ಮಾವಾಹಯಾಮಿ । ಓಂ ಭೂಭುವಃ ಸ್ವಃ ಅಗ್ನಿದೇವ ಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಓಂ ಭೂರ್ಭುವಃ ಸ್ವರೋಂ ಸಶಕ್ತಿ ಸಾಂಗ ಸಾಯುಧ ಸವಾಹನ ಸಪರಿವಾರ ಓಂ ಅಗ್ನಿದೇವ ಅತ್ರಾಗಚ್ಛಾಗಚ್ಛ। ಆವಾಹಯಾಮಿ, ಆವಾಹಿತೋಭವ । ಸ್ಥಾಪಯಾಮಿ, ಸ್ಥಾಪಿತೋಭವ। ಸನ್ನಿಹಿತೋಭವ। ಸಮ್ಮುಖೋಭವ। ಅವಕುಂಠಿತೋಭವ। ವರದೋಭವ॥

ಎಂದು ಷಣ್ಮುದ್ರೆಗಳನ್ನು ತೋರಿಸಿ.

"ಓಂ ಅಗ್ನಿಯೇ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ" ಎಂದು

ನಮಸ್ಕರಿಸಿ ''ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ'' ಎಂದು ಆಸನವನ್ನು ಮುಟ್ಟಿ 'ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ'' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ ''ಹಸ್ತಯೋಃ ಅರ್ಘ್ಯಮರ್ಘ್ಯಂಸಮರ್ಪಯಾಮಿ'' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ ''ಮುಖೇ ಆಚಮನೀಯಂ ಸಮರ್ಪಯಾಮಿ'' ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಿ.

''ಓಂ ಅಗ್ನಯೇ ನಮಃ'' ಈ ಮಂತ್ರದಿಂದ ಕೆಂಪು ಗಂಧ, ಕೆಂಪು ಅಕ್ಷತೆ, ಕೆಂಪು ಕಣಗಿಲ ಹೂ, ಧೂಪ, ದೀಪ ಮೊದಲಾದವುಗಳಿಂದ ಷೋಡಶೋಪಚಾರ ಪೂಜೆಯನ್ನು ಮಾಡಿ ಪೂಜಾ ಸಮಾಪ್ತಿ ಮಾಡಬೇಕು.

ನಂತರ ವೇದ ವಿದ್ಯಾವಿಶಾರದನೂ, ಸುಶೀಲನೂ ಆದ ಬ್ರಾಹ್ಮಣನನ್ನು ಅಥವಾ ಜಂಗಮಮೂರ್ತಿಯನ್ನು ವಸ್ತ್ರ, ಪುಷ್ಪಮಾಲಾ, ಕರ್ಣಾಭರಣಗಳಿಂದ ಪೂಜಿಸಿ ಮೂರ್ತಿಯನ್ನು ತನ್ನ ಶಕ್ತ್ಯಾನುಸಾರ ದಕ್ಷಿಣೆ, ತಾಂಬೂಲ ಸಹಿತವಾಗಿ ದಾನ ಮಾಡಬೇಕು.

ದಾನಮಂತ್ರ- ತ್ರೇತಾರೂಪೋಽಗ್ನಿ ವರ್ಣಸ್ತ್ವ ಮಂತ್ರಶ್ಚರಸಿ ವೈನೃಣಾಂ।
ತ್ವಮೇತ್ಥ ಪಾಪಸಂ ಘಾತಂ ರೋಗಾದೀನ್ ಚವಿನಾಶಯ॥
ಅಸ್ಮೈ ಅಹಂ ಇಮಾಂ ಭೂಭಾಗೋಪರಿ ಪ್ರಸಾರಿತ ರಕ್ತವಸ್ತ್ರೋಪರಿ ಸ್ಥಿತ ಸ್ವರ್ಣ ನಿರ್ಮಿತಾಂ। ಸರ್ವಲಕ್ಷಣ ಲಕ್ಷಿತಾಂ ಸ್ವರ್ಣಚಿಂತಾಂ ವಹ್ನಿ ಪ್ರತಿಮಾಂ ಮಮಪೂರ್ವೋಕ್ತ ಫಲಕಾಮ ಸ್ತುಭ್ಯಂ ಸಂಪ್ರದದೇ ನಮಮ ನಮಮ ಇತಿ

ಈ ಮಂತ್ರವನ್ನು ಉಚ್ಚರಿಸಿ ದಾನಕೊಟ್ಟು ಅವರ ಆಶೀರ್ವಾದ ಪಡೆಯಬೇಕು.



## ರಾಹುದಶಾ ಕುಜಭುಕ್ತಿಯಲ್ಲಿ ಕುಜಪ್ರೀತಿಕರ ನಾಗದಾನವು

ಜನನ ಲಗ್ನ ಕುಂಡಲಿಯಲ್ಲಿ ಕುಜನು ನೀಚ ರಾಶಿಗಳಲ್ಲಿ ಅಥವಾ ಶತ್ರು ಗ್ರಹಗಳ ರಾಶಿಗಳಲ್ಲಿದ್ದರೆ, ಪಾಪಗ್ರಹಗಳೊಡನೆ ಅಥವಾ ಮಾರಕ ಗ್ರಹಗಳೊಡನೆ ಕೂಡಿದ್ದರೆ 6–8–12 ಸ್ಥಾನಗಳಲ್ಲಿದ್ದರೆ ರಾಹುದಶಾ ಕುಜಭುಕ್ತಿಯಲ್ಲಿ ರಾಜದ್ವೇಷವು, ಅಧಿಕ ಭಯವು, ಚೋರ, ಅಗ್ನಿಭಯವು ವ್ರಣ, ಸ್ಫೋಟಕಾದಿಗಳು, ಜ್ವರ ಪೀಡೆಯು. ಈ ದೋಷಪರಿಹಾರಕ್ಕಾಗಿ ಸುಬ್ರಹ್ಮಣ್ಯ ಪೂಜೆಯನ್ನು ಮಾಡಿ ನಾಗದಾನವನ್ನು ಮಾಡುವದರಿಂದ ಸರ್ವ ಅನಿಷ್ಟಗಳು ದೂರಾಗಿ ಕ್ಷೇಮವಾಗುವದು. ಚಂದ್ರದಶಾ ಕುಜಭುಕ್ತಿಯಲ್ಲಿ ಹೇಳಿರುವಂತೆ ನಾಗದಾನವನ್ನು ಮಾಡಬೇಕು (ಪುಟ 35 ನೋಡಿರಿ)

## ಗುರುದಶೆಯಲ್ಲಿ ಗುರು ಪ್ರೀತಿಕರ ಸ್ವರ್ಣಪದ್ಮ ದಾನವು

ಜನನ ಲಗ್ನ ಕುಂಡಲಿಯಲ್ಲಿ ಗುರುವು ದುಷ್ಟ ಸ್ಥಾನಗಳಲ್ಲಿ ಇದ್ದುದಾದರೆ ಗುರುದಶೆಯಲ್ಲಿ ನಾನಾ ರೀತಿಯ ಆಪತ್ತುಗಳು. ರಾಜರಿಂದಲೂ, ಮಂತ್ರಿಗಳಿಂದಲೂ ಭಯವು, ಮೃತ್ಯುಭಯವು, ಶತ್ರುಗಳ ಭಯವು, ಬಲಿಷ್ಠ ಜನರಿಂದ ವೈರವು, ಎಲ್ಲ ಕಾರ್ಯಗಳಲ್ಲಿ ವಿಘ್ನವು, ಎಲ್ಲ ಕೆಲಸಗಳು ಕೆಡುವವು. ಈ ದೋಷ ಪರಿಹಾರಕ್ಕಾಗಿಯೂ, ಗುರುಗ್ರಹದ ಸಂತುಷ್ಟಿಗಾಗಿಯೂ ದಾನಗಳಲ್ಲಿ ಶ್ರೇಷ್ಠವೆಂದು ಹೆಸರಾದ ಸ್ವರ್ಣ ಪದ್ಮದಾನ ಮಾಡುವದರಿಂದ ಸರ್ವ ಪಾಪಗಳಿಂದಲೂ, ಸಮಸ್ತ ಕಂಟಕಗಳಿಂದಲೂ ಬಿಡುಗಡೆಯಾಗಿ ಅವ್ಯಾಹತ ಪ್ರತಾಪಶಾಲಿಯಾಗಿ ಬುದ್ಧಿವಂತಿಕೆಯಿಂದ ಸಮಸ್ತ ಸೌಭಾಗ್ಯಗಳನ್ನು ಪಡೆಯುವನು.

ಯಜಮಾನನ ಜನ್ಮನಕ್ಷತ್ರದಲ್ಲಿ ಗುರುವಾರ ದಿವಸ ದೇವಾಲಯದಲ್ಲಿ ಅಥವಾ ಮನೆಯಲ್ಲಿ ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಲ್ಪಟ್ಟ ಸ್ಥಳದಲ್ಲಿ ಸಾವಿಯ ಧಾನ್ಯದ ಗುಂಪೆಯನ್ನು ಹಾಕಿ ಅದರ ಮೇಲೆ ಹಳದಿ ಬಣ್ಣದ ರೇಶಿಮೆಯ ವಸ್ತ್ರವನ್ನು ಹಾಸಿ ಅದರ ಮೇಲೆ ಎರಡು ವೀಳ್ಯದೆಲೆಗಳನ್ನು ಇಟ್ಟು ಅದರಲ್ಲಿ( ಎರಡು ತೊಲೆ, ಒಂದು ತೊಲೆ ಅಥವಾ ಶಕ್ತ್ಯಾನುಸಾರ) ಬಂಗಾರದ ಅಷ್ಟ (ಎಂಟು) ದಳಯುಕ್ತವಾದ ಕಮಲವನ್ನು ಇಟ್ಟು ಯಜಮಾನನು ಭದ್ರಾಸನದ ಮೇಲೆ ಕುಳಿತುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ.

''ಮಮ ಇಹಜನ್ಮನಿ, ಪೂರ್ವ ಜನ್ಮನಿ ಸಂಭಾವಿತಾನಾಂ ರಾಜಭಯ ಅಮಾತ್ಯಭಯ, ಶತ್ರುಭಯ, ಮೃತ್ಯುಭಯ ನಿವಾರಣಾರ್ಥಂ ತದ್ದೋಷಶಾಂತ್ಯರ್ಥಂ ಸ್ವರ್ಣ ಪದ್ಮದಾನಂ ಕರಿಷ್ಯೇ ತದಾದೌ ಶ್ರೀ ಮಹಾಗಣಪತಿ ಪೂಜಾಂ ಕರಿಷ್ಯೇ''

ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಬೇಕು. ನಂತರ ಸ್ವರ್ಣ ಪದ್ಮ ಪೂಜಾ ಮಾಡಬೇಕು.

ಧ್ಯಾನಂ- ವರಾಕ್ಷಮಾಲಾ ದಂಡಂಚ ಕಮಂಡಲು ಧರಂ ವಿಭುಂ।
ಪುಷ್ಪರಾಗಾನ್ವಿತಂ ಪೀತವಸ್ತ್ರಗ್ರಂಧಾನುಲೇಪನಂ।
ಬೃಹಸ್ಪತೇ ಅತೀಯ ದರ್ಯೋ ಅರ್ಹಾ ದ್ಯುಮದ್ವಿಭಾತಿ ಕ್ರತುಮಜ್ಜನೇಷು।
ಯದ್ದೀದ ಯಚ್ಛವಸರ್ತ ಪ್ರಜಾ ತದಸ್ಮಾಸು ದ್ರವಿಣಂ ದೇಹಿ ಚಿತ್ಯಂ

ಎಂದು ಗುರುದೇವನನ್ನು ಧ್ಯಾನಿಸಿ ನಂತರ,

ಓಂ ಭೂಃ ಗುರುದೇವ ಮಾವಾಹಯಾಮಿ । ಓಂ ಭುವಃ ಗುರುದೇವ

ಮಾವಾಹಯಾಮಿ। ಓಂ ಸುವಃ ಗುರುದೇವ ಮಾವಾಹಯಾಮಿ। ಓಂ ಭೂರ್ಭುವಃ ಸ್ವಃ ಗುರುದೇವಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಚೆಲ್ಲಬೇಕು. ನಂತರ,

ಓಂ ಭೂರ್ಭುವಃ ಸ್ವರೋಂ ಸಶಕ್ತಿ ಸಾಂಗ ಸಾಯುಧ ಸವಾಹನ ಸಪರಿವಾರ ಓಂ ಗುರುದೇವ ಅತ್ರಾಗಚ್ಛಾಗಚ್ಛ। ಆವಾಹಯಾಮಿ ಆವಾಹಿತೋಭವ । ಸ್ಥಾಪಯಾಮಿ ಸ್ಥಾಪಿತೋಭವ । ಸನ್ನಿಹಿತೋಭವ । ಸಮ್ಮುಖೋಭವ । ಅವಕುಂಠಿತೋಭವ । ವರದೋಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ,

''ಓಂ ಗುರುದೇವಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ'' ಎಂದು ನಮಸ್ಕರಿಸಿ ''ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ'' ಎಂದು ಆಸನವನ್ನು ಮುಟ್ಟಿ ''ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ'' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ 'ಹಸ್ತಯೋಃ ಅರ್ಘ್ಯಂ ಅರ್ಘ್ಯಂ ಸಮರ್ಪಯಾಮಿ'' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ ''ಮುಖೇ ಆಚಮನೀಯಂ ಸಮರ್ಪಯಾಮಿ'' ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಿ.

''ಓಂ ಗುರುವೇ ನಮಃ'' ಈ ಮಂತ್ರದಿಂದ ಹಳದಿ ಗಂಧ, ಹಳದಿ ಅಕ್ಷತೆ, ಹಳದಿ ಪುಷ್ಪಗಳಿಂದ ಪೂಜಿಸಿ ಪೂರ್ವಾದಿ 8 ದಿಕ್ಕುಗಳ ಕಡೆಗೆ ಇರುವ ಕಮಲದ 8 ದಳಗಳಲ್ಲಿ ಗುರುದೇವನ ಎಂಟು ನಾಮಗಳನ್ನು ಉಚ್ಚರಿಸುತ್ತ ಪೂಜಿಸಬೇಕು. ನಾಮಗಳು :- (1) ದೇವಾಚಾರ್ಯಃ (2) ವಾಕ್ಪತಿಃ (3) ಗೀರ್ವಾಣ ಮತಿದಾಯಕಃ (4) ಋಗ್ವೇದಾಧಿಪಃ (5) ಶಕ್ರಮಾತ್ಯಃ (6) ಗುರುಃ (7) ಜೀವಃ (8) ಆಂಗೀರಸಃ ಈ ಎಂಟು ನಾಮದೇವತೆಗಳನ್ನು ಕ್ರಮವಾಗಿ ಎಂಟೂ ದಿಕ್ಕುಗಳಲ್ಲಿ ಪೂಜಿಸಿ ಧೂಪ, ದೀಪಗಳನ್ನು ಬೆಳಗಿ ನೈವೇದ್ಯವನ್ನು ಸಮರ್ಪಿಸಿ ಪೂಜೆಯನ್ನು ಮುಕ್ತಾಯಗೊಳಿಸಬೇಕು. ನಂತರ ಓರ್ವ ಜಂಗಮಮೂರ್ತಿ ಅಥವಾ ಬ್ರಾಹ್ಮಣನನ್ನು ಹಳದಿ ವಸ್ತ್ರ, ಪುಷ್ಪಹಾರಗಳಿಂದ ಸತ್ಕರಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಜಲಧಾರಾಪೂರ್ವಕವಾಗಿ ಸುವರ್ಣ ಪದ್ಮ ದಾನವನ್ನು ಮಾಡಬೇಕು.

ದಾನ ಮಂತ್ರ- ಶಾಲಿನ್ಯೋಪರಿ ಗತಂ ಸೌವರ್ಣ ಸ್ವರ್ಥಿತಂಗುರುಂ।
ದದಾಮಿ ಸರ್ವಕಾಮ್ಯಾರ್ಥ ಸಿದ್ಧಿಂ ಮೇಸರ್ವದಾ ಕುರು॥

ಈ ಮಂತ್ರದೊಂದಿಗೆ ಶಕ್ತ್ಯಾನುಸಾರ ದಕ್ಷಿಣೆ, ತಾಂಬೂಲ ಸಹಿತ ದಾನಕೊಟ್ಟು ಆಶೀರ್ವಾದ ಪಡೆಯಬೇಕು. ಈ ಪ್ರಕಾರ ಯಾಮಳ ಗ್ರಂಥದಲ್ಲಿ ಉಕ್ತವಾಗಿದೆ.

## ಗುರುದಶಾ ಗುರುಭುಕ್ತಿಯಲ್ಲಿ ಗುರುಪ್ರೀತಿಕರ ಸುವರ್ಣ ಪ್ರತಿಮಾ ದಾನವು

ಜನನ ಲಗ್ನ ಕುಂಡಲಿಯಲ್ಲಿ ಗುರುವು ನೀಚರಾಶಿಗಳಲ್ಲಿದ್ದರೆ, ಅಸ್ತಂಗತನಾಗಿದ್ದರೆ 2–7–8–6 ಸ್ಥಾನಗಳಲ್ಲಿದ್ದರೆ, ಪಾಪಗ್ರಹ ಸಂಬಂಧವುಳ್ಳವನಾದರೆ ಗುರುದಶಾ ಭುಕ್ತಿಯಲ್ಲಿ ಜ್ವರ, ಪಾಂಡುರೋಗ ಭಯವು, ಧನನಾಶವು, ಮಾನಹಾನಿಯು ಅಪಮೃತ್ಯು ಭಯವು. ಈ ದೋಷ ಪರಿಹಾರಕ್ಕಾಗಿ ಶ್ರೀ ರುದ್ರಜಪವನ್ನು ಮಾಡಿಸಿ ಬಂಗಾರದ ಗುರುಮೂರ್ತಿಯನ್ನು ದಾನ ಮಾಡುವದರಿಂದ ಶಾಂತಿಯಾಗುವದು ಎಂಬುದಾಗಿ ಯಾಮಳ ತಂತ್ರದಲ್ಲಿ ಉಕ್ತವಾಗಿದೆ.

ಸುವರ್ಣ ಪ್ರತಿಮಾದಾನ :- ಯಜಮಾನನ ಜನ್ಮ ನಕ್ಷತ್ರದಲ್ಲಿ ವಿಶೇಷವಾಗಿ ಗುರುವಾರ ದಿವಸ ದೇವಾಲಯದಲ್ಲಿ ಅಥವಾ ಮನೆಯಲ್ಲಿ ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಶುದ್ಧ ಪ್ರದೇಶದಲ್ಲಿ ಕಡಲೆಯ ಗುಂಪೆಯನ್ನು ಹಾಕಿ ಅದರ ಮೇಲೆ ರೇಶಿಮೆಯ ಹಳದಿ ವಸ್ತ್ರವನ್ನು ಹಾಸಿ ತನ್ನ ಶಕ್ತ್ಯಾನುಸಾರ ಬಂಗಾರದಿಂದ ತಯಾರಿಸಿದ ಲಕ್ಷಣಯುಕ್ತವಾದ ಗುರು ಪ್ರತಿಮೆಯನ್ನು ಇಟ್ಟು,

ಆಚಮನ ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಾದಿಗಳನ್ನು ಉಚ್ಚರಿಸಿ,

'ಅಸ್ಯಾಂ...ತಿಥೌ ಮಮ ಪಾಂಡು ಜ್ವರ ರೋಗಾದಿ ಭಯ, ಧನಹಾನಿ, ಮಾನಹಾನಿ, ಅಪಮೃತ್ಯು ಭಯ ಪರಿಹಾರಾರ್ಥಂ ಗುರುದಶಾಯಾಂ ಗುರುಭುಕ್ತೌ ಗುರು ಪ್ರೀತಿಕರ ಬೃಹಸ್ಪತಿ ಪ್ರತಿಮಾ ಪೂಜಾಂ ಕೃತ್ವಾ ಪ್ರತಿಮಾ ದಾನಂ ಕರಿಷ್ಯೇ ತದಾದೌ ಮಹಾ ಗಣಪತಿ ಪೂಜಾ ಕರಿಷ್ಯೆ'

ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಬೇಕು. ಬಳಿಕ ಸುವರ್ಣ ಪ್ರತಿಮಾ ಪೂಜೆಯನ್ನು ಮಾಡತಕ್ಕದ್ದು.

ಧ್ಯಾನಂ– ಪೀತಾಂಬರಧರ ಸ್ರಗ್ವೀ ಸಾಕ್ಷಸೂತ್ರ ಕಮಂಡಲಂ।
ಚತುರ್ಭುಜೋ ದೇವಗುರುಃ ಪ್ರಸನ್ನೋ ವರದಸ್ಸದಾ॥

ಬೃಹಸ್ಪತೇ ಅತೀ ಯದರ್ಯೋ ಅರ್ಹಾದ್ಯುಮದ್ವಿಭಾತಿಕ್ರತು ಮಜ್ಜನೇಷು। ಯದ್ದೀದಯಚ್ಛವಸರ್ತ ಪ್ರಜಾತದಸ್ಮಾಸು ದ್ರವಿಣಂ ದೇಹಿ ಚಿತ್ರಂ॥

ಎಂದು ಬೃಹಸ್ಪತಿಯನ್ನು ಧ್ಯಾನಿಸಿ ನಂತರ,

ಓಂ ಭೂಃ ಬೃಹಸ್ಪತಿದೇವ ಮಾವಾಹಯಾಮಿ। ಓಂ ಭುವಃ ಬೃಹಸ್ಪತಿದೇವ ಮಾವಾಹಯಾಮಿ। ಓಂ ಸುವಃ ಬೃಹಸ್ಪತಿದೇವ ಮಾವಾಹಯಾಮಿ ಓಂ ಭೂರ್ಭುವಃ ಸ್ವಃ ಬೃಹಸ್ಪತಿದೇವ ಮಾವಾಹಯಾಮಿ। ಸ್ಥಾಪಯಾಮಿ ಪೂಜಯಾಮಿ।

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು ನಂತರ,

ಓಂ ಭೂರ್ಭುವಃ ಸ್ವರೋಂ ಸಶಕ್ತಿ ಸಾಂಗ ಸಾಯುಧ ಸವಾಹನ ಸಪರಿವಾರ ಓಂ ಬೃಹಸ್ಪತಿ ದೇವ ಅತ್ರಾಗಚ್ಛಗಚ್ಛ। ಆವಾಹಯಾಮಿ ಆವಾಹಿತೋಭವ। ಸ್ಥಾಪಯಾಮಿ ಸ್ಥಾಪಿತೋ ಭವ। ಸನ್ನಿಹಿತೋಭವ। ಸಮ್ಮುಖೋವ। ಅವಕುಂಠಿತೋ ಭವ। ವರದೋಭವ। ಎಂದು ಷಣ್ಮುದ್ರೆಗಳನ್ನು ತೋರಿಸಿ,

''ಓಂ ಬೃಹಸ್ಪತಿ ದೇವಾಯ ನಮಃ ಧಾಯಾಮಿ ಧ್ಯಾನ್ಯಂ ಸಮರ್ಪಯಾಮಿ'' ಎಂದು ನಮಸ್ಕರಿಸಿ ''ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ'' ಎಂದು ಆಸನವನ್ನು ಮುಟ್ಟಿ ''ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ'' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ 'ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ ''ಮುಖೇ ಆಚಮನೀಯಂ ಸಮರ್ಪಯಾಮಿ'' ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಿ,

''ಓಂ ಬೃಹಸ್ಪತಯೇ ನಮಃ'' ಈ ಮಂತ್ರದಿಂದ ಭಸ್ಮ ಹಳದಿ ಗಂಧ, ಹಳದಿ ಅಕ್ಷತೆ, ಸೇವಂತಿಕಾ, ಜಾಜಿ ಪುಷ್ಪ ಧೂಪ, ದೀಪಗಳಿಂದ ಪೂಜಿಸಿ ಮೊಸರು, ಅನ್ನ ನೈವೇದ್ಯವನ್ನು ಸಮರ್ಪಿಸಿ ಪೂಜೆಯನ್ನು ಮುಕ್ತಾಯಗೊಳಿಸಿ ನಂತರ ಓರ್ವ ಜಂಗಮ ಮೂರ್ತಿ ಅಥವಾ ಬ್ರಾಹ್ಮಣನನ್ನು ಕರೆಯಿಸಿಕೊಂಡು ಆತನನ್ನು ವಸ್ತ್ರ, ಗಂಧ, ಪುಷ್ಪ ಹಾರಾದಿಗಳಿಂದ ಸತ್ಕರಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಶಕ್ತ್ಯಾನುಸಾರ ದಕ್ಷಿಣೆ, ತಾಂಬೂಲ ಸಹಿತ ಸುವರ್ಣ ಪ್ರತಿಮೆಯನ್ನು ದಾನ ಕೊಡಬೇಕು.

ದಾನಮಂತ್ರ– ಪೀತಾಂಬರಃ ಪೀತವಪುಃ ಕಿರೀಟೀ ಚತುರ್ಭುಜೋ ದೇವ ಗುರು ಪ್ರಶಾಂತಃ।
ತಥಾಸಿ ದಂಡಂಚ ಕಮಂಡಲುಂ ಚತಥಾಕ್ಷಸೂತ್ರಂ ವರದೋಸ್ತು ಮಹ್ಯಂ॥

ಈ ಪ್ರಕಾರ ದಾನ ಕೊಡುವದರಿಂದ ಗುರುಗ್ರಹದೋಷದಿಂದ ಮುಕ್ತನಾಗಿ ಪುತ್ರ, ಪೌತ್ರರೊಡನೆ ಸುಖಭೋಗದಿಂದ ಶತಾಯುಷಿಯಾಗಿ ಬಾಳುವನು.



## ಗುರುದಶಾ ಶನಿಭುಕ್ತಿಯಲ್ಲಿ ಶನಿ ಪ್ರೀತಿಕರ ಕೃಷ್ಣಮೃಗ ದಾನವು

ಜನನ ಲಗ್ನ ಕುಂಡಲಿಯಲ್ಲಿ ಶನಿಯು ನೀಚ ಕ್ಷೇತ್ರ, ಶತ್ರು ಕ್ಷೇತ್ರ ಲಗ್ನದಿಂದ 6–8–12 ಸ್ಥಾನಗಳಲ್ಲಿದ್ದರೆ ಮಾರಕ ಗ್ರಹಗಳೊಡನೆ ಕೂಡಿದ್ದರೆ ಗುರುದಶಾ ಶನಿ ಭುಕ್ತಿಯಲ್ಲಿ ಹೊಟ್ಟೆ ಶೂಲಿಯು, ವಾತರೋಗವು, ಸ್ಥಾನನಾಶವು, ಮಾನಭಂಗವು, ಅಪಮೃತ್ಯು ಭಯವು ಇತ್ಯಾದಿ ಗುರುದಶಾ ಶನಿ ಭುಕ್ತಿಯಲ್ಲಿ ಉಂಟಾಗುವವು. ಈ ದೋಷ ಪರಿಹಾರಕ್ಕಾಗಿ ಮೃತ್ಯುಸೂಕ್ತವನ್ನು ಪಠಿಸಿ ಕೃಷ್ಣಮೃಗ ದಾನ ಮಾಡಬೇಕೆಂಬುದಾಗಿ ಜ್ಯೋತಿರ್ಷಾಣವ ಗ್ರಂಥದಲ್ಲಿ ಹೇಳಲ್ಪಟ್ಟಿದೆ.

ಕೃಷ್ಣಮೃಗ ದಾನ ವಿಧಾನ:- ಕರ್ಕ ಅಥವಾ ಮಕರ ಸಂಕ್ರಮಣ ಪುಣ್ಯ ಕಾಲಗಳಲ್ಲಿ ಅಥವಾ ಉಪದ್ರವ ಕಾಲದಲ್ಲಿ ಸ್ವಗೃಹದಲ್ಲಿ ಅಥವಾ ದೇವಾಲಯ ಮೊದಲಾದ ಪುಣ್ಯ ಸ್ಥಳಗಳಲ್ಲಿ ಗೋಮಯದಿಂದ ಸಾರಿಸಿ, ರಂಗವಲ್ಯಾದಿಗಳಿಂದ ಅಲಂಕರಿಸಿದ ಭೂಭಾಗದಲ್ಲಿ ಮೂರು ಸೇರು ಪ್ರಮಾಣದಷ್ಟು ಅಕ್ಕಿಯ ಗುಂಪೆಯನ್ನು ರಚಿಸಿ ಬಂಗಾರದಿಂದ ತಯಾರಿಸಿದ ಚಿಗರೆಯನ್ನು ಪೂರ್ವಾಭಿಮುಖವಾಗಿ ಇಟ್ಟು (ಜೀವಂತ ಚಿಗರೆಯನ್ನು ಪೂಜಿಸಬಹುದು, ಚಿಗರೆಯ ಪೃಷ್ಠಭಾಗವನ್ನು ತಾಮ್ರ, ಕೋಡುಗಳನ್ನು ಬೆಳ್ಳಿಯ ಆಭರಣಗಳಿಂದ ಅಲಂಕರಿಸಬೇಕು.) ಅದರ ಕೆಳಗೆ ಒಂದು ವಸ್ತ್ರವನ್ನು ಹಾಸಿ ಮೇಲೆ ಮತ್ತೊಂದು ವಸ್ತ್ರವನ್ನು ಹೊದಿಸಿ ಆ ಚಿಗರೆಯ ನಾಲ್ಕೂ ಪಾದಗಳ ಹತ್ತಿರ ಮೊಸರು, ಮದ್ಯ, ತುಪ್ಪ, ಹಾಲುಗಳಿಂದ ತುಂಬಿದ ಕಂಚಿನ ಪಾತ್ರೆಗಳನ್ನು ಇಟ್ಟು–

ಯಜಮಾನನು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ ''ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭತಿಥೌ ಮಮ ಇಹಜನ್ಮನಿ ಪೂರ್ವಜನ್ಮನಿ ಸಂಭಾವಿತಾನಾಂ ದೇವ ದ್ರವ್ಯ ಹರಣ ಸ್ವಾಮಿ ದ್ರೋಹಾದೀನಾಂ ವಾತರೋಗ ನಿಧಾನ ಭೂತಾನಾಂ ಸರ್ವೇಷಾಂ ಪಾಪಾನಾಂ ನಿವೃತ್ಯರ್ಥಂ ಸರ್ವ ಮಂಗಳಾ ಪ್ರಾಪ್ತ್ಯರ್ಥಂ ಶ್ರೀ ಮಹಾ ವಿಷ್ಣುಪ್ರೀತ್ಯರ್ಥಂ ಬೋಧಾಯನೋಕ್ತಪ್ರಕಾರೇಣ ಕೃಷ್ಣಮೃಗ ದಾನಂ ಕರಿಷ್ಯೇ ತದಾದೌ ಶ್ರೀ ಮಹಾಗಣಪತಿ ಪೂಜಾಂ ಕರಿಷ್ಯೇ''

ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಬೇಕು. ಬಳಿಕ ''ಓಂ ಕೃಷ್ಣಮೃಗಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ'' ಎಂದು ಆಸನವನ್ನು ಮುಟ್ಟಿ ''ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ'' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ 'ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ'' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ 'ಮುಖೇ ಆಚಮನೀಯಂ ಸಮರ್ಪಯಾಮಿ' ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಿ,

''ಓಂ ಕೃಷ್ಣಮೃಗಾಯ ನಮಃ'' ಈ ಮಂತ್ರದಿಂದ ಗಂಧ, ಅಕ್ಷತೆ, ಪತ್ರಿ, ಪುಷ್ಪ, ಧೂಪ, ದೀಪ ಮೊದಲಾದ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ನಂತರ ಮೃಗದ ಪಶ್ಚಿಮ ಭಾಗದಲ್ಲಿ ಅಗ್ನಿ ಪ್ರತಿಷ್ಠೆಯನ್ನು ಮಾಡಿ ''ಆವಾಯೋಭೂಷ'' ಈ ಮಂತ್ರದಿಂದ 28 ಸಾರೆ ಫಾಲಾಶ ಸಮಿತ್ತುಗಳಿಂದಲೂ ''ತವವಾಯು ವೃಥಸ್ಯ'' ಈ ಮಂತ್ರದಿಂದ 108 ಸಾರೆ ಚರು ಹೋಮವನ್ನೂ ''ಅತ್ವಾಜು ಹೋರಾರಹಣ'' ಈ ಮಂತ್ರದಿಂದ 108ಸಾರೆ ಆಜ್ಯ ಹೋಮವನ್ನೂ ಮಾಡಬೇಕು.

ಬಳಿಕ ಸುಶೀಲನೂ, ವಯಸ್ಸು, ವಿದ್ಯಾರೂಪಗಳಿಂದ ಕೂಡಿದವನೂ ಆದ ಓರ್ವ ಬ್ರಾಹ್ಮಣನನ್ನು ಕರೆಯಿಸಿ ಆತನನ್ನು ವಸ್ತ್ರ, ಗಂಧ, ಪುಷ್ಪಹಾರಾದಿಗಳಿಂದ ಸತ್ಕರಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಸಾಕಷ್ಟು ದಕ್ಷಿಣೆ, ತಾಂಬೂಲ ಸಹಿತವಾಗಿ ಕೃಷ್ಣಮೃಗ (ಚಿಗರೆ)ವನ್ನು ದಾನ ಕೊಡಬೇಕು.

ದಾನಮಂತ್ರ- ಅಂತಶ್ಚರಿಸಿ ಭೂತಾನಾಂ ವಾಯೋತ್ವಂ ಲೋಕಪಾವನ।
ವಾಹನಸ್ಯ ಪ್ರದಾನೇನ ವಾತವ್ಯಾಧಿಂ ವಿನಾಶಯ ॥
ಅಸ್ಮೈಅಹಂ ಗೋಮಯಾನು ಲೇಪಿತ ರಂಗವಲ್ಯಾದಿರಚಿತ
ಭೂಭಾಗೋಪರಿಸ್ಥ ಪರಿಕಲ್ಪಿತ ಆಢಕತ್ರಯ ಪರಿಮಿತ
ತಂಡುಲರಾಶ್ಯು ಪರಿಸ್ಥಿತಂ ತಾಮ್ರಪೃಷ್ಠಂ ರಜತಶೃಂಗೋ
ಪೇತಂವಸ್ತ್ರ ವೇಷ್ಟಿತ ಸ್ವರ್ಚಿತಂ ವಾಯುದೇವ ತಾಕಂ
ಕೃಷ್ಣಮೃಗಂ ಪೂರ್ವೋಕ್ತಫಲ ಕಾಮಸ್ತುಭ್ಯ ಮಿದಂಸಂಪ್ರದದೇ
ನಮಮ ನಮಮ

ಈ ಪ್ರಕಾರ ಉಚ್ಚರಿಸುತ್ತ ಕೃಷ್ಣಮೃಗವನ್ನು ದಕ್ಷಿಣೆ ಸಹಿತ ದಾನ ಕೊಟ್ಟು ಅವರಿಂದ ಆಶೀರ್ವಾದ ಪಡೆಯಬೇಕು.



## ಗುರುದಶಾ ಬುಧಭುಕ್ತಿಯಲ್ಲಿ ಬುಧ ಪ್ರೀತಿಕರ ಮಕರ (ಮೊಸಳೆ) ದಾನವು

ಜನನ ಲಗ್ನ ಕುಂಡಲಿಯಲ್ಲಿ ಬುಧನು 6–8–12 ಸ್ಥಾನಗಳಲ್ಲಿದ್ದರೆ, ನೀಚರಾಶಿಗಳಲ್ಲಿದ್ದರೆ, ಬಲಹೀನನಾಗಿದ್ದರೆ, ಗುರುದಶಾ ಬುಧ ಭುಕ್ತಿಯಲ್ಲಿ ದೇಹದಲ್ಲಿ ಜಾಡ್ಯವು, ವ್ಯಾಧಿ ಪೀಡೆಯು. ಈ ದೋಷ ಪರಿಹಾರಕ್ಕಾಗಿ ಹೇಮಾದ್ರಿಯಲ್ಲಿ ಹೇಳಿದ ಪ್ರಕಾರ ವರುಣನನ್ನು ಪೂಜಿಸಿ, ಹೋಮ ಮಾಡಿ ಮಕರ ಪ್ರತಿಮಾ ದಾನ ಮಾಡುವದರಿಂದ ಕ್ಷೇಮವಾಗುವದು.

ಮಕರ ಅಥವಾ ಕರ್ಕ ಸಂಕ್ರಮಣಗಳ ಪುಣ್ಯಕಾಲದಲ್ಲಿ ಅಥವಾ ಉಪದ್ರವ ಕಾಲದಲ್ಲಿ ದೇವಾಲಯ ಮೊದಲಾದ ಪವಿತ್ರ ಸ್ಥಳದಲ್ಲಿ ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಭೂಭಾಗದಲ್ಲಿ ಒಂದು ಪಾತ್ರೆಯನ್ನು ಇಟ್ಟು ಅದರಲ್ಲಿ ಜಲವನ್ನು ತುಂಬಿ ಯಜಮಾನನ ಶಕ್ತ್ಯಾನುಸಾರವಾಗಿ ಬೆಳ್ಳಿಯಿಂದ ತಯಾರಿಸಿದ ಮೊಸಳೆಯ ಪ್ರತಿಮೆಗೆ ಬಂಗಾರದ ಕಣ್ಣುಗಳು, ಬೆಳ್ಳಿಯ ನಾಲಿಗೆ, ಬೆಳ್ಳಿಯ

ನಡುಕಟ್ಟು, ಪುಚ್ಛಭಾಗದಲ್ಲಿ ರತ್ನ ಈ ಪ್ರಕಾರ ಸಂಯೋಜಿಸಿ ಪ್ರತಿಮೆಗೆ ಎರಡು ನೀಲಿ ವಸ್ತ್ರಗಳನ್ನು ಹೊದಿಸಿ ನೀರಿನಿಂದ ತುಂಬಿದ ಪಾತ್ರೆಯ ಮೇಲ್ಭಾಗದಲ್ಲಿ ಇಡಬೇಕು ಮತ್ತು ಮುಂದಿನ ಎರಡೂ ಪಾದಗಳ ಮುಂಭಾಗದಲ್ಲಿ ತುಪ್ಪದಿಂದ ತುಂಬಿದ ತಾಮ್ರದ ಬಟ್ಟಲಗಳನ್ನಿಟ್ಟು ಯಜಮಾನನು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ 'ಏವಂ ಗುಣವಿಶೇಷಣ ವಿಶಿಷ್ಟಾಯಾಂ ಅಸ್ಯಾಂ.... ಶುಭತಿಥೌ ಮಮ ಇಹಜನ್ಮನಿ ಸರ್ವೇಷಾಂ ಪಾಪಾನಾಂ ನಿವೃತ್ತಿದ್ವಾರಾ ಮಮ ಶರೀರೇ ವರ್ತಮಾನ ರೋಗ ಹರ ಮಕರದಾನಂ ಕರಿಷ್ಯೇ ಚ ವರುಣದೇವ ಪೂಜಾಂ ಕರಿಷ್ಯೇ ತದಾದೌ ಶ್ರೀ ಮಹಾಗಣಪತಿ ಪೂಜಾಂ ಕರಿಷ್ಯೇ' ಎಂದು ಸಂಕಲ್ಪವನ್ನು ಮಾಡಿ,

'ಯದತ್ರಂ ಸಂಸ್ಥಿತಂ ಭೂತಂ ಸ್ಥಾನಮಾಶ್ರಿತ್ಯ ಸರ್ವದಾ।
ಸ್ಥಾನಂತ್ಯಕ್ತ್ವಾತು ತತ್ಸರ್ವಂ ಯತಸ್ಥಂ ತತ್ರಗಚ್ಛತು॥

ಈ ಮಂತ್ರದಿಂದ ಸುತ್ತಲೂ ಬಿಳಿ ಸಾಸಿವೆಗಳನ್ನು ಹಾಕಬೇಕು.

"ಆಪೋ ಹಿಷ್ಠಾ ಮಯೋಭುವಸ್ತಾನ ಊರ್ಜೇದಧಾತನ। ಮಹೇರಣಾಯ ಚಕ್ಷಸೇ। ಯೋವಶ್ಶಿವ ತಮೋ ರಸಸ್ತಸ್ಯ ಭಾಜಯತೇಹನಃ। ಉಶತೀರಿವ ಮಾತರಃ। ತಸ್ಮಾಅರಂಗ ಮಾಮವೋ ಯಸ್ಯ ಕ್ಷಯಾಯ ಜಿನ್ವಥ। ಆಪೋಜನಯಥಾಚನಃ॥"

ಈ ಮಂತ್ರವನ್ನು ಉಚ್ಚರಿಸುತ್ತ ಜಲವನ್ನು ಪ್ರೋಕ್ಷಣ ಮಾಡಿ, ಗೋಮಯ, ಗೋಮೂತ್ರ, ಗೋಕ್ಷೀರ, ಗೋದಧಿ, ಗೋಘೃತ, ಗೋರೋಜನಗಳಿಂದ ಸಾರಿಸಿದ ಶುದ್ಧಸ್ಥಳದಲ್ಲಿ

('ಮಹೀದ್ಯೌಃ ಪೃಥವೀಚನ.......ಭರೀಮಭಿಃ')

ಈ ಮಂತ್ರದಿಂದ ದಕ್ಷಿಣೋತ್ತರ ದಿಕ್ಕುಗಳ ಭೂಮಿಯನ್ನು ಮುಟ್ಟಬೇಕು.

("ಓಷಧಯಃ........ರಾಜನ್ ಪಾರಯಾಮಸಿ")

ಈ ಮಂತ್ರದಿಂದ ಬಾಳೆಯ ಎಲೆಯನ್ನು ಹಾಕಿ

("ಯೇನತೋಕಾಯ.......ವಿಶ್ವಾಯಸೌ ಭಗಂ")

ಈ ಮಂತ್ರದಿಂದ ಅಕ್ಕಿಯ (ಭತ್ತದ) ಗುಡ್ಡೆಯನ್ನು ರಚಿಸಿ.

('ಆಕಲಶೇಷು ಧಾವತಿ..........ಕನಿಕ್ರದತ್')

ಈ ಮಂತ್ರದಿಂದ ಅಕ್ಕಿಯ ಗುಡ್ಡೆಯ ಮೇಲೆ 1 ಕಲಶವನ್ನು ಸ್ಥಾಪಿಸಿ

("ಇಮಂಮೇ.........ಸುಷೋಮಯಾ॥")

ಈ ಮಂತ್ರದಿಂದ ಕಲಶದಲ್ಲಿ ಜಲವನ್ನು ತುಂಬಿ

("ಗಂಧದ್ವಾರಾಂ.........ಹ್ವಯೇಶ್ರೀಯಂ॥")

ಈ ಮಂತ್ರದಿಂದ ಕಲಶದಲ್ಲಿ ಗಂಧವನ್ನು ಹಾಕಿ ಹಾಗೂ ಮೇಲೆಯೂ ಧರಿಸಿ ಪುಷ್ಪಮಾಲಿಕೆಗಳಿಂದ ಅಲಂಕರಿಸಿ,

("ಯಾ ಓಷಧೀಃ.........ಶತಂಧಾಮಾನಿ ಸಪ್ತಚ॥")

ಈ ಮಂತ್ರದಿಂದ ಕಲಶದಲ್ಲಿ ತತೌಷಧಿಗಳನ್ನು ಹಾಕಿ

("ಕಾಂಡಾತ್ಕಾಂಡಾ.......ಸಹಸ್ರೇಣ ಶತೇನಚ॥")

ಈ ಮಂತ್ರದಿಂದ ದರ್ಭೆಗಳನ್ನಿಟ್ಟು

("ಅಶ್ವತ್ಥೇವೋ ನಿಷದನಂ.......ಯತ್ಸನವಥಪೂರುಷಂ"॥)

ಈ ಮಂತ್ರದಿಂದ ಪಂಚ ಪಲ್ಲವಗಳನ್ನು ಇಟ್ಟು

('ಸ್ಯೋನಾಪೃಥಿವೀ..........ಶರ್ಮಸಪ್ರಥಾಃ॥)

ಈ ಮಂತ್ರದಿಂದ ಸಪ್ತಮೃತ್ತಿಕೆಗಳನ್ನು ಹಾಕಿ

('ಯಾಃ ಫಲಿನೀರ್ಯಾ.........ಮುಂಚತ್ವಗ್ಂ ಹಸಃ ॥)

ಈ ಮಂತ್ರದಿಂದ ಕಲಶದ ಮೇಲೆ ತೆಂಗಿನಕಾಯಿಯನ್ನಿಟ್ಟು

("ಸಹಿರತ್ನಾನಿದಾಶುಷೇ.........ಚಿತ್ರಮೀಮಹೇ" ॥)

ಈ ಮಂತ್ರದಿಂದ ಪಂಚರತ್ನಗಳನ್ನು ಹಾಕಿ

("ಹಿರಣ್ಯರೂಪಃ...........ದಾದದತ್ಯನ್ನಮಸ್ಮೈ" ॥)

ಈ ಮಂತ್ರದಿಂದ ಬಂಗಾರವನ್ನು ಹಾಕಿ

("ತಂತುಂತನ್ವನ್ ರಜಸೋ.........ಜನಯಾದೈವ್ಯಂಜನಂ" ॥)

ಈ ಮಂತ್ರದಿಂದ ಕಲಶಕ್ಕೆ ಬಿಳಿಯ ದಾರವನ್ನು ಸುತ್ತಿ

('ಯವಾಸುವಾಸಾಃ..........ಮನಸಾದೇವಯಂತಃ')

ಈ ಮಂತ್ರದಿಂದ ಕೆಂಪು ವಸ್ತ್ರಧರಿಸಿ

'ಗಂಗೇಚ ಯಮುನೇ ಚೈವಗೋದಾವರಿ ಸರಸ್ವತಿ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂಕುರು।
ಕಲಶಸ್ಯ ಮುಖೇರುದ್ರಃ ಕಂಠೇ ವಿಷ್ಣುಃ ಸಮಾಶ್ರಿತಃ।
ಮೂಲೇತತ್ರಸ್ಥಿತೋ ಬ್ರಹ್ಮಾಮಧ್ಯೇ ಮಾತೃಗಣಾಃ ಸ್ಮೃತಾಃ।
ಸರ್ವೇಽಸಮುದ್ರಾಃ ಸರಿತ ಸ್ತೀರ್ಥಾನಿ ಜಲದಾನದಾಃ
ಆಯಾಂತು ಮಮಶಾಂತ್ಯರ್ಥಂ ದುರಿತ ಕ್ಷಯಕಾರಕಾಃ॥

ಈ ಮಂತ್ರದಿಂದ ಕಲಶವನ್ನು ಮುಟ್ಟಿ ಜಪಿಸಬೇಕು.

ಈ ಪ್ರಕಾರ ಕಲಶವನ್ನು ಸ್ಥಾಪಿಸಿ, ಆ ಕಲಶದಲ್ಲಿ ವರುಣನನ್ನು ಆವಾಹನೆ ಮಾಡಬೇಕು.

ತತ್ವಾಯಾಮಿತಿ ಮಂತ್ರಸ್ಯ ಶುನಃ ಶೇಫ ಋಷಿಃ। ವರುಣೋದೇವತಾ ತ್ರಿಷ್ಟುಪ್ ಛಂದಃ ಅಸ್ಮಿನ್ ಕಲಶೇ ವರುಣಾವಾಹನೇ ವಿನಿಯೋಗಃ॥

ತತ್ವಾಯಾಮಿಬ್ರಹ್ಮಣಾ ವಂದಮಾನಸ್ತದಾ ಶಾಸ್ತೇ ಯಜಮಾನೋ ಹರ್ವಿಭಿಃ
ಅಹೇಡಮಾನೋ ವರುಣೇಹ ಬೋ ಧ್ಯುರುಶಗ್‌ಂ ಸಮಾನ ಆಯುಃ ಪ್ರಮೋಷೀಃ॥

ಓಂ ಭೂಃ ವರುಣ ಮಾವಾಹಯಾಮಿ, ಓಂ ಭುವಃ, ವರುಣಮಾವಾಹಯಾಮಿ, ಓಂಗ್‌ಂಸುವಃ ವರುಣಮಾವಾಹಯಾಮಿ, ಓಂ ಭೂರ್ಭುವಸ್ಸುವಃ ವರುಣಮಾವಾಹಯಾಮಿ, ಸ್ಥಾಪಯಾಮಿ ಪೂಜಯಾಮಿ

ಎಂದು ಕಲಶದ ಮೇಲೆ ಅಕ್ಷತೆಗಳನ್ನು ಹಾಕಿ ವರುಣ ದೇವನನ್ನು ಆವಾಹನೆ ಮಾಡಬೇಕು, ನಂತರ

ಓಂ ಭೂರ್ಭುವಃ ಸ್ವರೋಂ ಸಶಕ್ತಿಸಾಂಗ ಸಾಯುಧ ಸವಾಹನ ಸಪರಿವಾರ ಓಂ ವರುಣದೇವ ಅತ್ರಾಗಚ್ಛಾಗಚ್ಛ । ಆವಾಹಯಾಮಿ, ಆವಾಹಿತೋಭವ । ಸ್ಥಾಪಯಾಮಿ। ಸ್ಥಾಪಿತೋಭವ ಸನ್ನಿಹಿತೋಭವ। ಸಮ್ಮುಖೋಭವ। ಅವಕುಂಠಿತೋಭವ ವರದೋಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ, ಕಲಶವನ್ನು ಎರಡೂ ಹಸ್ತಗಳಿಂದ ಮುಟ್ಟಿ
"ಕಲಶಸ್ಯ ಮುಖೇರುದ್ರಃ ಕಂಠೇ ವಿಷ್ಣುಃ ಸಮಾಶ್ರಿತಃ।
ಮೂಲೇತತ್ರ ಸ್ಥಿತೋಬ್ರಹ್ಮಾ ಮಧ್ಯೇಮಾತೃಗಣಾಃ ಸ್ಮೃತಾಃ॥
ಕುಕ್ಷೌತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ।
ಋಗ್ವೇದೋಽ ಯಜುರ್ವೇದ ಸಾಮವೇದೋ ಹ್ಯಥರ್ವಣಃ॥
ಅಂಗೈಶ್ಚ ಸಹಿತಾಃ ಸರ್ವೇ ಕಲಶಂತು ಸಮಾಶ್ರಿತಾಃ।
ಗಂಗೇಚ ಯಮುನೇಚೈವ ಗೋದಾವರಿ ಸರಸ್ವತಿ॥
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು"॥

ಈ ಮಂತ್ರದಿಂದ ಜಪಿಸಿ

ಓಂ ವರುಣದೇವಾಯ ನಮಃ ಧ್ಯಾಯಾಮಿಧ್ಯಾನಂ ಸಮರ್ಪಯಾಮಿ" ಎಂದು ನಮಸ್ಕರಿಸಿ "ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ" ಎಂದು ಆಸನವನ್ನು ಮುಟ್ಟಿ "ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ" ಎಂದು

ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ ''ಹಸ್ತಯೋ ಅರ್ಘ್ಯಮರ್ಘ್ಯಂ ಸಮರ್ಪಯಾಮಿ'' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ ''ಮುಖೇ ಆಚಮನೀಯಂ ಸಮರ್ಪಯಾಮಿ'' ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು.

ಬಳಿಕ ವರುಣದೇವನನ್ನು ಷೋಡಶೋಪಚಾರಗಳಿಂದ ಪೂಜಿಸಿ ನಂತರ ಮಕರ (ಮೊಸಳೆ)ವನ್ನು ನೀಲಿಗಂಧ, ನೀಲಿ ಅಕ್ಷತೆ, ನೀಲಿ ಹೂ, ಧೂಪ, ದೀಪಾದಿ ಷೋಡಶೋಪಚಾರ ಪೂಜೆಯನ್ನು ಮಾಡಿದ ನಂತರ ಆ ಪೂಜಾ ಸ್ಥಾನದ ಪಶ್ಚಿಮ ಭಾಗದಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿ ತತ್ವಾಯಾಮಿ ಬ್ರಹ್ಮಣಾ'' ಮತ್ತು ''ಅಹೇಡ ಮಾನೋ ವರುಣೇಹ'' ಈ ಮಂತ್ರಗಳಿಂದ 108 ಸಾರೆ ಹೋಮ ಮಾಡಬೇಕು. ನಂತರ ಯಜಮಾನನು ಜಂಗಮ ಮೂರ್ತಿಯನ್ನು ಅಥವಾ ಬ್ರಾಹ್ಮಣನನ್ನು ವಸ್ತ್ರ, ಆಭರಣ, ಗಂಧ, ಪುಷ್ಪಾದಿಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ತನ್ನ ಶಕ್ತ್ಯಾನುಸಾರ ದಕ್ಷಿಣೆ ಮಕರ ಪ್ರತಿಮೆಯನ್ನು ತುಪ್ಪದ ಬಟ್ಟಲು ಸಹಿತ ದಾನ ಕೊಡಬೇಕು.

ದಾನಮಂತ್ರ- ಜಲಾಧಿದೇವ ದೇವೇಶ ಪಶ್ಚಿಮೇಶಾ ಪತೇ ವಿಭೋ।
ಸಂಭವ ದ್ವ್ಯಾಧಿನಾಶಂ ಮೇಕುರುದಾನೇನ ತೋಷಿತಃ।
ಅಸ್ಮೈ ಬ್ರಾಹ್ಮಣಾಯ- ಅಲಂಕಾರ ಸಹಿತ ಮಕರ ಪ್ರತಿಮಾಂ
ಘೃತಪೂರಿತ ತಾಮ್ರ ಚಷಕಾನ್ವಿತಾಂ ಮಮ ಪೂರ್ವೋಕ್ತ
ಫಲಕಾಮಸ್ತುಭ್ಯ ಮಹಂ ಸಂಪ್ರದದೇ ನಮಮ ನಮಮ॥

ಎಂದು ದಕ್ಷಿಣೆ, ತಾಂಬೂಲ ಸಹಿತ ದಾನ ಕೊಟ್ಟು ಅವರಿಂದ ಆಶೀರ್ವಾದ ಪಡೆಯಬೇಕು.



## ಗುರುದಶಾ ಕೇತು ಭುಕ್ತಿಯಲ್ಲಿ ಕೇತು ಪ್ರೀತಿಕರ ಮೇಷ (ಮೇಕೆ) ದಾನವು

ಜನನ ಲಗ್ನ ಕುಂಡಲಿಯಲ್ಲಿ ಕೇತುವು ಪಾಪಗ್ರಹಗಳೊಡನೆ ಕೂಡಿದ್ದರೆ, ಪಾಪಗ್ರಹಗಳ ನಿರೀಕ್ಷಣೆಗೊಳಪಟ್ಟಿದ್ದರೆ ಗುರುದಶಾ ಕೇತುಭುಕ್ತಿಯಲ್ಲಿ ರಾಜಕಲಹವು, ಧನನಾಶವು, ಚಿತ್ತವಿಭ್ರಮವು, ಮಸ್ತಕಶೂಲೆಯು, ಕುಕ್ಷಿಬಾಧೆಯು, ಪಾಂಡು ಮೊದಲಾದ ರೋಗ ಭಯವು, ಮಾಟ, ಮದ್ದು ಮೊದಲಾದ ವಿಷಭಯವು. ದೋಷ ಪರಿಹಾರಕ್ಕಾಗಿ ಶಿವಲಿಂಗಪೂಜೆಯನ್ನು ಮಾಡಿ ಮೇಷ (ಮೇಕೆ) ದಾನವನ್ನು ಮಾಡುವದರಿಂದ ಶಾಂತಿಯಾಗುವದು ಎಂಬುದಾಗಿ ''ಕರ್ಮವಿಪಾಕ'' ಗ್ರಂಥದಲ್ಲಿ ಉಲ್ಲೇಖವಾಗಿದೆ.

ಕರ್ಕ ಹಾಗೂ ಮಕರ ಸಂಕ್ರಮಣ ಪುಣ್ಯಕಾಲಗಳಲ್ಲಿ ದೇವಾಲಯ ಮೊದಲಾದ ಪವಿತ್ರ ಸ್ಥಳವನ್ನು ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಭೂಭಾಗದ ಮೇಲೆ ಹೆಸರು ಧಾನ್ಯದ ಗುಂಪೆಯನ್ನು ಹಾಕಿ ಅದರ ಮೇಲೆ ಉತ್ತಮವಾಗಿರುವ ಸರ್ವ ಅವಯವಗಳು ಶುದ್ಧವಾಗಿರುವ ತರುಣ ವಯಸ್ಸಿನ ಮೇಷ (ಮೇಕೆ) ವನ್ನು ಪೂರ್ವಕ್ಕೆ ಮುಖ ಮಾಡಿ ನಿಲ್ಲಿಸಿ (ಕೋಡುಗಳಿಗೆ ಬಂಗಾರದಿಂದಲೂ, ಖುರ (ಕೊಳಗ) ಗಳಿಗೆ ಬೆಳ್ಳಿಯಿಂದಲೂ, ಬಾಲಕ್ಕೆ ಮುತ್ತುಗಳಿಂದಲೂ ಪೃಷ್ಠಭಾಗವನ್ನು ತಾಮ್ರದಿಂದಲೂ ಅಲಂಕಾರ ಮಾಡಿರಬೇಕು.)

ಯಜಮಾನನು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ "ಮಮ ಪೂರ್ವ ಜನ್ಮನಿ ಇಹಜನ್ಮನಿ ಜನ್ಮಾಭ್ಯಾಸಾಜ್ಜನ್ಮಪ್ರಭೃತಿಯೇ ತತ್‌ಕ್ಷಣ ಪರ್ಯಂತಂ ಪೂರ್ವಜನ್ಮಕೃತ ವಿಷದ್ರವ್ಯ ಹರಣಾದಿ ದೋಷನಿವೃತ್ಯರ್ಥಂ ಶರೀರೇ ಆಯುರಾರೋಗ್ಯ ಸಿದ್ಧ್ಯರ್ಥಂ ಉಮಾ ಮಹೇಶ್ವರ ಪ್ರೀತ್ಯರ್ಥಂ ಮೇಷದಾನಂ ಕರಿಷ್ಯೇ ತದಾದೌ ಶ್ರೀ ಮಹಾಗಣಪತಿ ಪೂಜಾಂ ಕರಿಷ್ಯೇ"

ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಿ ನಂತರ ಶಿವಲಿಂಗವನ್ನು ಮತ್ತು ದೋಷ (ಮೇಕೆ) ವನ್ನು ಷೋಡಪಶೋಪಚಾರಗಳಿಂದ ಪೂಜಿಸಬೇಕು. ನಂತರ ಸದಾಚಾರಿಯಾದ ಓರ್ವ ಜಂಗಮಮೂರ್ತಿ ಅಥವಾ ಬ್ರಾಹ್ಮಣನನ್ನು ಗಂಧ, ವಸ್ತ್ರ, ಪುಷ್ಪಹಾರಾದಿಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ತನ್ನ ಶಕ್ತ್ಯಾನುಸಾರ ದಕ್ಷಿಣೆಯೊಂದಿಗೆ ತಾಂಬೂಲ ಸಹಿತವಾಗಿ ದಾನ ಕೊಡಬೇಕು.

ದಾನಮಂತ್ರ- ದೇವಾನಾಂ ಯೋಮುಖಂ ಹವ್ಯ ವಾಹನ ಸ್ಸರ್ವ ಪೂಜಿತಂ।
ತಸ್ಯತ್ವಂ ವಾಹನಂ ಪೂಜ್ಯ ದೇವೈಸ್ಸೇಂದ್ರೈ ರ್ಮಹರ್ಷಿಭಿಃ॥
ತತ್ಪ್ರದಾನೇನ ಮೇದೇವಃ ವರುಣಸ್ಸಂ ಪ್ರಸೀದತು।
ಅಸ್ಮೈ ಅಹಂಗೋಮಯಾನು ಲೇಪಿತಂ ರಂಗವಲ್ಯಾದಿರಚಿತ
ಭೂಭಾಗೋಪರಿ ಸ್ಥಿತ ಅಢಕತ್ರಯ ಪರಿಮಿತ ಮುದ್ಗರಾಶ್ಯುಪರಿ
ಸ್ಥಿತ ತಾಮ್ರಪೃಷ್ಠ ಸ್ವರ್ಣಶೃಂಗರೌಪ್ಯಖುರ ಮುಕ್ತಾಲಾಂಗೂಲ
ವಸ್ತ್ರವೇಷ್ಟಿತ ಸ್ವರ್ಚಿತಂ ಅಗ್ನಿದೇವತಾಕಂ ಮೇಷಂ ಪೂರ್ವೋಕ್ತ
ಫಲಕಾಮಸ್ತುಭ್ಯ ಮಿದಂ ಸಂಪ್ರದದೇ ನಮಮ ನಮಮ

ಈ ಪ್ರಕಾರ ಮಂತ್ರವನ್ನು ಉಚ್ಚರಿಸುತ್ತ ಶಿವಲಿಂಗ ಸಹಿತ ಮೇಷವನ್ನು ದಾನ ಮಾಡಬೇಕು.



## ಗುರುದಶಾ ಶುಕ್ರ ಭುಕ್ತಿಯಲ್ಲಿ ಶುಕ್ರ ಪ್ರೀತಿಕರ ಲಕ್ಷ್ಮೀನಾರಾಯಣ ದಾನವು

ಜನನ ಲಗ್ನ ಕುಂಡಲಿಯಲ್ಲಿ ಶುಕ್ರನು ನೀಚರಾಶಿಗಳಲ್ಲಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, 6–8–12 ಸ್ಥಾನಗಳಲ್ಲಿದ್ದರೆ, ಪರಾಜಿತನಾಗಿದ್ದರೆ, ಗುರುದಶಾ ಶುಕ್ರಭುಕ್ತಿಯಲ್ಲಿ ಪಶು ನಾಶವು, ರಾಜಕೋಪವು, ಯತ್ನಿಸಿದ ಕಾರ್ಯಗಳು ಕೆಡುವವು, ಪ್ರಾಣ ಹಾನಿಯು, ಅಪಮೃತ್ಯುಭಯವು, ರಕ್ತಸ್ರಾವ ಮೊದಲಾದ ರೋಗ ಪೀಡೆಯು ಮೊದಲಾದವುಗಳ ದೋಷ ಪರಿಹಾರಕ್ಕಾಗಿ ಚಂದ್ರದಶಾ ಬುಧ ಭುಕ್ತಿಯಲ್ಲಿ ತಿಳಿಸಿದ ಪ್ರಕಾರ ಲಕ್ಷ್ಮೀನಾರಾಯಣ ಪ್ರತಿಮಾ ದಾನ ಮಾಡುವದರಿಂದ ಶಾಂತಿಯಾಗುವದು.

(ಪುಟ 57 ನೋಡಿರಿ)



## ಗುರುದಶಾ ರವಿಭುಕ್ತಿಯಲ್ಲಿ ರವಿಪ್ರೀತಿಕರ ಛಾಗ (ಮೇಕೆ) ದಾನವು

ಜನನ ಲಗ್ನಕುಂಡಲಿಯಲ್ಲಿ ರವಿಯು 2–6–8–12 ಸ್ಥಾನಗಳಲ್ಲಿದ್ದರೆ , ಶತ್ರುರಾಶಿಗಳಲ್ಲಿದ್ದರೆ, ಗುರುದಶಾ ರವಿಭುಕ್ತಿಯಲ್ಲಿ ಆಪ್ತೇಷ್ಟರೊಡನೆ ಕಲಹವು, ಪಿತ್ತರೋಗವು, ತಾಯಿ, ತಂದೆಗಳ ವಿಯೋಗವು, ಧನನಾಶವು, ಜ್ವರ, ಅತಿಸಾರ, ಗುಲ್ಮ ಕ್ಷಯ ಮೊದಲಾದ ರೋಗ ಭಯವು. ಈ ದೋಷ ಪರಿಹಾರಕ್ಕಾಗಿ ಸೂರ್ಯ ಪ್ರಾರ್ಥನೆಯನ್ನು ಮಾಡಿ ರವಿದಶಾ ಶನಿಭುಕ್ತಿಯಲ್ಲಿ ತಿಳಿಸಿದಂತೆ (ಪುಟ 26 ನೋಡಿರಿ) ಛಾಗ (ಮೇಕೆ) ದಾನವನ್ನು ಮಾಡುವದರಿಂದ ಆರೋಗ್ಯ ಆಯುಷ್ಯ ವೃದ್ಧಿಯಾಗುವವು.



## ಗುರುದಶಾ ಚಂದ್ರಭುಕ್ತಿಯಲ್ಲಿ ಚಂದ್ರ ಪ್ರೀತಿಕರ ಛಾಗ (ಮೇಕೆ) ದಾನವು

ಜನನ ಲಗ್ನ ಕುಂಡಲಿಯಲ್ಲಿ ಚಂದ್ರನು 6–8–12 ಸ್ಥಾನಗಳಲ್ಲಿದ್ದರೆ ಕ್ಷೀಣನಾಗಿದ್ದರೆ, ಬಲಹೀನನಾಗಿದ್ದರೆ, ಪಾಪಗ್ರಹಗಳಿಂದ ಕೂಡಿದ್ದರೆ, ಗುರುದಶಾ ಚಂದ್ರಭುಕ್ತಿಯಲ್ಲಿ ಜಲಗಂಡವು, ಶೀತಜ್ವರ ಬಾಧೆಯು, ಮನಸ್ಸಿಗೆ ಖೇದವು, ಮಾನಭಂಗವು, ಅಪಮೃತ್ಯುಭಯವು. ಈ ದೋಷ ಪರಿಹಾರಕ್ಕಾಗಿ ರವಿದಶಾ ಶನಿ ಭುಕ್ತಿಯಲ್ಲಿ ಸೂಚಿಸಿದಂತೆ (ಪುಟ 26 ನೋಡಿರಿ) ಛಾಗ (ಮೇಕೆ) ದಾನ ಮಾಡುವದರಿಂದ ಕ್ಷೇಮವಾಗುವದು.

## ಗುರುದಶಾ ಕುಜಭುಕ್ತಿಯಲ್ಲಿ ಕುಜ ಪ್ರೀತಿಕರ ಸುವರ್ಣ ದಾನವು

ಜನನ ಲಗ್ನಕುಂಡಲಿಯಲ್ಲಿ ಕುಜನು ನೀಚ ಸ್ಥಾನದಲ್ಲಿದ್ದರೆ, 6–8–12 ಸ್ಥಾನಗಳಲ್ಲಿದ್ದರೆ 2–7ನೆಯ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ, ಗುರುದಶಾ ಕುಜಭುಕ್ತಿಯಲ್ಲಿ ಗ್ರಹಿಣಿ ರೋಗ ಭಯವು, ಹುಣ್ಣು ಪಿತ್ತ ಗುಲ್ಮರೋಗ ಪೀಡೆಯು. ಎತ್ತರದ ಸ್ಥಳದಿಂದ ಬೀಳುವಿಕೆಯು. ಮೃತ್ಯುಭಯವು ಈ ದೋಷ ಪರಿಹಾರಕ್ಕಾಗಿ ರವಿದಶಾ ಗುರುಭುಕ್ತಿಯಲ್ಲಿ ತಿಳಿಸಿದಂತೆ (ಪುಟ 25 ನೋಡಿರಿ) ಸುವರ್ಣದಾನ ಮಾಡುವದರಿಂದ ದೋಷ ಪರಿಹಾರವಾಗುವದು.



## ಗುರುದಶಾ ರಾಹು ಭುಕ್ತಿಯಲ್ಲಿ ರಾಹು ಪ್ರೀತಿಕರ ಮಾಹಿಷ (ಕೋಣ) ದಾನವು

ಜನನ ಲಗ್ನ ಕುಂಡಲಿಯಲ್ಲಿ ರಾಹು 2–5–9 ನೆಯ ಸ್ಥಾನಾಧಿಪಗಳೊಡನೆ ಕೂಡಿದ್ದರೆ, ನೀಚ ರಾಶಿ, ಶತ್ರುರಾಶಿಗಳಲ್ಲಿದ್ದರೆ, 3–6–12 ರಾಶಿಗಳಲ್ಲಿದ್ದರೆ ಗುರುದಶಾ ರಾಹುಭುಕ್ತಿಯಲ್ಲಿ ಹೊಲ, ಮನೆ, ಆಸ್ತಿನಾಶವು, ಕಲಹವು, ರಾಜ ವಿರೋಧವು, ಭೂತ ಪಿಶಾಚಗಳ ಭಯವು; ಅಪಸ್ಮಾರ ಆದಿ ರೋಗ ಪೀಡೆಯು, ಅಪಮೃತ್ಯು ಭಯವು. ಈ ದೋಷ ಪರಿಹಾರಕ್ಕಾಗಿ ಮಾಹಿಷ (ಕೋಣ) ದಾನ ಮಾಡಬೇಕು.

ಕೃಷ್ಣಪಕ್ಷದ ಅಷ್ಟಮಿ, ಚತುರ್ದಶಿ ಅಮವಾಸಿ ತಿಥಿಗಳಲ್ಲಿ ವ್ಯತಿಪಾತ, ವೈಧೃತಿ ಯೋಗಗಳಲ್ಲಿ ಅಥವಾ ಕಷ್ಟದ ದಿವಸಗಳಲ್ಲಿ ಮನೆಯ ಪವಿತ್ರ ಸ್ಥಳವನ್ನು ಗೋಮಯದಿಂದ ಸಾರಿಸಿ, ರಂಗವಲ್ಯಾದಿಗಳಿಂದ ಅಲಂಕರಿಸಿದ ಭೂಭಾಗದೊಳು ಸಮಸ್ತ ಅವಯವಗಳು ಪೂರ್ಣವಾಗಿ ಇರುವ ಕರಿಯ ಕೋಣವನ್ನು ತಂದು ಅದನ್ನು ದಕ್ಷಿಣಕ್ಕೆ ಮುಖ ಮಾಡಿ ನಿಲ್ಲಿಸಿ ಅದರ ಬಲಗಡೆಯ ಮುಂಗಾಲಿನ ಹತ್ತಿರ ಕರಿಯ ಎಳ್ಳು ಧಾನ್ಯದ ಗುಂಪೆ, ಎಡಗಡೆ ಮುಂಗಾಲಿನ ಹತ್ತಿರ ಉದ್ದು ಧಾನ್ಯದ ಗುಂಪೆ, ಬಲಗಡೆ ಹಿಂಗಾಲಿನ ಹತ್ತಿರ ಹೆಸರು ಧಾನ್ಯದ ಗುಂಪೆ, ಎಡಗಡೆ ಹಿಂಗಾಲಿನ ಹತ್ತಿರ ಕಡಲೆ ಧಾನ್ಯದ ಗುಂಪೆಗಳನ್ನು ಹಾಕಿ ಆ ಕೋಣವನ್ನು ಭಸ್ಮ ಗಂಧ, ಕೆಂಪು ವಸ್ತ್ರ, ಕೆಂಪು ಕಣಗಿಲ ಹೂವು, ಧೂಪ ದೀಪಾದಿಗಳಿಂದ ಪೂಜಿಸಿ.

ಒಂದು ಕಂಚಿನ ಪಾತ್ರೆಯಲ್ಲಿ ಕರಿಯ ಎಳ್ಳು ತುಂಬಿ ಅದರ ಮೇಲೆ ನೀಲಿ ಬಣ್ಣದ ವಸ್ತ್ರವನ್ನು ಹಾಸಿ ಅದರ ಮೇಲೆ ಎರಡು ವೀಳ್ಯದೆಲೆಗಳನ್ನು ಇಟ್ಟು ಅದರ ಮೇಲೆ

ಬಂಗಾರದ ಯಮದೇವನ ಮೂರ್ತಿಯನ್ನು ಇಟ್ಟು (ಯಮದೇವನ ಮೂರ್ತಿಯು ಬಲ ಕೈಯಲ್ಲಿ ದಂಡವನ್ನು, ಎಡ ಕೈಯಲ್ಲಿ ಪಾಶ (ಹಗ್ಗ)ವನ್ನು ಧರಿಸಿಕೊಂಡು ಕೆಂಪಾದ ಕಣ್ಣುಗಳು, ಭಯಂಕರ ರೂಪ, ನೀಲವಸ್ತ್ರವನ್ನು ಧರಿಸಿದ ಸೂಲದ ಹಲ್ಲುಗಳು ಕಾಣುವಂತಿದ್ದು ಹಿಂಭಾಗಕ್ಕೆ ಜಡೆ ಬಿಟ್ಟಿರಬೇಕು. ಈ ಪ್ರಕಾರ ಇರುವ ಯಮದೇವನ ಮೂರ್ತಿಯನ್ನು)

"ಇಮಂ ಯಮಪ್ರಸ್ತರ ಮಾಹಿಸೀದಾಂಗಿರೋಭಿಃ ಪಿತೃಭಿಃ ಸಂವಿಧಾನಃ।
ಆತ್ವಾಮಂತ್ರಾಃ ಕವಿಶಸ್ತ್ವಾ ವಹಂ ತ್ವೇ ನಾರಾ ಜನ್ನ ವಿಷಾಮಾದಯಸ್ವ॥
ಎಂದು ಧ್ಯಾನಿಸಿ,

ಓಂ ಭೂಃ ಯಮದೇವ ಮಾವಾಹಯಾಮಿ, ಓಂ ಭುವಃ ಯಮದೇವ ಮಾವಾಹಯಾಮಿ ಓಂ ಗ್ಂ ಸುವಃ ಯಮದೇವ ಮಾವಾಹಯಾಮಿ, ಓಂ ಭೂರ್ಭುವಸ್ಸುವಃ ಯಮದೇವ ಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ.

ಎಂದು ಯಮದೇವನ ಮೂರ್ತಿಯ ಮೇಲೆ ಅಕ್ಷತೆಗಳನ್ನು ಹಾಕಿ ಯಮದೇವನನ್ನು ಆವಾಹನೆ ಮಾಡಬೇಕು. ನಂತರ,

ಓಂ ಭೂರ್ಭುವಃ ಸ್ವರೋಂ ಸಶಕ್ತಿಸಾಂಗಸಾಯುಧ ಸವಾಹನ ಸಪರಿವಾರ ಓಂ ಯಮದೇವ ಅತ್ರಾಗಚ್ಛಾಗಚ್ಛ। ಆವಾಹಯಾಮಿ। ಆವಾಹಿಶೋ ಭವ। ಸ್ಥಾಪಯಾಮಿ, ಸ್ಥಾಪಿತೋಭವ। ಸನ್ನಿಹಿತೋಭವ। ಸಮ್ಮುಖೋಭವ। ಅವಕುಂಠಿತೋಭವ। ವರದೋ ಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ,

ಧ್ಯಾನಂ- ಸುವರ್ಣೇನ ಸುರೂಪೇಣ ದ್ವಿಭುಜಂ ದಂಡಪಾಣಿನಂ।
ವಾಮಹಸ್ತೇ ಕುಶಾರಂಚ ರಕ್ತಾಕ್ಷಂ ಘೋರ ರೂಪಿಣಂ।
ನೀಲವಸ್ತ್ರಾವೃತಂ ಸಾಕ್ಷಾತ್ತುಸ್ಸದಂಷ್ಟ್ರಂ ಮುಕ್ತ ಕೇಶಿನಂ।
ನಮಸ್ತೇ ಧರ್ಮ ರಾಜಾಯ ನಮೋ ವೈವಸ್ವತಾಯಚ।
ನಮಸ್ತೇ ಯಮದೇವಾಯ ನಮಸ್ತೇ ಕಾಲಕಾಲ ರೂಪಿಣೇ॥

ಎಂದು ಧ್ಯಾನಿಸಿ

"ಓಂ ಯಮದೇವಾಯ ನಮಃ ಧ್ಯಾಯಾಮಿಧ್ಯಾನಂ ಸಮರ್ಪಯಾಮಿ" ಎಂದು ನಮಸ್ಕರಿಸಿ "ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ" ಎಂದು ಆಸನವನ್ನು ಮುಟ್ಟಿ "ಪಾದಯೋಃ ಪಾದ್ಯಂಪಾದ್ಯಂ ಸಮರ್ಪಯಾಮಿ" ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ "ಹಸ್ತಯೋಃ ಅರ್ಘ್ಯಮರ್ಘ್ಯಂ

ಸಮರ್ಪಯಾಮಿ'' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ ''ಮುಖೇ ಆಚಮನೀಯಂ ಸಮರ್ಪಯಾಮಿ ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು ಮತ್ತು ಯಮದೇವನನ್ನು ಕೆಂಪು ಗಂಧ, ಕೆಂಪು ಅಕ್ಷತೆ, ಕೆಂಪು ಕಣಗಿಲ ಹೂ, ಧೂಪ, ದೀಪಗಳಿಂದ ಪೂಜಿಸಿ ಎಳ್ಳು ಮಿಶ್ರಮಾಡಿದ ಮೊಸರು ಅನ್ನವನ್ನು ನೈವೇದ್ಯಮಾಡಿ ಪೂಜಾ ಸಮಾಪ್ತಿಗೊಳಿಸಬೇಕು.

ನಂತರ ಓರ್ವ ಬ್ರಾಹ್ಮಣನನ್ನು ಅಥವಾ ಜಂಗಮ ಮೂರ್ತಿಯನ್ನು ದಕ್ಷಿಣಕ್ಕೆ ಮುಖ ಮಾಡಿ ಕೂಡ್ರಿಸಿ ಯಜಮಾನನು ಪೂರ್ವಾಭಿಮುಖವಾಗಿ ನಿಂತುಕೊಂಡು ಆತನನ್ನು ಕೆಂಪು ವಸ್ತ್ರ, ಕೆಂಪು ಗಂಧ, ಕೆಂಪು ಅಕ್ಷತೆ ಪುಷ್ಪ ಹಾರಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಕೋಣ, ಎಳ್ಳಿನ ಪಾತ್ರೆ, ಎಲ್ಲ ಧಾನ್ಯಗಳು, ಯಮನ ಪ್ರತಿಮೆಗಳನ್ನು ದಕ್ಷಿಣೆ ಸಹಿತವಾಗಿ ದಾನಕೊಡಬೇಕು.

ಮಂತ್ರ- ಸ್ವರ್ಣರೌಪ್ಯಖುರ ಶೃಂಗಸಂ ಯುತಂ ಧಾನ್ಯರಾಶಿ ಸಹಿತಂಚ ಸನ್ನಿಭಂ।
ಕೌಂಸ್ಯಪಾತ್ರ ತಿಲಪೂರ್ಣಗಂ ಯಮಂ ಸರ್ವಲಕ್ಷಣಯುತಂ ದದಾಮ್ಯಹಂ॥
ಮೃತ್ಯುರೋಗ ಭಯಭೀತಿ ಸಂಕಟಾದ್ದುರ್ಗ್ರಹ ಸ್ಥಿತಿ ಭಯಾದಿದೋಷತಃ।
ತ್ರಾಹಿಮಾಂ ಸಕಲ ಸಂಪದಂ ತಥಾ ಪುಷ್ಟಿಕೀರ್ತಿ ಮತುಲಾಂ ಪ್ರಯಚ್ಛಮೇ॥

ಈ ಮಂತ್ರವನ್ನು ಮೂರುಸಾರೆ ಉಚ್ಚರಿಸಿ ಶಕ್ತ್ಯಾನುಸಾರ ದಕ್ಷಿಣೆ, ತಾಂಬೂಲ ಸಹಿತವಾಗಿ ದಾನ ಕೊಡಬೇಕು. ನಂತರ ಮಂಗಳ ವಾಕ್ಯಗಳನ್ನು ಉಚ್ಚರಿಸಬೇಕು.

| <u>ಯಜಮಾನನ ವಾಕ್ಯಗಳು</u> | <u>ವಿಪ್ರನ ಅಥವಾ ಜಂಗಮ ಮೂರ್ತಿಯ ವಾಕ್ಯಗಳು</u> |
|---|---|
| ಮನಃ ಸಮಾಧೀಯತಾಂ | ಸಮಾಹಿತ ಮನಸಃಸ್ಮಃ |
| ಪ್ರಸೀದಂತು ಭವಂತಃ | ಪ್ರಸನ್ನಾಸ್ಮಃ |

ಈ ಪ್ರಕಾರ ಉಚ್ಚರಿಸಿದ ನಂತರ ವಿಪ್ರನು ಅಥವಾ ಜಂಗಮಮೂರ್ತಿಯು,

''ಶಾಂತಿ ರಸ್ತು ಪುಷ್ಟಿ ರಸ್ತು ತುಷ್ಟಿ ರಸ್ತು ವೃದ್ಧಿರಸ್ತು ಅವಿಘ್ನಮಸ್ತು ಆಯುಷ್ಯಮಸ್ತು ಆರೋಗ್ಯಮಸ್ತು ಸ್ವಸ್ತಿ ಶಿವಂ ಕರ್ಮಾಸ್ತು ಕರ್ಮಸಮೃದ್ಧಿ ರಸ್ತು ಧರ್ಮಸಮೃದ್ಧಿರಸ್ತು ಪುತ್ರಸಮೃದ್ಧಿರಸ್ತು ಇಷ್ಟ ಸಂಪದಸ್ತುಎಂದು ಹೇಳಬೇಕು.

''ಸ್ವಯಂ ಕರ್ಮದೇವತಾತ್ಮಕೋ ಭಗವಾನ್ ಯಮದೇವಃಪ್ರೀಯತಾಂ'' ಎಂದು ಕರ್ತೃವು ಹೇಳಲು ಮಹೇಶ್ವರನು ''ಪ್ರೀಯತಾಂ ಭಗವಾನ್ ಕರ್ಮ ದೇವತಾತ್ಮಕಃ ಯಮದೇವಃ'' ಎಂದು ಹೇಳಬೇಕು. ಪುಣ್ಯಾಹಂ ವಾಚಯಿಷ್ಯೇऽಹಂ'' ಎಂದು ಕರ್ತೃವು ಹೇಳಲು ಮಹೇಶ್ವರನು ''ವಾಚ್ಯತಾಂ'' ಎಂದು ಉಚ್ಚರಿಸುವದು.

ಯಜಮಾನನ ವಾಕ್ಯ

ಓಂ ಸ್ವಸ್ತಿ ಮಾಹಿಷ ದಾನ
ಯಮದೇವ ಪ್ರತಿಮಾ
ದಾನಕರ್ಮಣೇ ಭವಂತೋಬ್ರುವಂತು

ವಿಪ್ರ ಅಥವಾ ಜಂಗಮ ಮೂರ್ತಿಯ ವಾಕ್ಯ

ಮಾಹಿಷದಾನ ಯಮದೇವ
ಪ್ರತಿಮಾ ದಾನ ಕರ್ಮಣೇ
ಓಂ ಸ್ವಸ್ತಿ

ಈ ವಾಕ್ಯಗಳನ್ನು ಗಂಭೀರ, ಮಧ್ಯ, ಉಚ್ಚ ಸ್ವರಗಳಿಂದ ಪರಸ್ಪರರು ಉಚ್ಚರಿಸಿದ ಬಳಿಕ,

"ಮಾಹಿಷದಾನ ಯಮದೇವ ಪ್ರತಿಮಾ
ದಾನ ಕರ್ಮಣೇ ಋದ್ಧಿಂ ಭವಂತೋಬ್ರುವಂತು"

ಎಂದು ಗಂಭೀರ, ಮಧ್ಯ, ಉಚ್ಚ ಸ್ವರಗಳಿಂದ ಯಜಮಾನನು ಅನ್ನಬೇಕು.

"ಓಂ ಋದ್ಧ್ಯತಾಂ" ಎಂದು ಗಂಭೀರ, ಮಧ್ಯ, ಉಚ್ಚ ಸ್ವರಗಳಿಂದ ವಿಪ್ರನು ಅಥವಾ ಜಂಗಮ ಮೂರ್ತಿಯು ಉಚ್ಚರಿಸಬೇಕು ಮತ್ತು ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ಶುಭಮಸ್ತು ಭಗವಾನ್ ಯಮದೇವತಾಚ ರಾಹು ಗ್ರಹದೇವತಾ ಪ್ರೀಯತಾಂ ಹೀಗೆ ಮಂಗಳಕರವಾದ ವಾಕ್ಯಗಳನ್ನು ಉಚ್ಚರಿಸುವದರಿಂದ ಕ್ಷೇಮವಾಗುವದು ಎಂಬುದಾಗಿ ಯಾಮಳದಲ್ಲಿ ಉಕ್ತವಾಗಿದೆ.



## ಶನಿದಶೆಯಲ್ಲಿ ಶನಿ ಪ್ರೀತಿಕರ ಸ್ವರ್ಣಯುಕ್ತ ಅಯಃಪಾತ್ರ (ಕಬ್ಬಿಣ ಪಾತ್ರೆ) ದಾನವು

ಜನನ ಲಗ್ನ ಕುಂಡಲಿಯಲ್ಲಿ ಶನಿಯು ಅರಿಷ್ಟ ಸ್ಥಾನಗಳಲ್ಲಿದ್ದು ಬಲಹೀನನಾಗಿದ್ದರೆ ಶನಿದಶೆಯಲ್ಲಿ ರೋಗಪೀಡೆಯು, ಮೃತ್ಯುಭಯವು, ಧನಹಾನಿಯು ಮಾನಹಾನಿಯು ಬಂಧುಗಳಿಗೆ ಪೀಡೆಯು, ಭೂಮಿನಾಶವು, ಕಲಹವು, ಉದ್ಯೋಗ ಹಾನಿಯು, ಹೆಂಡತಿ ಮಕ್ಕಳಿಂದ ವಿಯೋಗವು, ರಾಜ್ಯನಾಶವು, ಹೊಲ–ಮನೆ, ಆಸ್ತಿ ನಾಶವು, ಪಶು ಹಾನಿಯು, ಬಲಾಢ್ಯ ಜನರೊಡನೆ ವೈರವು ಹಾಗೂ ಅನೇಕ ರೀತಿಯ ಪೀಡೆಗಳು. ಈ ದೋಷ ಪರಿಹಾರಕ್ಕಾಗಿ ಕಬ್ಬಿಣ ಪಾತ್ರೆ, ಬಂಗಾರದ ಶನಿ ಪ್ರತಿಮೆಗಳನ್ನು ದಾನ ಮಾಡುವದರಿಂದ ಕ್ಷೇಮವಾಗುವದೆಂದು ಯಾಮಳದಲ್ಲಿ ಉಲ್ಲೇಖವಾಗಿದೆ.

ಜನ್ಮನಕ್ಷತ್ರದ ದಿವಸ, ಶನಿವಾರಗಳಲ್ಲಿ ದೇವಸ್ಥಾನ, ನದಿಯ ದಂಡೆ ಅಥವಾ ಸ್ವಗೃಹದಲ್ಲಿ ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಪವಿತ್ರ

ಸ್ಥಳದಲ್ಲಿ ಉದ್ದಿನ ರಾಶಿಯನ್ನು ಹಾಕಿ ಅದರ ಮೇಲೆ ಧನಸ್ಸು ಆಕಾರದ ಕಬ್ಬಿಣದ ಪಾತ್ರೆಯನ್ನು ಇಟ್ಟು ಅದರ ಮೇಲೆ ನೀಲಿ ವಸ್ತ್ರವನ್ನು ಹಾಸಿ ಅದರಲ್ಲಿ ಬಂಗಾರದ ಶನಿ ಪ್ರತಿಮೆಯನ್ನು ಇಟ್ಟು,

ಧ್ಯಾನಂ- ಇಂದ್ರನೀಲ ದ್ಯುತಿಶ್ಶೂಲೀ ವರದೋ ಗೃಧ್ರವಾಹನಃ।
ಚಾಪಬಾಣ ಧರಸ್ಯಗ್ವಿ ಧ್ಯೇಯೋರ್ಕತನಯಸ್ಸದಾ ॥

ಎಂದು ಶನಿದೇವನನ್ನು ಧ್ಯಾನಿಸಿ ನಂತರ,

ಓಂ ಭೂಃ ಶನಿದೇವ ಮಾವಾಹಯಾಮಿ । ಓಂ ಭುವಃ ಶನಿದೇವ ಮಾವಾಹಯಾಮಿ। ಓಂ ಸುವಃ ಶನಿದೇವ ಮಾವಾಹಯಾಮಿ। ಓಂ ಭೂರ್ಭುವಃಸ್ವಃ ಶನಿದೇವ ಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಎಂದು ಶನಿ ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು. ನಂತರ,

ಓಂ ಭೂರ್ಭುವಃಸ್ವರೋಂ ಸಶಕ್ತಿ ಸಾಂಗ ಸಾಯುಧ ಸವಾಹನ ಸಪರಿವಾರ ಓಂ ಶನಿದೇವ ಅತ್ರಾಗಚ್ಛಾಗಚ್ಛ। ಆವಾಹಯಾಮಿ। ಆವಾಹಿತೋಭವ। ಸ್ಥಾಪಯಾಮಿ ಸ್ಥಾಪಿತೋಭವ । ಸನ್ನಿಹಿತೋಭವ । ಸಮ್ಮುಖೋಭವ । ಅವಕುಂಠಿತೋಭವ । ವರದೋಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ

''ಓಂ ಶನಿದೇವಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ'' ಎಂದು ನಮಸ್ಕರಿಸಿ ''ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ'' ಎಂದು ಆಸನವನ್ನು ಮುಟ್ಟಿ ''ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ'' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ 'ಹಸ್ತಯೋಃಅರ್ಘ್ಯ ಮರ್ಘ್ಯಂ ಸಮರ್ಪಯಾಮಿ'' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ ''ಮುಖೇ ಆಚಮನೀಯಂ ಸಮರ್ಪಯಾಮಿ'' ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಿ

''ಶ್ರೀ ಶನೈಶ್ಚರಾಯ ನಮಃ'' ಈ ಮಂತ್ರದಿಂದ ನೀಲಿ ಗಂಧ, ನೀಲಿ ಅಕ್ಷತೆ, ಬನ್ನಿಪತ್ರಿ, ನೀಲಿ ಪುಷ್ಪಗಳಿಂದ ಪೂಜಿಸಿ ಆ ಕಬ್ಬಿಣ ಪಾತ್ರೆಯಲ್ಲಿ ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಶನಿದೇವನ ಒಂದೊಂದು ನಾಮ (ಹೆಸರು)ವನ್ನು ಉಚ್ಚರಿಸುತ್ತ ಪೂಜೆ ಮಾಡಬೇಕು.

| ನಾಮಗಳು | ದಿಕ್ಕು | ನಾಮಗಳು | ದಿಕ್ಕು |
|---|---|---|---|
| ಕೋಣಾಯ ನಮಃ | ಪೂರ್ವ | ಹೃದಯನಂದನಾಯ ನಮಃ | ಪಶ್ಚಿಮ |
| ಶನೈಶ್ಚರಾಯ ನಮಃ | ಆಗ್ನೇಯ | ಮಾರ್ತಾಂಡಜಾಯ ನಮಃ | ವಾಯವ್ಯ |
| ಮಂದಾಯ ನಮಃ | ದಕ್ಷಿಣ | ಸೌರಯೇ ನಮಃ | ಉತ್ತರ |
| ಛಾಯಾಯ ನಮಃ | ನೈಋತ್ಯ | ಪಾತಂಗೀ ಗೃಹಾಯ ನಮಃ | ಈಶಾನ್ಯ |

ಈ ಒಂದೊಂದು ನಾಮವನ್ನು ಉಚ್ಚರಿಸುತ್ತ ಒಂದೊಂದು ದಿಕ್ಕಿನಲ್ಲಿ ಗಂಧ, ಅಕ್ಷತೆ, ಪತ್ರಿ ಪುಷ್ಪಗಳಿಂದ ಪೂಜಿಸಿ,

ನಂತರ ಧೂಪ, ದೀಪಾದಿಗಳಿಂದ ಬೆಳಗಿ ಮೊಸರು, ಉದ್ದು ಸಹಿತ ಅಕ್ಕಿಯ ಅನ್ನವನ್ನು ನೈವೇದ್ಯ ಮಾಡಿ ತಾಂಬೂಲ, ದಕ್ಷಿಣಾದಿಗಳನ್ನು ಸಮರ್ಪಿಸಿ ಪೂಜೆಯನ್ನು ಸಮಾಪ್ತಿಗೊಳಿಸಬೇಕು.

ಬಳಿಕ ಓರ್ವ ವಿಪ್ರ ಅಥವಾ ಜಂಗಮ ಮೂರ್ತಿಯನ್ನು ನೀಲಿ ವಸ್ತ್ರ, ನೀಲಿ ಗಂಧ, ಅಕ್ಷತೆ, ಪತ್ರಿ, ಪುಷ್ಪಹಾರಾದಿಗಳಿಂದ ಸತ್ಕರಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಕಬ್ಬಿಣದ ಪಾತ್ರೆ, ಶನಿ ಪ್ರತಿಮೆ ಮತ್ತು ಧಾನ್ಯಾದಿಗಳನ್ನು ಶಕ್ತ್ಯಾನುಸಾರ ದಕ್ಷಿಣೆ ಸಹಿತ ದಾನಕೊಡಬೇಕು.

ದಾನಮಂತ್ರ- ಸ್ವರ್ಣಾಯಸೇನ ನಿರ್ಧಿಷ್ಟಂ ಮಾಷರಾಶ್ಯು ಪರಿಸ್ಥಿತಂ.
ಕೃಷ್ಣವಸ್ತ್ರಾವೃತಂ ಸೂರ್ಯಪುತ್ರಾಕಾರಂ ದದಾಮ್ಯಹಂ॥

ಎಂದು ಉಚ್ಚರಿಸಿ ದಾನ ಕೊಟ್ಟ ಬಳಿಕ ದಕ್ಷಿಣೆಯ ಬದಲು ಕರಿಯ ಬಣ್ಣದ ಆಕಳನ್ನಾದರೂ ದಾನ ಕೊಡಬಹುದು. ನಂತರ ಶಾಂತಿ ಸೂಕ್ತ (ಆ ನೋಭದ್ರಾಇತಿ)ವನ್ನು ಪಠಿಸುವದರಿಂದ ಶನಿಯ ದೋಷದಿಂದ ಮುಕ್ತನಾಗಿ ಸುಖ ಜೀವಿಯಾಗುವನು.



## ಶನಿದಶಾ ಶನಿಭುಕ್ತಿಯಲ್ಲಿ ಶನಿ ಪ್ರೀತಿಕರ ತಿಲ (ಎಳ್ಳು) ದಾನವು

ಜನನ ಲಗ್ನಕುಂಡಲಿಯಲ್ಲಿ ಶನಿಯು 6–8–12 ಸ್ಥಾನಗಳಲ್ಲಿದ್ದರೆ, ಶತ್ರುರಾಶಿಗಳಲ್ಲಿದ್ದರೆ, 2–7 ಸ್ಥಾನಗಳಲ್ಲಿದ್ದರೆ, ನೀಚ ರಾಶಿಗಳಲ್ಲಿದ್ದರೆ, ಪಾಪಗ್ರಹಗಳಿಂದ ನಿರೀಕ್ಷಿಸಲ್ಪಟ್ಟರೆ, ಶನಿದಶಾ ಶನಿಭುಕ್ತಿಯಲ್ಲಿ ವಾತಜ್ವರ ಭಯವು, ಕಾರ್ಯ ನಷ್ಟವು, ಧನಹಾನಿಯು, ಆಸ್ತಿ ನಷ್ಟವು, ಶತ್ರುಗಳ ಉಪದ್ರವವು, ಅಪಮೃತ್ಯು ಭಯವು. ಈ ದೋಷ ಪರಿಹಾರಕ್ಕಾಗಿ ತಿಲ ದಾನವನ್ನು ಮಾಡಬೇಕು ಎಂಬುದಾಗಿ ಹೇಮಾದ್ರಿಯಲ್ಲಿ ಉಲ್ಲೇಖವಾಗಿದೆ.

ಗ್ರಹಣಾದಿ ಪುಣ್ಯಕಾಲಗಳಲ್ಲಿ ಅಥವಾ ಉಪದ್ರವ ಕಾಲದಲ್ಲಿ ದೇವಸ್ಥಾನ ಮೊದಲಾದ ಪವಿತ್ರ ಸ್ಥಳದಲ್ಲಿ ಗೋಮಯದಿಂದ ಸಾರಿಸಿ, ರಂಗವಲ್ಯಾದಿಗಳಿಂದ ಅಲಂಕರಿಸಿದ ಭೂಭಾಗದಲ್ಲಿ ದರ್ಭೆಯನ್ನು ಹರವಿ ಅದರ ಮೇಲೆ ನೀಲಿ ಬಣ್ಣದ ವಸ್ತ್ರವನ್ನು ಹಾಸಿ ಅದರ ಮೇಲೆ ಕರೇ ಎಳ್ಳಿನ ರಾಶಿಯನ್ನು ಹಾಕಿ ನೀಲಿ ಬಣ್ಣದ ವಸ್ತ್ರವನ್ನು ಹಾಸಿ ಅದರ ಮೇಲೆ ಕರೇ ಎಳ್ಳಿನ ರಾಶಿಯನ್ನು ಹಾಕಿ ಅದರ ಮೇಲೆ ಕರಿಯ ಎಳ್ಳಿನ ಹಿಟ್ಟಿನಿಂದ 32 ಅಂಗುಲ ಉದ್ದವಾದ ಪುರುಷಾಕಾರ ಗೊಂಬೆಯನ್ನು ಕುಳ್ಳಿರಿಸಿ ಮತ್ತೊಂದು 8 ಅಂಗುಲ ಚಚ್ಚೌಕಾದ ಎಳ್ಳಿನ ಗುಂಪೆಯನ್ನು ರಚಿಸಿ ಅದರ ಮೇಲೆ ಹಳದಿ ಬಣ್ಣದ ರೇಶಿಮೆ ವಸ್ತ್ರವನ್ನು ಹಾಸಿ ಅದರ ಮೇಲೆ ಬಂಗಾರದ ವಿಷ್ಣುಪ್ರತಿಮೆಯನ್ನು ಸ್ಥಾಪಿಸಬೇಕು. ಆ ವಿಷ್ಣುಪ್ರತಿಮೆಯಲ್ಲಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಕ್ರಮವಾಗಿ ಹಾಲು, ಮೊಸರು, ತುಪ್ಪ, ಸುಗಂಧ ತೈಲಗಳಿಂದ ತುಂಬಿದ ನಾಲ್ಕು ಕುಂಭಗಳನ್ನು ಇಟ್ಟು ಆ ಕುಂಭಗಳಿಗೆ ವಸ್ತ್ರಗಳನ್ನು ಹೊದಿಸಿ,

ಯಜಮಾನನು ಭದ್ರಾಸನದ ಮೇಲೆ ಪೂರ್ವ ಅಥವಾ ಉತ್ತರಾಭಿಮುಖವಾಗಿ ಕುಳಿತುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಾದಿಗಳನ್ನು ಉಚ್ಚರಿಸಿ ಸಂಕಲ್ಪ ಮಾಡಬೇಕು.

"ಮಮ ಇಹಜನ್ಮನಿ ಜನ್ಮಾಂತರೇಷು ಕಾಮತೋ ಕಾಮತಶ್ಚ ಕೃತ ಸಕಲ ಪಾಪಕ್ಷಯ ದ್ವಾರಾಸರ್ವಮಂಗಳಾ ವಾಪ್ತ್ಯರ್ಥಂ ಇಹ ಆರೋಗ್ಯದೃಢತಯಾ ಶತವರ್ಷ ಜೀವಿತ್ವ ಸಿದ್ಧ್ಯರ್ಥಂ ಅಪಮೃತ್ಯು ನಿವಾರಣಾರ್ಥಂ ಶ್ರೀ ಮಾಧವ ಪ್ರೀತ್ಯರ್ಥಂ ಯಮಪ್ರೋಕ್ತ ತಿಲರಾಶಿದಾನಂ ಕರಿಷ್ಯೇ "ತದಾದೌ ಮಹಾ ಗಣಪತಿ ಪೂಜಾಂ ಕರಿಷ್ಯೇ" ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಿದ ಬಳಿಕ ಮಾಧವ (ವಿಷ್ಣು) ಪೂಜೆಯನ್ನು ಮಾಡಬೇಕು.

ಧ್ಯಾನಂ– ಆರಭ್ಯವಾ ಮೋರ್ಧ್ವಕರಾದಪ ಸವ್ಯಕ್ರಮೇಣ ತು।
ಶಂಖಚಕ್ರೇಗದಾ ಪದ್ಮೇ ದಧಾನೋ ಮಾಧವೋಚ್ಯುತಃ॥

ಈ ಪ್ರಕಾರ ಮಾಧವನನ್ನು ಸ್ಮರಿಸಿ ನಂತರ,

ಓಂ ಭೂಃ ಮಾಧವ ಮಾವಾಹಯಾಮಿ । ಓಂ ಭುವಃ ಮಾಧವ ಮಾವಾಹಯಾಮಿ॥ ಓಂ ಸುವಃ ಮಾಧವಮಾವಾಹಯಾಮಿ । ಓಂ ಭೂರ್ಭುವಃ ಸ್ವಃ ಮಾಧವಮಾವಾಹಯಾಮಿ । ಸ್ಥಾಪಯಾಮಿ । ಪೂಜಯಾಮಿ॥

ಎಂದು ಮಾಧವ ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು. ನಂತರ ಓಂ ಭೂರ್ಭುವಃ ಸ್ವರೋಂ ಸಶಕ್ತಿ ಸಾಂಗಸಾಯುಧ ಸವಾಹನ ಸಪರಿವಾರ ಓಂ ಮಾಧವ

ಅತ್ರಾಗಚ್ಛಾಗಚ್ಛ। ಆವಾಹಯಾಮಿ ಆವಾಹಿತೋಭವ। ಸ್ಥಾಪಯಾಮಿ ಸ್ಥಾಪಿತೋಭವ ಸನ್ನಿಹಿತೋಭವ। ಸಮ್ಮುಖೋಭವ। ಅವಕುಂಠಿತೋಭವ। ವರದೋಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ,

"ಓಂ ಮಾಧವಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ" ಎಂದು ನಮಸ್ಕರಿಸಿ "ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ" ಎಂದು ಆಸನವನ್ನು ಮುಟ್ಟಿ "ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ" ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ "ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ" ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ "ಮುಖೇ ಆಚಮನೀಯಂ ಸಮರ್ಪಯಾಮಿ" ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು. ನಂತರ "ಓಂ ಮಾಧವಾಯ ನಮಃ" ಈ ಮಂತ್ರದಿಂದ ಗಂಧ, ಅಕ್ಷತೆ, ಪತ್ರಿ, ಪುಷ್ಪ, ಧೂಪ, ದೀಪಾದಿ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ನಂತರ ಪುರುಷಾಕಾರ ಗೊಂಬೆಯನ್ನು ಮತ್ತು ಎಳ್ಳಿನ ರಾಶಿಯನ್ನು ಪೂಜಿಸಬೇಕು. ಆಮೇಲೆ ವೇದ ಶಾಸ್ತ್ರ ಪಾರಂಗತನೂ, ಸುಶೀಲನೂ ಆದ ವಿಪ್ರನನ್ನು ಕರ್ಣಾಭರಣ, ಉಂಗುರ, ವಸ್ತ್ರ ಮೊದಲಾದವುಗಳಿಂದ ಪೂಜಿಸಿ ಸತ್ಕರಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಎಳ್ಳಿನ ಗೊಂಬೆಯನ್ನು, ಪುರುಷಾಕಾರ ಮೂರ್ತಿಯನ್ನು, ಮಾಧವ ಪ್ರತಿಮೆಯನ್ನು ಹಾಲು, ಮೊಸರು, ತುಪ್ಪ, ಸುಗಂಧ ತೈಲಗಳ ಕುಂಭಗಳನ್ನು ದಕ್ಷಿಣೆ ಸಹಿತವಾಗಿ ದಾನ ಕೊಡಬೇಕು.

ದಾನಮಂತ್ರ- ಅಜ್ಞಾನಾದ್ಯದಿ ವಾಲೋಭಾನ್ಮೋಹಾದ್ವಾ ಜನ್ಮ ಜನ್ಮನಿ॥
ಅರ್ಚಿತಂ ಯನ್ಮಯಾ ಕಿಂಚಿ ದುಷ್ಕೃತಂ ಮಧುಸೂದನ।
ತತ್ಸರ್ವಂ ವಿಲಯಂ ಯಾತು ತವದಾನೇನ ಮಾಧವ॥
ಅಸ್ಯೈ ಇಮಾಂಗೋಮಯಾನುಲೇಪಿತ ಮಥಾಸಂಭವ ವಿಸ್ತಾರ
ಚತುರ್ದಿಗವಸ್ಥಿತ। ಕ್ಷೌದ್ರ ಪಯೋದಧಿಘೃತ ಪೂರಿತ
ಗಂಧ ವಸ್ತ್ರಾದ್ಯಲಂಕಾರ ತಿಲರಾಶಿ ಮಧ್ಯಸ್ಥಿತಾಂ। ಸರ್ವಲಕ್ಷಣ
ಲಕ್ಷಿತಾಂ ಮಾಧವ ಪ್ರತಿಮಾಂ ಪೂರ್ವೋಕ್ತಫಲಂ ಕಾಮಯಮಾನ
ಸ್ತುಭ್ಯಮಹಂ। ಸಂಪ್ರದದೇ ನಮಮ ನಮಮ

ಎಂದು ಅನ್ನುತ್ತ ದಾನ ಮಾಡುವದರಿಂದ ಸರ್ವಪೀಡೆಗಳು ನಿವೃತ್ತಿಯಾಗುವವು.



## ಶನಿದಶಾ ಬುಧಭುಕ್ತಿಯಲ್ಲಿ ಬುಧ ಪ್ರೀತಿಕರ ಮಹಿಷೀ (ಎಮ್ಮೆ) ದಾನವು

ಜನನ ಲಗ್ನ ಕುಂಡಲಿಯಲ್ಲಿ ಬುಧನು 6–8–2–7 ಸ್ಥಾನಗಳಲ್ಲಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ ಅಥವಾ ನೋಡಲ್ಪಟ್ಟರೆ ಶನಿದಶಾ ಬುಧಭುಕ್ತಿಯಲ್ಲಿ ಕಲಹವು, ಧನಹಾನಿಯು, ಪಿತ್ತಜ್ವರ ಪೀಡೆಯು, ಪಾಂಡುರೋಗಾದಿ ಭಯವು, ಚಿತ್ತಸಂಕಟವು ಈ ದೋಷ ಪರಿಹಾರಕ್ಕಾಗಿ ರವಿದಶಾ ರಾಹು ಭುಕ್ತಿಯಲ್ಲಿ ತಿಳಿಸಿದಂತೆ ಮಹಿಷಿ(ಎಮ್ಮೆ) ದಾನ ಮಾಡುವದರಿಂದ ಆಯುಷ್ಯ–ಆರೋಗ್ಯ ವೃದ್ಧಿಯಾಗುವವು.



## ಶನಿದಶಾ ಕೇತುಭುಕ್ತಿಯಲ್ಲಿ ಕೇತು ಪ್ರೀತಿಕರ ಸುವರ್ಣ ತಿಲ ದಾನವು

ಜನನ ಲಗ್ನ ಕುಂಡಲಿಯಲ್ಲಿ ಕೇತು 6–8–12 ಸ್ಥಾನಗಳಲ್ಲಿದ್ದರೆ, ಕ್ರೂರ ಗ್ರಹಗಳೊಡನೆ ಕೂಡಿದ್ದರೆ, 2–7 ಸ್ಥಾನಗಳಲ್ಲಿದ್ದರೆ, ಶನಿದಶಾ ಕೇತುಭುಕ್ತಿಯಲ್ಲಿ ಹೆಂಡತಿ, ಮಕ್ಕಳಿಗೆ ಕಷ್ಟ–ನಷ್ಟಗಳು, ಪ್ರಯತ್ನಿಸಿದ ಕಾರ್ಯನಾಶವು, ಗ್ರಹಿಣಿಜ್ವರ ಬಾಧೆಯು, ಚಿಂತೆಯು, ರೋಗ ಪೀಡೆಯು, ಭಯವು. ಈ ದೋಷ ಪರಿಹಾರಕ್ಕಾಗಿ ಮೃತ್ಯುಂಜಯನನ್ನು ಪೂಜಿಸಿ ಸುವರ್ಣ ಮತ್ತು ಎಳ್ಳು ದಾನ ಮಾಡುವದರಿಂದ ಶಾಂತಿಯಾಗುವದೆಂದು ರುದ್ರಯಾಮಳದಲ್ಲಿ ಹೇಳಲ್ಪಟ್ಟಿದೆ. ಎಳ್ಳು ಮತ್ತು ದಕ್ಷಿಣೆ ದಾನ ಮಾಡುವದರಿಂದ ಸಮಸ್ತ ಮಹಾ ಪಾಪಗಳು ನಿವಾರಣೆಯಾಗುವವಲ್ಲದೆ ಸರ್ವ ಸೌಭಾಗ್ಯದಾಯಕವೆನಿಸುವದು ಮತ್ತು ವ್ರತಲೋಪ, ಬ್ರಹ್ಮಹತ್ಯಾದಿ ಪಾತಕಗಳು, ದಾರಿದ್ರ್ಯವು ಸರ್ವಗ್ರಹಗಳು ಜನನ ಕುಂಡಲಿಯಲ್ಲಿ ದುಷ್ಟ ಸ್ಥಾನಗಳಲ್ಲಿ 8–12 ರಲ್ಲಿರುವ ಸಕಲ ದೋಷಗಳು ಪರಿಹಾರವಾಗುವದರಿಂದ ಪಾಪಭೀರುಗಳಾದ ಮಾನವರು ಈ ದಾನವನ್ನು ಅವಶ್ಯ ಮಾಡಬೇಕು.

ಜನ್ಮನಕ್ಷತ್ರದಲ್ಲಿ, ಸಂಕ್ರಮಣ ಪುಣ್ಯ ಕಾಲದಲ್ಲಿ ಏಕಾದಶಿ, ದ್ವಾದಶಿ ತಿಥಿಗಳಲ್ಲಿ ವೈಧೃತಿ ವ್ಯತಿಪಾತಾದಿ ಯೋಗಗಳಲ್ಲಿ ರೋಗೋತ್ಪತ್ತಿ ಕಾಲದಲ್ಲಿ ಸ್ತ್ರೀ ಹತ್ಯಾ, ಶಿಶುಹತ್ಯಾದಿ ಪಾತಕ ಸಮಯದಲ್ಲಿ, ಕುರುಕ್ಷೇತ್ರದಲ್ಲಿ ಗಂಗಾ ಮೊದಲಾದ ನದಿ, ಪವಿತ್ರ ತೀರ್ಥಗಳಲ್ಲಿ ಗೋವುಗಳು ನಿಲ್ಲುವ ಸ್ಥಳದಲ್ಲಿ ರಮ್ಯವಾದ ಸ್ಥಳದಲ್ಲಿ ಇಲ್ಲವೆ ಮನೆಯ ಅಂಗಳದಲ್ಲಿ ಭೂಮಿಯನ್ನು ಗೋಮಯದಿಂದ ಸಾರಿಸಿ, ರಂಗವಲ್ಯಾದಿಗಳಿಂದ ಅಲಂಕರಿಸಿ ಅಲ್ಲಿ ನೂರು ಸೇರು (ಇಲ್ಲವೆ ನೂರು ಸಂಖ್ಯಾ ಅಳತೆಯ) ಕರೇ ಎಳ್ಳಿನ ರಾಶಿಯನ್ನು ಮಾಡಿ ಅದರ ಮುಂಭಾಗದಲ್ಲಿ ಬಂಗಾರದ ಪುರುಷಾಕಾರದ ಪ್ರತಿಮೆಯನ್ನು

ಇಟ್ಟು ಎಳ್ಳಿನ ರಾಶಿಯ ಸುತ್ತಲೂ ದರ್ಭೆಯನ್ನು ಹರವಿ ಆ ಎಳ್ಳಿನ ರಾಶಿಯ ಪಶ್ಚಿಮ ಭಾಗದಲ್ಲಿ ಭತ್ತದ ಗುಂಪೆಯನ್ನು ರಚಿಸಿ ಅದರ ಮೇಲೆ ಒಂದು ಕಲಶವನ್ನು ಸ್ಥಾಪಿಸಿ ಆ ಕಲಶದಲ್ಲಿ ವರುಣನನ್ನು ಆವಾಹನೆ ಮಾಡಿ ಪೂಜಿಸಬೇಕು.

"ಯದತ್ರಸಂಸ್ಥಿತಂ ಭೂತಂ ಸ್ಥಾನಮಾಶ್ರಿತ್ಯ ಸರ್ವದಾ।

ಸ್ಥಾನಂ ತ್ಯಕ್ತ್ವಾತು ತತ್ಸರ್ವಂ ಯತ್ರ ಸ್ಥಂ ತತ್ರಗಚ್ಛತು॥

ಈ ಮಂತ್ರದಿಂದ ಸುತ್ತಲೂ ಬಿಳಿಯ ಸಾಸಿವೆಗಳನ್ನು ಎರಚಿ.

"ಆಪೋಹಿಷ್ಠಾಮಯೋಭುವಸ್ಥಾನ ಊರ್ಜೇದದಾತನ । ಮಹೇರಣಾಯ ಚಕ್ಷಸೇ । ಯೋವಃ ಶಿವ ತಮೋರಸಸ್ತಸ್ಯ ಭಾಜಯತೇ ಹನಃ ಉಶತೀರಿವ ಮಾತರಃ । ತಸ್ಮಾಅರಂಗ ಮಾಮವೋ ಯಸ್ಯಕ್ಷಯಾಯ ಜಿನ್ವಥ। ಆಪೋಜನ ಯಥಾಚನಃ॥

ಈ ಮಂತ್ರದಿಂದ ಜಲವನ್ನು ಸಿಂಪಡಿಸಿ ಭೂಶುದ್ಧಿಯನ್ನು ಮಾಡಿದ ಬಳಿಕ,

ಮಹೀದ್ಯೌಃ ಪೃಥಿವೀಚನ । ಇಮಂಯಜ್ಞಂ ಮಿ ಮಿಕ್ಷಿತಾಂ । ಪಿಪೃತಾನ್ನೋಭರೀಮಭಿಃ॥

ಎಂದು ದಕ್ಷಿಣೋತ್ತರ ಭೂಮಿಯನ್ನು ಮುಟ್ಟಿ ಅಲ್ಲಿ ಎರಡು ಬಾಳೆಯ ಎಲೆಗಳನ್ನು ಹಾಕಿ,

ಓಷಧಯಃ ಸಂವದಂತೇಸೋಮೇನ ಸಹರಾಜ್ಞಾ। ಯಸ್ಮೈ ಕೃಣೋತಿ ಬ್ರಾಹ್ಮಣ ಸ್ತಗ್ಂ ರಾಜನ್ ಪಾರಯಾಮಸಿ॥

ಎಂದು ಹೇಳಿ ದಕ್ಷಿಣೋತ್ತರ ಸ್ಥಳಗಳಲ್ಲಿ ಎರಡು ಅಕ್ಕಿಯ ಗುಂಪೆಗಳನ್ನು ಚೌಕಾಗಿ ಹರವಿ ಅದರ ಮೇಲೆ ಅಷ್ಟದಳ ಕಮಲಗಳನ್ನು ಬರೆದು,

ಆಕಲಶೇಷು ಧಾವತಿ ಶ್ಯೇನೋ ವರ್ಮ ವಿಗಾಹತೇ। ಅಭಿದ್ರೋಣಾ ಕನಿಕ್ರದತ್। ಪವಿತ್ರೇಷು ಪರಿಷಿಚ್ಯತೇ ಉಕ್ಥೈರ್ಯ ಜ್ಞೇಷು ವರ್ಧತೇ॥

ಎಂದು ಎರಡು ಕಲಶಗಳನ್ನು ಸ್ಥಾಪಿಸಿ ಆ ಕಲಶಗಳಲ್ಲಿ

ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಗ್ಂ ಸಚತಾ ಪರಿಷ್ಣಿಯಾ। ಅಸಿಕ್ನ್ಯಾ ಮರುದ್ವೃಧೇ ವಿತಸ್ತ ಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ॥

ಎಂದು ಜಲವನ್ನು ತುಂಬಿ ಅದರಲ್ಲಿ,

ಗಂಧದ್ವಾರಾಂ ದುರಾಧರ್ಷಾಂ ನಿತ್ಯ ಪುಷ್ಟಾಂ ಕರೀಷಿಣೀಂ । ಈಶ್ವರೀಗ್ಂ ಸರ್ವಭೂತಾನಾಂತಾಮಿ ಹೋಪಹ್ವಯೇ ಶ್ರೀಯಂ॥

ಎಂದು ಕಲಶಗಳಲ್ಲಿ ಗಂಧವನ್ನು ಹಾಕಿ ಹಾಗೂ ಮೇಲೆಯೂ ಧರಿಸಿ, ಪುಷ್ಪ ಮಾಲಿಕೆಗಳಿಂದ ಅಲಂಕರಿಸಿ.

ಏಷರುದ್ರೋಽಯದಗ್ನಿ ರೋಷಧೀಃ । ಪ್ರಾಸ್ಯಾಗ್ನಾವಾದಿತ್ಯಂ. ಜುಹೋತಿ । ರುದ್ರಾದೇವ ಪಶೂನಂತ ರ್ದಧಾತ್ಯಥೋ ಓಷಧೀಷ್ವೇವ ಪಶೂನ್ಪ್ರತಿಷ್ಠಾಪಯತಿ ॥

ಎಂದು ಮಾವಿನ ಚಿಗುರುಗಳಿಂದ ಅಲಂಕರಿಸಿ,

ಕಾಂಡಾತ್ಕಾಂಡಾತ್ಪ್ರರೋಹಂತಿ । ಪರುಷಃ ಪರುಷಃ ಪರೀ । ಏವಾನೋ ದೂರ್ವೇ ಪ್ರತನು ಸಹಸ್ರೇಣ ಶತೇನಚ ॥

ಎಂದು ದರ್ಭಕೂರ್ಚಗಳನ್ನಿಟ್ಟು,

ಸಹಿರತ್ನಾನಿ ದಾಶುಷೇ ಸುವಾತಿ ಸವಿತಾಭಗಃ । ತಂ ಭಾಗಂ ಚಿತ್ರಮೀಮಹೇ ॥

ಎಂದು ಪಂಚರತ್ನಗಳನ್ನು ಹಾಕಿ,

ಹಿರಣ್ಯರೂಪಃ ಸಹಿರಣ್ಯ ಸಂದೃಗಪಾನ್ನಪಾತ್ಸೇದು ಹಿರಣ್ಯ ವರ್ಣಃ । ಹಿರಣ್ಯಯಾತ್ಪರಿಯೋನೇರ್ನಿಷದ್ಯಾ ಹಿರಣ್ಯದಾದದತ್ಯಂ ನಮಸ್ಮೈ ॥

ಎಂದು ಕಲಶಗಳಲ್ಲಿ ಬಂಗಾರವನ್ನು ಹಾಕಿ,

ಪೂರ್ಣಾದರ್ವಿಪರಾಪತ ಸುಪೂರ್ಣಾ ಪುನರಾಪತ । ವಸ್ನೇವ ವಿಕ್ರೀಣಾವಹ ಇಷಮೂರ್ಜಗ್ಂ ಶತಕ್ರತೋ ॥ ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾಯಾಶ್ಚ ಪುಷ್ಪಿಣೀಃ । ಬೃಹಸ್ಪತಿ ಪ್ರಸೂತಾಸ್ತಾನೋ ಮುಂಚತ್ವಗ್ಂ ಹಸಃ ॥

ಎಂದು ಕಲಶಗಳ ಮೇಲೆ ನಾರಿಕೇಳ ಫಲಗಳನ್ನಿಟ್ಟು

ಯುವಾಸುವಾಸಾಃ ಪರಿವೀತ ಆಗಾತ್ ಸ್ಉ ಶ್ರೇಯಾನ್ ಭವತಿ ಜಾಯಮಾನಃ । ತಂಧೀರಾಸಹ ಕವಯ ಉನ್ನಯಂತಿ ಸ್ವಾಧ್ಯೋ ಮನಸಾದೇವಯಂತಃ ॥

ಎಂದು ಕಲಶಗಳಿಗೆ ವಸ್ತ್ರಗಳನ್ನು ಧರಿಸಿ

ತಂತುಂತನ್ವನ್ ರಜಸೋಭಾನುಮನ್ವಿಹಿ ಜ್ಯೋತಿಷ್ಮತಃ ಪಥೋ ರಕ್ಷಧಿಯಾಕೃತಾನ್ । ಅನುಲ್ಬಣಂ ಪಯಸ ಜೋಗುವಾಮಪೋ ಮನುರ್ಭವ ಜನಯಾದೈವ್ಯಂಜನಂ ॥

ಎಂದು ಕಲಶಗಳಿಗೆ ಬಿಳಿಯ ದಾರವನ್ನು ಸುತ್ತಿ ಉತ್ತರ ಕಲಶದಲ್ಲಿ

ತತ್ವಾಯಾಮಿತಿ ಮಂತ್ರಸ್ಯ ಶುನಃಶೇಫಋಷಿಃ । ವರುಣೋದೇವತಾ । ತ್ರಿಷ್ಟುಪ್ ಛಂದಃ ॥ ಉತ್ತರ ಕಲಶೇ ವರುಣಮಾವಾಹನೇ ವಿನಿಯೋಗಃ ॥

ತತ್ವಾಯಾಮಿ ಬ್ರಹ್ಮಣಾ ವಂದಮಾನ ಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಡ ಮಾನೋ ವರುಣೇಹ ಬೋಧ್ಯುರುಶಗ್ಂ ಸಮಾನ ಆಯುಃ ಪ್ರಮೋಷೀಃ ॥

ಓಂ ಭೂಃ ವರುಣಮಾವಾಹಯಾಮಿ, ಓಂ ಭುವಃವರುಣಮಾವಾಹ ಯಾಮಿ, ಓಗ್ಂಸುವಃ ವರುಣ ಮಾವಾಹಯಾಮಿ, ಓಂ. ಭೂರ್ಭುವಸ್ಸುವ ವರುಣಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ ॥

ಎಂದು ಕಲಶದ ಮೇಲೆ ಅಕ್ಷತೆಗಳನ್ನು ಹಾಕಿ ವರುಣನನ್ನು ಆವಾಹನೆ ಮಾಡಿ ಸ್ಥಾಪಿಸಿ.

ಕಲಶಸ್ಯ ಮುಖೇರುದ್ರಃ ಕಂಠೇವಿಷ್ಣುಃ ಸಮಾಶ್ರಿತಃ।
ಮೂಲೇತತ್ರ ಸ್ಥಿತೋಬ್ರಹ್ಮಾ ಮಧ್ಯೇಮಾತೃಗಣಾಃ ಸ್ಮೃತಾಃ॥
ಕುಕ್ಷೌತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ।
ಋಗ್ವೇದೋಽಥ ಯಜುರ್ವೇದ ಸಾಮವೇದೋಹ್ಯಥರ್ವಣಃ॥
ಅಂಗೈಶ್ಚ ಸಹಿತಾಃ ಸರ್ವೇ ಕಲಶಂತು ಸಮಾಶ್ರಿತಾಃ।
ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾನದಾಃ।
ಆಯಾಂತು ಯಜಮಾನಸ್ಯ ದುರಿತಕ್ಷಯ ಕಾರಕಾಃ॥
ಗಂಗೇಚ ಯಮುನೇಚೈವ ಗೋದಾವರಿ ಸರಸ್ವತೀ।
ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂಕುರು॥

ಎಂದು ಕಲಶವನ್ನು ಮುಟ್ಟಿ ಜಪಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು. ನಂತರ "ಅನಯಾ ಪೂಜಯಾ ಭಗವಂತಃ ವರುಣದೇವಃ ಸುಪ್ರೀತಃ ಸುಪ್ರಸನ್ನಃ ವರದೋ ಭವತು" ಎಂದು ಅಕ್ಷತೆಗಳಿಂದ ಕೂಡಿದ ಹಿರಣ್ಯೋದಕವನ್ನು ಬಿಡಬೇಕು.

ನಂತರ ಯಜಮಾನನು ಬಲ ಮೊಳಕಾಲನ್ನು ನೆಲದ ಮೇಲೆ ಇಟ್ಟು ಎರಡೂ ಕೈಗಳನ್ನು ಜೋಡಿಸಿ ತಲೆಯ ಮೇಲೆ ಇಟ್ಟುಕೊಂಡು,

ಓಂ ಮಾತೃಭ್ಯೋ ನಮಃ, ಪಿತೃಭ್ಯೋ ನಮಃ ಆಚಾರ್ಯೇಭ್ಯೋ ನಮಃ, ಸರ್ವೇಭ್ಯೋ ಮಾಹೇಶ್ವರೇಭ್ಯೋ ನಮಃ ಇಷ್ಟದೇವತಾಭ್ಯೋ ನಮಃ॥

ಎಂದು ಸ್ಮರಿಸಿ ನಮಸ್ಕರಿಸಿ ಪವಿತ್ರ ಪಾಣಿಗಳಾದ ಇಬ್ಬರು ಮಾಹೇಶ್ವರರನ್ನು ಕಲಶಗಳ ಹಿಂಭಾಗದಲ್ಲಿ ಕೂಡ್ರಿಸಿ ವಸ್ತ್ರ, ದಕ್ಷಿಣಾಗಳಿಂದ ತೃಪ್ತಿಪಡಿಸಿ ಅವರನ್ನು ಗಂಧ, ಅಕ್ಷತೆ, ಪುಷ್ಪ, ದಕ್ಷಿಣೆ, ತಾಂಬೂಲಗಳಿಂದ ಪೂಜಿಸಬೇಕು.

ಬಳಿಕ ಯಜಮಾನನು ಉತ್ತರ ಕಲಶವನ್ನು ಮುಟ್ಟಿ ಗಂಧ, ಅಕ್ಷತೆ, ಪುಷ್ಪ, ತಾಂಬೂಲ, ದಕ್ಷಿಣೆಗಳನ್ನು ಮಾಹೇಶ್ವರರಿಗೆ ಕೊಡುತ್ತ ಮತ್ತು ಅವರು ತೆಗೆದುಕೊಳ್ಳುತ್ತ ಕೆಳಗಿನ ವಾಕ್ಯಗಳನ್ನು ಉಚ್ಚರಿಸಬೇಕು.

| ಯಜಮಾನನ ವಚನಗಳು | ಮಾಹೇಶ್ವರರ ವಚನಗಳು |
|---|---|
| ಓಂ ಅಪಃ | ಓಂ ಶಿವಾ ಆಪಸ್ಸಂತು |
| ಓಂ ಸುಮನಸಃ | ಓಂ ಸೌಮನಸ್ಯಮಸ್ತು |
| ಓಂ ಅಕ್ಷತಂ | ಓಂ ಅಕ್ಷತಾರಿಷ್ಟಂಚಾಸ್ತು |

ಓಂ ಸುಗಂಧಾಃಪಾಂತು ಓಂ ಸೌಮಂಗಲ್ಯ ಮಸ್ತು
ಓಂ ಅಕ್ಷತಾಃಪಾಂತು ಓಂ ಆಯುಷ್ಯಮಸ್ತು
ಓಂ ಪುಷ್ಪಾಣಿ ಪಾಂತು ಓಂ ಸಶ್ರೇಯೋಽಸ್ತು
ಓಂ ತಾಂಬೂಲಾನಿ ಪಾಂತು ಓಂ ಐಶ್ವರ್ಯಮಸ್ತು
ಓಂ ದಕ್ಷಿಣಾಃಪಾಂತು ಓಂ ಬಹುಧೇಯಂ ಚಾಸ್ತು

ಎಂದು ಉಚ್ಚರಿಸಿದ ಬಳಿಕ ಮಾಹೇಶ್ವರರು

ಓಂ ಶಾಂತಿರಸ್ತು, ಪುಷ್ಟಿರಸ್ತು, ತುಷ್ಟಿರಸ್ತು, ವೃದ್ಧಿರಸ್ತು, ಅವಿಘ್ನಮಸ್ತು, ಆಯುಷ್ಯಮಸ್ತು ಆರೋಗ್ಯಮಸ್ತು ಸ್ವಸ್ತ್ಯಸ್ತು ಶಿವಂಕರ್ಮಾಸ್ತು ಕರ್ಮ ಸಮೃದ್ಧಿರಸ್ತು ವೇದಸಮೃದ್ಧಿರಸ್ತು ಶಾಸ್ತ್ರಸಮೃದ್ಧಿರಸ್ತು ಪುತ್ರಸಮೃದ್ಧಿರಸ್ತು ಧನಧಾನ್ಯ ಸಮೃದ್ಧಿರಸ್ತು ಇಷ್ಟ ಸಂಪದಸ್ತು ಎಂದು ಉಚ್ಚರಿಸಬೇಕು.

ಬಳಿಕ ಸೂರ್ಯ, ವಾಯು, ಅಗ್ನಿ, ಜಲ, ಪರ್ಜನ್ಯ, ವಾಕ್ಪತಿ, ಇಂದ್ರ ವಿಷ್ಣು ಮೃತ್ಯು, ಯಮ, ಬ್ರಹ್ಮಾ ಈ 11 ದೇವತೆಗಳನ್ನು

| | | |
|---|---|---|
| ಓಂ ಸೂರ್ಯಾಯ ನಮಃ | ಓಂ ಜಲಾಯ ನಮಃ | ಓಂ ವಿಷ್ಣವೇ ನಮಃ |
| ಓಂ ವಾಯುವೇ ನಮಃ | ಓಂ ಪರ್ಜನ್ಯಾಯ ನಮಃ | ಓಂ ಮೃತ್ಯುವೇ ನಮಃ |
| ಓಂ ಅಗ್ನಯೇ ನಮಃ | ಓಂ ವಾಕ್ಪತಯೇ ನಮಃ | ಓಂ ಯಮಾಯ ನಮಃ |
| | ಓಂ ಇಂದ್ರಾಯ ನಮಃ | ಓಂ ಬ್ರಹ್ಮಾಯ ನಮಃ |

ಆಯಾಯ ನಾಮ ಮಂತ್ರಗಳಿಂದ ಸ್ಥಾಪಿಸಿ ಅವೇ ನಾಮ ಮಂತ್ರಗಳಿಂದ ಭಸ್ಮ, ಗಂಧ, ಕುಂಕುಮ, ಅಕ್ಷತೆ, ಪತ್ರಿ, ಪುಷ್ಪ, ಧೂಪ, ದೀಪಗಳಿಂದ ಪೂಜಿಸಿ ನೈವೇದ್ಯ, ತಾಂಬೂಲ, ದಕ್ಷಿಣೆಗಳನ್ನು ಸಮರ್ಪಿಸಿ ಪೂಜಾ ಸಮಾಪ್ತಿ ಮಾಡಬೇಕು.

ನಂತರ ಕಲಶಗಳ ಪಶ್ಚಿಮ ಭಾಗದಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿ ಹೋಮವನ್ನು ಮಾಡಬೇಕು.

''ಆಸತ್ಯೇನ'' ಮಂತ್ರದಿಂದ ಎಕ್ಕೆ ಸಮಿತ್ತು, ತುಪ್ಪ, ಪಾಯಸಗಳನ್ನೂ, ''ವಾಯು'' ಮಂತ್ರದಿಂದ ಮುತ್ತಲ ಸಮಿತ್ತು, ಅನ್ನ, ತುಪ್ಪಗಳನ್ನೂ, ''ಅಗ್ನಿ'' ಮಂತ್ರದಿಂದ ಅರಳಿ ಸಮಿತ್ತು, ಎಳ್ಳು, ತುಪ್ಪಗಳಿಂದಲೂ, ''ಆಪೋಹಿಷ್ಠಾ'' ಮಂತ್ರದಿಂದ ಮೊಸರು, ಅನ್ನ, ತುಪ್ಪಗಳನ್ನೂ, ''ಪರ್ಜನ್ಯ'' ಮಂತ್ರದಿಂದ ಮುತ್ತಲ ಸಮಿತ್ತು ತುಪ್ಪಗಳಿಂದಲೂ, ''ಬೃಹಸ್ಪತಿ'' ಮಂತ್ರದಿಂದ ತುಪ್ಪ, ಅನ್ನ, ಅರಳಿ ಸಮಿತ್ತುಗಳನ್ನೂ ''ಇಂದ್ರಾವಿಷ್ಣೋ ಪಿಬತ್'' ಮಂತ್ರದಿಂದ ಅನ್ನ, ಖಾದಿರಗಳಿಂದಲೂ ''ಮೃತ್ಯು'' ಮಂತ್ರದಿಂದ ಎಳ್ಳು, ತುಪ್ಪಗಳಿಂದಲೂ, ''ಯಮಾಯ'' ಮಂತ್ರದಿಂದ ಅನ್ನ, ತುಪ್ಪ, ಬನ್ನಿ ಸಮಿತ್ತುಗಳಿಂದಲೂ, ''ಬ್ರಹ್ಮಣಾಪತಿ'' ಮಂತ್ರದಿಂದ ಮುತ್ತಲ

ಸಮಿತ್ತು ಪರಮಾನ್ನ, ತುಪ್ಪಗಳಿಂದಲೂ ಆಹುತಿಗಳನ್ನು ಕೊಟ್ಟು ಶೇಷ ಹೋಮವನ್ನು ಸಮಾಪ್ತಿಗೊಳಿಸಬೇಕು.

ನಂತರ ಯಜಮಾನನು ಪುನಃ ಸ್ನಾನ ಮಾಡಿ ಶುಭ್ರವಾದ ಬಟ್ಟೆಗಳನ್ನು ಧರಿಸಿಕೊಂಡು ಎರಡು ಕೈಗಳಲ್ಲಿ ಪುಷ್ಪಗಳನ್ನು ಹಿಡಿದುಕೊಂಡು ಎಲ್ಲ ದೇವತೆಗಳಿಗೆ ಮೂರು ಸಾರೆ ಪ್ರದಕ್ಷಿಣೆಯನ್ನು ಮಾಡಬೇಕು. ಆಮೇಲೆ ಎಳ್ಳಿನ ರಾಶಿ ಹಾಗೂ ಬಂಗಾರದ ಪ್ರತಿಮೆಯನ್ನು ಪೂಜಿಸಬೇಕು.

ವಸು, ಆದಿತ್ಯ, ಮರುತ್, ದಸ್ರ, ನಾಗವೇದಾಂಗ, ದಿಕ್ಪತಿ, ಬ್ರಹ್ಮಾಣ ಭಾಸ್ಕರ, ವಿಷ್ಣು ಕಾಲ, ಈಶ, ಪ್ರಜಾಪತಿ ಈ ದೇವತೆಗಳ ಹೆಸರುಗಳಿಂದ ಪೂಜಿಸಬೇಕು. ಆನಂತರ ಓರ್ವ ಬ್ರಾಹ್ಮಣ ಅಥವಾ ಜಂಗಮ ಮೂರ್ತಿಯ ಪಾದಗಳನ್ನು ತೊಳೆದು ಗಂಧ, ಪುಷ್ಪ, ವಸ್ತ್ರಾದಿಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಎಳ್ಳು ದಕ್ಷಿಣೆಗಳನ್ನು ದಾನಕೊಟ್ಟು ದರ್ಭೆ, ಅಕ್ಷತೆ ಸಹಿತ ಜಲವನ್ನು ಕನಿಷ್ಠಾಂಗುಲಿಯಿಂದ ಬಿಡಬೇಕು.

ದಾನಮಂತ್ರ- ತಿಲಾಃಕಾಶ್ಯಪ ಸಂಭೂತಾ ಸ್ತಿಲಾ ವಿಷ್ಣಂಗ ಸಂಭವಾಃ।
ತಿಲಾ ಪಾಪಹರಾ ಯಸ್ಮಾತ್ತಸ್ಮಾತ್ಪೂತೋ ಭವಾಮ್ಯಹಂ॥
ಹಿರಣ್ಯಗರ್ಭ ಗರ್ಭಸ್ಥಂ ಹೇಮಬೀಜಂ ವಿಭಾವಸೋಃ॥
ಕಾರ್ತಿಕೇಯಸ್ಯ ಸಹಜಂ ತಸ್ಮಾತ್ಪೂತೋ ಭವಾಮ್ಯಹಂ॥
ಹತ್ಯಾದಿ ಪಾಪಶಮನಂ ಕಥಿತಂ ತಿಲಕಾಂಚನಂ।
ಯಸ್ಮಾತತ್ಪ್ರದಾನಾತ್ಪಾಪತ್ಪೂತೋ ಭವಾಮ್ಯಹಂ॥
ದತ್ತೈವ ದಾನ ಸಾದ್ಗುಣ್ಯ ಸಿದ್ಧಯೇ ದಕ್ಷಿಣಾಂ ನರಃ।
ದಶನಿಷ್ಕಂ ತದರ್ಧಂವಾ ವಿತ್ತಶಾಠ್ಯ ವಿವರ್ಜಿತಃ॥
ಅನೇನ ವಿಧಿನಾ ದತ್ವಾತಿಲಕಾಂಚನ ಮುತ್ತಮಂ॥
ತ್ರಿಸೃಷ್ಟಪಿಚ ಸಂಧ್ಯಾಸು ಚೈಕಸ್ಮಿನ್ನೇವ ವಾಸರೇ।
ಬ್ರಹ್ಮಹಾಮುಚ್ಯತೇ ಪಾಪಾತ್ ಸ್ತೇಯೀವಾ ಗುರುತಲ್ಪಗಃ॥
ವಿಪ್ರದ್ರೋಹೀ ಸುರಾಪಾಯೀ ಮಾತೃಹಾ ಪಿತೃಹಿಂಸಕಃ।
ಆಯುರಾರೋಗ್ಯ ಸಂಪನ್ನಃ ಪುತ್ರ ಪೌತ್ರಸಮನ್ವಿತಃ॥
ದೇಹಾನ್ತ್ಯೇ ದೀಪ್ಯಮಾನೋ ಸೌಭಿತ್ವಾಮಾರ್ತಾಂಡಮಂಡಲಂ।
ಪುಣ್ಯಲೋಕೇಷು ಸರ್ವೇಷು ಭುಕ್ತ್ವಾಭೋಗಾನ್ಯಥೇ ಪ್ಸಿತಾನ್॥
ಕಾಲಂ ಹ್ಯುಷಿತ್ವಾತದನು ನಿತ್ಯಸೂರಿಭಿರಂಚಿತಂ॥
ಪುನರಾವೃತ್ತಿ ರಹಿತಂ ಪ್ರಾಪ್ನುಯಾತ್ಪರಮಂ ಪದಂ।
ತಿಲೋದ್ವರ್ತೀ ತಿಲಸ್ನಾಯೀ ತಿಲದಸ್ತಿಲಭಕ್ಷಕಃ।
ತಿಲಹೋಮೀಚ ಪಾಪೇಭ್ಯೋ.ಮುಕ್ತೋಭವತಿ ಮಾನವಃ॥

ಈ ಪ್ರಕಾರ ಮಂತ್ರವನ್ನು ಉಚ್ಚರಿಸುತ್ತ ದಾನ ಕೊಡುವದರಿಂದ ಕೇತು ಪ್ರೀತಿಯಾಗಿ ಕ್ಷೇಮವಾಗುವದು ಎಂಬುದಾಗಿ ವಾಧೂಲಸಂಹಿತೆಯಲ್ಲಿ ತಿಲಕಾಂಚನ ದಾನ ವಿಧಿಯು ಹೇಳಲ್ಪಟ್ಟಿದೆ.



## ಶನಿದಶಾ ಶುಕ್ರಭುಕ್ತಿಯಲ್ಲಿ ಶುಕ್ರಪ್ರೀತಿಕರ ಛಾಗಾದಿ ಪಂಚಕ ದಾನವು

ಜನನ ಲಗ್ನ ಕುಂಡಲಿಯಲ್ಲಿ ಶುಕ್ರನು ನೀಚರಾಶಿಗಳಲ್ಲಿದ್ದರೆ, ಪರಾಜಿತನಾಗಿದ್ದರೆ, ಅಸ್ತನಾಗಿದ್ದರೆ. ಪಾಪಗ್ರಹಗಳೊಡನೆ ಕೂಡಿದ್ದರೆ, 6–8–12–2–7 ಸ್ಥಾನಗಳಲ್ಲಿದ್ದರೆ, ಕ್ರೂರದ್ರೇಕ್ಕಾಣದಲ್ಲಿದ್ದರೆ, ಶನಿದಶಾ ಶುಕ್ರಭುಕ್ತಿಯಲ್ಲಿ ದೇಹದಲ್ಲಿ ಪೀಡೆಯು, ಧನನಷ್ಟವು, ಹೆಂಡತಿಯ ವಿಯೋಗವು, ಪೀಡೆಯು, ದುಃಖವು, ಬಂಧುಗಳ ದ್ವೇಷವು, ಮಿತ್ರರ ವಿರೋಧವು, ಆಪ್ತಮಿತ್ರರ ನಾಶವು. ಈ ದೋಷ ಪರಿಹಾರಕ್ಕಾಗಿ ಛಾಗ (ಮೇಕೆ) ಪಂಚಕ ಅಂದರೆ ಕರಿಯ ಗಂಡುಮೇಕೆ (ಹೋತು) ಬಿಳಿಯ ಕಂಬಳಿ (ಹತ್ತಿ) ಅರಳೆ, ಕರೇ ಎಳ್ಳು, ಕಬ್ಬಿಣ ತುಂಡುಗಳನ್ನು ರವಿದಶಾ ಶನಿಭುಕ್ತಿಯಲ್ಲಿ ತಿಳಿಸಿದಂತೆ (ಪುಟ 26 ನೋಡಿರಿ) ದಾನ ಮಾಡುವದರಿಂದ ಕ್ಷೇಮವಾಗುವದು ಎಂಬುದಾಗಿ ದಾನ ಕಲ್ಪದಲ್ಲಿ ತಿಳಿಸಲಾಗಿದೆ.



## ಶನಿದಶಾ ರವಿಭುಕ್ತಿಯಲ್ಲಿ ರವಿ ಪ್ರೀತಿಕರ ಸುವರ್ಣ ಗರ್ಭಿತ ಕೂಷ್ಮಾಂಡ ದಾನವು

ಜನನ ಲಗ್ನ ಕುಂಡಲಿಯಲ್ಲಿ ರವಿಯು 6–8–12 ಸ್ಥಾನಗಳಲ್ಲಿದ್ದರೆ, ನೀಚರಾಶಿಗಳಲ್ಲಿದ್ದರೆ, ಶತ್ರು ರಾಶಿಗಳಲ್ಲಿದ್ದರೆ, ಪರಾಜಿತನಾಗಿದ್ದರೆ, ವಿಕಲಾವಸ್ಥೆಯಲ್ಲಿದ್ದರೆ 2–7 ನೆಯ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ ಶನಿದಶಾ ರವಿಭುಕ್ತಿಯಲ್ಲಿ ವಾತ ಶೂಲಿ ಗುಲ್ಮರೋಗಾದಿ ಪೀಡೆಯು, ಚಿತ್ತ ವಿಭ್ರಮವು, ಪಿತ್ತರೋಗವು, ಧನನಾಶವು ತಾಯಿ–ತಂದೆಗಳ ವಿಯೋಗವು, ಬುದ್ಧಿ ಭ್ರಮೆಯು ಅಪಸ್ಮಾರಾದಿ ರೋಗ ಪೀಡೆಯು, ಈ ದೋಷ ಪರಿಹಾರಕ್ಕಾಗಿ ಸೂರ್ಯ ಪ್ರಾರ್ಥನೆಯನ್ನು ಮಾಡಬೇಕು ಮತ್ತು ಬೂದುಗುಂಬಳಕಾಯಿಯಲ್ಲಿ ಬಂಗಾರದ ಸೂರ್ಯ ಪ್ರತಿಮೆಯನ್ನು ಇಟ್ಟು ಪೂಜಿಸಿ ದಾನ ಮಾಡಬೇಕು ಎಂಬುದಾಗಿ ವಿಷ್ಣುಯಾಮಳದಲ್ಲಿ ಉಲ್ಲೇಖವಾಗಿದೆ.

ತುಳಸೀ ಗಿಡದ ಸಾನಿಧ್ಯದಲ್ಲಿ ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಸ್ಥಳದಲ್ಲಿ(12 ಸೇರು ಅಕ್ಕಿ) ಚಚ್ಚೌಕ ಆಕಾರ ಅಕ್ಕಿಯ ಗುಂಪೆಯನ್ನು ರಚಿಸಿ ಅದರ ಮೇಲೆ ಕುಂಕುಮದಿಂದ 12 ದಳದ ಕಮಲವನ್ನು ಬರೆದು, ಅದರ ಮೇಲೆ ವಸ್ತ್ರವನ್ನು ಹರವಿ ಆದರಲ್ಲಿ ಒಂದು ಕಡೆಗೆ ಶ್ರೀಗಂಧದಿಂದ ನರಸಿಂಹ ಮೂರ್ತಿಯನ್ನು ಬರೆದು, ಶಂಖ, ಚಕ್ರ, ಗದಾ, ಖಡ್ಗ ಮುಸಲ(ಒನಿಕೆ), ನಖ(ಉಗುರು)ಗಳು, ವಜ್ರಗಳು, ಮುಖವು ಪ್ರಸನ್ನವಾಗಿರಬೇಕು. ಇನ್ನೊಂದು ಭಾಗದಲ್ಲಿ ಶ್ರೀಲಕ್ಷ್ಮೀ, ವಿಷ್ಣುಮೂರ್ತಿಗಳು (ಬ್ರಹ್ಮ ಇಂದ್ರಾದಿ ದೇವತೆಗಳು, ಸನಕಾದಿ ಋಷಿಗಳು, ಕಿನ್ನರರು, ಅಪ್ಸರರು, ಗಣರು, ಯೋಗಿಗಳು ಇವರೆಲ್ಲರ ಮಧ್ಯದಲ್ಲಿ ಲಕ್ಷ್ಮೀ, ವಿಷ್ಣು ಸಿಂಹಾಸನದಲ್ಲಿ ಆಸೀನರಾಗಿರಬೇಕು.)

ಈ ಪ್ರಕಾರ ಇರುವ ನರಸಿಂಹ ಮೂರ್ತಿ, ಲಕ್ಷ್ಮೀ, ವಿಷ್ಣುದೇವತೆಗಳನ್ನು ಸ್ಥಾಪಿಸಿ ಷೋಡಶೋಪಚಾರಗಳಿಂದ ಪೂಜಿಸಿ ಈ ದೇವತೆಗಳ ಮುಂಭಾಗದಲ್ಲಿ ಉತ್ತಮವಾಗಿರುವ ಬಹುದೊಡ್ಡ 12 (ಹನ್ನೆರಡು) ಬೂದುಗುಂಬಳಕಾಯಿಗಳನ್ನು ಎಳ್ಳಿನ ರಾಶಿಯ ಮೇಲೆ ಇಟ್ಟು ಆ ಕುಂಬಳಕಾಯಿಗಳಲ್ಲಿ ಬಂಗಾರವನ್ನು ಇಟ್ಟು ಮೇಲ್ಭಾಗದಲ್ಲಿ ಆಕಳ ತುಪ್ಪವನ್ನು ಲೇಪಿಸಿ ಅವುಗಳ ಮೇಲೆ ವಸ್ತ್ರಗಳನ್ನು ಹೊದಿಸಿ ಆದರ ಮೇಲೆ ಬಂಗಾರದ ಸೂರ್ಯ ಪ್ರತಿಮೆಯನ್ನು ಇಟ್ಟು,

ಧ್ಯಾನಂ- ಆಸತ್ಯೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂಚ।
ಹಿರಣ್ಯಯೇನ ಸವಿತಾ ರಥೇನಾ ದೇವೋಯಾತಿ ಭುವನಾನಿ ಪಶ್ಯನ್ ॥

ಓಂ ಭೂಃ ಸೂರ್ಯಗ್ರಹ ಮಾವಾಹಯಾಮಿ। ಓಂ ಭುವಃ ಸೂರ್ಯ ಗ್ರಹ ಮಾವಾಹಯಾಮಿ। ಓಂ ಸುವಃ ಸೂರ್ಯಗ್ರಹ ಮಾವಾಹಯಾಮಿ। ಓಂ ಭು ರ್ಭುವಃ ಸ್ವಃ ಸೂರ್ಯಗ್ರಹ ಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಎಂದು ಉಚ್ಚರಿಸಿ ಸೂರ್ಯ ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು. ನಂತರ,

ಓಂ ಭೂ ರ್ಭುವಃ ಸ್ವರೋ ಸಶಕ್ತಿಸಾಂಗ ಸಾಯುಧ ಸವಾಹನ ಸಪರಿವಾರ ಓಂ ಸೂರ್ಯದೇವ ಅತ್ರಾಗಚ್ಛಾಗಚ್ಛ । ಆವಾಹಯಾಮಿ ಆವಾಹಿತೋಭವ । ಸ್ಥಾಪಯಾಮಿ ಸ್ಥಾಪಿತೋಭವ । ಸನ್ನಿಹಿತೋಭವ । ಸಮ್ಮುಖೋಭವ । ಅವಕುಂಠಿತೋಭವ। ವರದೋಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ,

"ಓಂ ಸೂರ್ಯದೇವಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ"

ಎಂದು ನಮಸ್ಕರಿಸಿ ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ ಎಂದು ಆಸನವನ್ನು ಮುಟ್ಟಿ 'ಪಾದಯೋಃ ಪಾದ್ಯಂಪಾದ್ಯಂ ಸಮರ್ಪಯಾಮಿ' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ 'ಹಸ್ತಯೋಃ ಅರ್ಘ್ಯ, ಮರ್ಘ್ಯಂ ಸಮರ್ಪಯಾಮಿ' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ "ಮುಖೇ ಆಚಮನೀಯಂ ಸಮರ್ಪಯಾಮಿ" ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಿ

ಓಂ ಸೂರ್ಯಾಯ ನಮಃ ಈ ಮಂತ್ರದಿಂದ ಭಸ್ಮ ಗಂಧ, ಅಕ್ಷತೆ, ಬಿಳಿಎಕ್ಕಿ ಪತ್ರಿ, ಬಿಳಿ ಎಕ್ಕಿ ಹೂ, ಧೂಪ, ದೀಪಾದಿಗಳಿಂದ ಪೂಜಿಸಿ, ನೈವೇದ್ಯ ತಾಂಬೂಲಗಳನ್ನು ಸಮರ್ಪಿಸಿ,

ವೇದೀ ಮಧ್ಯೇ ಲಲಿತ ಕಮಲೇ ಕರ್ಣಿಕಾಯಾಂ ರಥಸ್ಥಃ।
ಸಪ್ತಾಶ್ವಾರ್ಕೋ ಋಣ ರಚಿವಪುಃ ಸಪ್ತರಜ್ಜುರ್ದ್ವಿಬಾಹುಃ।
ಗೋತ್ರೇ ರಮ್ಯೇ ಬಹುವಿಧ ಗುಣೇ ಕಾಶ್ಯಪಾಖ್ಯೇ ಪ್ರಸೂತಃ।
ಕಾಳಿಂಗಾ ಖ್ಯೇ ವಿಷಯ ಜನಿತಃ ಪ್ರಾಙ್ಮುಖಃ ಪದ್ಮಹಸ್ತಃ।
ಪದ್ಮಾಸನಃ ಪದ್ಮಕರೋದ್ವಿಬಾಹುಃ ಪದ್ಮದ್ಯುತಿಃ ಸಪ್ತತುರಂಗ ಬಾಹು।
ದಿವಾಕರೋ ಲೋಕ ಗುರುಃ ಕಿರೀಟಮಯಿ ಪ್ರಸಾದಂ ವಿದಧಾತು ದೇವಃ॥

ಎಂದು ಸೂರ್ಯ ಪ್ರಾರ್ಥನೆಯನ್ನು ಮಾಡಿ ಪೂಜಾ ಸಮಾಪ್ತಿಗೊಳಿಸಿ ಜಂಗಮಮೂರ್ತಿ ಅಥವಾ ಬ್ರಾಹ್ಮಣನನ್ನು ಗಂಧ, ಅಕ್ಷತೆ, ಪುಷ್ಪಹಾರ, ವಸ್ತ್ರಾದಿಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಬಂಗಾರ ದಕ್ಷಿಣೆ ವಸ್ತ್ರ ಸಹಿತ ಕುಂಬಳ ಕಾಯಿಗಳನ್ನು ದಾನ ಮಾಡಬೇಕು.

ದಾನಮಂತ್ರ- ಸ್ವರ್ಣಗರ್ಭಿತ ಕೂಷ್ಮಾಂಡ ಮಿಹಾಮುತ್ರ ಫಲಪ್ರದಂ।
ಪುತ್ರಪೌತ್ರಾಭಿ ವೃದ್ಧ್ಯರ್ಥಂ ತುಭ್ಯಂ ಸಂಪದದೇ ಶುಭಂ॥
ದತ್ತ್ವಾ ವಂದಕ್ಷಿಣಾಂ ದದ್ಯಾನ್ನಿಷ್ಕಂ ಸಾದ್ಗುಣ್ಯ ಸಿದ್ದಯೇ
ಏವಂಕೃತವತಸ್ತಸ್ಯ ಇಹಾಮುತ್ರ ಫಲದ್ವಯಂ।
ಹಸ್ತಸ್ಥಿತಂ ಜಗನ್ಮನ್ಯೇ ನಾತ್ರಕಾರ್ಯಾ ವಿಚಾರಣಾ।
ದತ್ತಮಾತ್ರಮಿದಂ ದಾನಂ ತಾರಯೇತ್ಸಕಲಾ ಪದಃ॥

ಈ ಪ್ರಕಾರ ದಾನ ಮಾಡಿ ಆಶೀರ್ವಾದ ಪಡೆಯುವದರಿಂದ ಕ್ಷೇಮವಾಗುವದು.



## ಶನಿದಶಾ ಚಂದ್ರಭುಕ್ತಿಯಲ್ಲಿ ಚಂದ್ರ ಪ್ರೀತಿಕರ ಶ್ವೇತಧೇನು (ಬಿಳಿ ಆಕಳು) ದಾನವು

ಜನನ ಲಗ್ನಕುಂಡಲಿಯಲ್ಲಿ ಚಂದ್ರನು 2–7–6–8–12 ಸ್ಥಾನಗಳಲ್ಲಿದ್ದರೆ, ಕ್ಷೀಣ ಚಂದ್ರನಾಗಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, ಕ್ರೂರ ದ್ರೇಕ್ಕಾಣದಲ್ಲಿದ್ದರೆ, ಶನಿದಶಾ ಚಂದ್ರಭುಕ್ತಿಯಲ್ಲಿ ಶೀತಜ್ವರ ಬಾಧೆಯು, ಹೊಟ್ಟೆಯ ಸಂಬಂಧ ರೋಗ ಪೀಡೆಯು, ಧನ–ಧಾನ್ಯ ನಾಶವು, ಪಶುಹಾನಿಯು, ತಾಯಿಯಿಂದ ವಿಯೋಗವು. ಈ ದೋಷ ಪರಿಹಾರಕ್ಕಾಗಿ ರವಿ ದಶಾ ಚಂದ್ರಭುಕ್ತಿಯಲ್ಲಿ ತಿಳಿಸಿದಂತೆ (ಪುಟ 13 ನೋಡಿರಿ) ಬಿಳಿಯ ಆಕಳನ್ನು ದಾನ ಮಾಡಿದರೆ ಸುಖವಾಗುವದು.



## ಶನಿದಶಾ ಕುಜಭುಕ್ತಿಯಲ್ಲಿ ಕುಜ ಪ್ರೀತಿಕರ ಮಹಿಷೀ (ಎಮ್ಮೆ) ದಾನವು

ಜನನ ಲಗ್ನಕುಂಡಲಿಯಲ್ಲಿ ಕುಜನು ನೀಚರಾಶಿಗಳಲ್ಲಿ, ಶತ್ರುರಾಶಿಗಳಲ್ಲಿ ಇದ್ದರೆ, ನೀಚನಾಗಿದ್ದರೆ, 6–8–12–2–7 ನೆಯ ಸ್ಥಾನದಲ್ಲಿದ್ದರೆ, ಕ್ರೂರ ದ್ರೇಕ್ಕಾಣದಲ್ಲಿದ್ದರೆ, ಕ್ರೂರಷಷ್ಠಾಂಶದಲ್ಲಿದ್ದರೆ, ಪಾಪಗ್ರಹಗಳ ದೃಷ್ಟಿಯಲ್ಲಿದ್ದರೆ ಭ್ರಾತೃಗಂಡವು, ವಿಷಗಂಡವು, ಅಗ್ನಿಗಂಡವು, ಸಮಾನ ಜನ (ಮಿತ್ರ) ರ ನಾಶವು, ಶಸ್ತ್ರಭಯವು, ಭೂಮಿ, ಧಾನ್ಯನಾಶವು ಸೇವಕ ವರ್ಗದವರ ನಾಶವು ಎತ್ತರವಾದ ಸ್ಥಳದಿಂದ ಬೀಳುವಿಕೆಯು. ಈ ದೋಷ ಪರಿಹಾರಕ್ಕಾಗಿ ರವಿದಶಾ ರಾಹು ಭುಕ್ತಿಯಲ್ಲಿ ತಿಳಿಸಿದಂತೆ (ಪುಟ 20 ನೋಡಿರಿ) ಮಹಿಷೀ (ಎಮ್ಮೆ) ದಾನ ಮಾಡಿದರೆ ಶಾಂತಿಯಾಗುವದು.



## ಶನಿದಶಾ ರಾಹುಭುಕ್ತಿಯಲ್ಲಿ ರಾಹು ಪ್ರೀತಿಕರ ನಾಗ ದಾನವು

ಜನನ ಲಗ್ನ ಕುಂಡಲಿಯಲ್ಲಿ ರಾಹು 5–9–8 ಸ್ಥಾನಗಳಲ್ಲಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, ಕ್ರೂರದ್ರೇಕ್ಕಾಣದಲ್ಲಿದ್ದರೆ, ಶನಿದಶಾ ರಾಹು ಭುಕ್ತಿಯಲ್ಲಿ ಧನಹಾನಿಯು, ವಿಷ ಭಯವು, ಸರ್ಪಭಯವು, ಪಿಶಾಚ ಬಾಧೆಯು, ವಾತಜ್ವರ, ಅಪಸ್ಮಾರಾದಿ ರೋಗಭಯವು, ಮಾಟ, ಮದ್ದು ಮೊದಲಾದ ಶೂನ್ಯ ಭಯವು. ಈ ದೋಷ ಪರಿಹಾರಕ್ಕಾಗಿ ಚಂದ್ರದಶಾ ಕುಜಭುಕ್ತಿಯಲ್ಲಿ ಹೇಳಿದಂತೆ (ಪುಟ 35 ನೋಡಿರಿ) ನಾಗ ದಾನ ಮಾಡಿದರೆ ಕ್ಷೇಮವಾಗುವದು.

## ಶನಿದಶಾ ಗುರುಭುಕ್ತಿಯಲ್ಲಿ ಗುರುಪ್ರೀತಿಕರ ಸ್ವರ್ಣ ನಿರ್ಮಿತ ಛಾಗ (ಮೇಕೆ) ದಾನವು

ಜನನ ಲಗ್ನ ಕುಂಡಲಿಯಲ್ಲಿ ಗುರು ಕ್ರೂರದ್ರೇಕ್ಕಾಣದಲ್ಲಿದ್ದರೆ, ಕ್ರೂರ ಷಷ್ಠ್ಯಾಂಶದಲ್ಲಿದ್ದರೆ, ನೀಚ ಕ್ಷೇತ್ರ, ಶತ್ರು ಕ್ಷೇತ್ರಗಳಲ್ಲಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, 6–8–12 ನೆಯ ಸ್ಥಾನಗಳಲ್ಲಿದ್ದರೆ ದ್ವಿತೀಯ, ಸಪ್ತಮ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ, ಬಲಹೀನನಾಗಿದ್ದರೆ ಪುತ್ರರಿಗೆ ಮರಣವು, ಗುರುಗಳಿಂದ ವಿಯೋಗವು, ಧನ–ಧಾನ್ಯ ನಾಶವು, ಆಸ್ತಿನಾಶವು, ಪಿತ್ತ ಪಾಂಡು ಆದಿರೋಗ ಪೀಡೆಯು. ಈ ದೋಷ ಪರಿಹಾರಕ್ಕಾಗಿ ''ತ್ರಿಯಂಬಕಂಯಜಾಮಹೇ'' ಈ ಮಂತ್ರದಿಂದ 108 ಸಾರೆ ಅಥವಾ 1008 ಜಪಮಾಡಬೇಕು.

ಮಂತ್ರ– ಓಂ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ।
ಉರ್ವಾರುಕ ಮಿವ ಬಂಧನಾ ನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥

ಮತ್ತುರವಿದಶಾ ಶನಿಭುಕ್ತಿಯಲ್ಲಿಹೇಳಿರುವಂತೆ ಬಂಗಾರದ ಮೇಕೆಯನ್ನು ದಾನ ಮಾಡುವದರಿಂದ ಶಾಂತಿಯಾಗುವದು. (ಪುಟ26 ನೋಡಿರಿ)



## ಬುಧದಶಾದಲ್ಲಿ ಬುಧ ಪ್ರೀತಿಕರ ಸ್ವರ್ಣಪಾತ್ರೆ (ಬಂಗಾರದ ಕಲಶ) ದಾನವು

ಜನನ ಲಗ್ನ ಕುಂಡಲಿಯಲ್ಲಿ ಬುಧನು ದುಷ್ಟ ಸ್ಥಾನಗಳಲ್ಲಿದ್ದರೆ, ಬುಧದಶೆಯಲ್ಲಿ ವಾತಶ್ಲೇಷ್ಮರೋಗವು, ದೀನತ್ವವು, ಸರ್ವಾಂಗದಲ್ಲಿವೇದನೆಯು. ಈ ದೋಷಪರಿಹಾರಕ್ಕಾಗಿ ಎಲ್ಲದಾನಗಳಲ್ಲಿಸರ್ವೋತ್ತಮವಾದ ಬಂಗಾರದ ಪಾತ್ರೆಯ ದಾನವನ್ನು ಮಾಡಬೇಕು.

ಜನನ ನಕ್ಷತ್ರದಲ್ಲಿ, ಬುಧವಾರದಲ್ಲಿ ಅಥವಾ ಯಾವದಾದರೊಂದು ಪರ್ವಕಾಲದಲ್ಲಿಮನೆಯಲ್ಲಿ ಅಥವಾ ದೇವಾಲಯದಲ್ಲಿ ಗೋಮಯದಿಂದ ಸಾರಿಸಿ, ರಂಗವಲ್ಯಾದಿಗಳಿಂದ ಅಲಂಕರಿಸಿದ ಸ್ಥಳದಲ್ಲಿ ಹೆಸರು ಧಾನ್ಯದ ಚಚ್ಚೌಕಾದ ರಾಶಿಯನ್ನು ರಚಿಸಿ ಅದರ ಮೇಲೆ ರೇಶಿಮೆಯ ಹಳದಿ ವಸ್ತ್ರವನ್ನು ಹಾಸಿ ಬಂಗಾರದ ಕಲಶ (ಗಿಂಡಿ) ವನ್ನು ಅದರ ಮೇಲೆ ಸ್ಥಾಪಿಸಿ ಪೂಜಿಸಬೇಕು.

ಧ್ಯಾನಂ– ಉದ್ಬುಧ್ಯ ಸ್ವಾಗ್ನೇಪ್ರತಿಜಾಗೃಹ್ಯೇನ ಮಿಷ್ಟಾಪೂರ್ತೇಸಗ್ಂ ಸೃಜೇಥಾ ಮಯಂಚ ಪುನಃ ಕೃಣ್ವಗ್ಂಸ್ತ್ವಾ ಪಿತರಂ ಯುವಾನ ಮನ್ವಾತಾಗ್ಂ ಸೀತ್ವಯಿ ತಂತುಮೇತಂ॥

ಸಿಂಹಾರೂಢಂ ಚತುರ್ಬಾಹುಂ ಖಡ್ಗ ಚರ್ಮಗದಾಧರಾನ್ ।
ಧಾರಯಂತಂ ಮಹಾ ಸೌಮ್ಯಂ ಧ್ಯಾಯೇತ್ ಸರ್ವಾರ್ಥ ಸಿದ್ಧಯೇ ॥

ಎಂದು ಧ್ಯಾನಿಸಿ ನಂತರ,

ಓಂ ಭೂಃ ಬುಧಗ್ರಹ ಮಾವಾಹಯಾಮಿ । ಓಂ ಭುವಃ ಬುಧಗ್ರಹ ಮಾವಾಹಯಾಮಿ । ಓಂ ಸುವಃ ಬುಧಗ್ರಹ ಮಾವಾಹಯಾಮಿ । ಓಂ ಭೂರ್ಭುವಃ ಸುವಃ ಬುಧಗ್ರಹ ಮಾವಾಹಯಾಮಿ । ಸ್ಥಾಪಯಾಮಿ । ಪೂಜಾಯಾಮಿ । ಎಂದು ಕಲಶದ ಮೇಲೆ ಅಕ್ಷತೆಗಳನ್ನು ಹಾಕಬೇಕು. ನಂತರ ಓಂ ಭೂ ರ್ಭುವಃಸ್ವರೋಂ ಸಶಕ್ತಿಸಾಂಗ ಸಾಯುಧ ಸವಾಹನ ಸಪರಿವಾರ ಓಂ ಬುಧಗ್ರಹ ದೇವತಾ ಅತ್ರಾಗಚ್ಛಾಗಚ್ಛ । ಆವಾಹಯಾಮಿ ಆವಾಹಿತೋ ಭವ । ಸ್ಥಾಪಯಾಮಿ, ಸ್ಥಾಪಿತೋಭವ । ಸನ್ನಿಹಿತೋಭವ । ಸಮ್ಮುಖೋಭವ । ಅವಕುಂಠಿತೋಭವ । ವರದೋಭವ ।

ಎಂದು ಷಣ್ಮುದ್ರೆಗಳನ್ನು ತೋರಿಸಿ,

"ಓಂ ಬುಧಗ್ರಹಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ" ಎಂದು ನಮಸ್ಕರಿಸಿ "ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ" ಎಂದು ಆಸನವನ್ನು ಮುಟ್ಟಿ 'ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ "ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ" ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ "ಮುಖೇ ಆಚಮನೀಯಂ ಸಮರ್ಪಯಾಮಿ" ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು. ನಂತರ ಓಂ ಬುಧಗ್ರಹಾಯ ನಮಃ ಈ ಮಂತ್ರದಿಂದ ಭಸ್ಮ ಹಸಿರು ಗಂಧ, ಹಸಿರು ಅಕ್ಷತೆ, ಉತ್ತರಾಣಿ ಎಲೆ, ಹೂಗಳಿಂದ ಪೂಜಿಸಿ ಕಲಶದ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ನಾಮಗಳಿಗೆ ಭಸ್ಮ ಗಂಧ, ಕುಂಕುಮ, ದತ್ತೂರ ಪುಷ್ಪಗಳಿಂದ ಪೂಜಿಸಿ ಧೂಪ, ದೀಪಗಳನ್ನು ಬೆಳಗಿ ಹಾಲು, ಮಿಶ್ರ ಅನ್ನವನ್ನು ನೈವೇದ್ಯ ಮಾಡಿ ತಾಂಬೂಲವನ್ನು ಸಮರ್ಪಿಸಿ ಪೂಜಾ ಸಮಾಪ್ತಿ ಮಾಡಬೇಕು.

| | | |
|---|---|---|
| ನಾಮಗಳು– ಅಥರ್ವ ಶಿರೋಧೀಶಃ | – | ಪೂರ್ವದಿಕ್ಕು |
| ಶಶಿಪುತ್ರಃ | – | ದಕ್ಷಿಣ ದಿಕ್ಕು |
| ಕಳಾನಿಧಿಃ | – | ಪಶ್ಚಿಮ ದಿಕ್ಕು |
| ಅತ್ರಿಗೋತ್ರ ಸಮುತ್ಪನ್ನಃ | – | ಉತ್ತರ ದಿಕ್ಕು |

ಅಥರ್ವ ಶಿರೋಧೀಶಾಯ ನಮಃ ಶಶಿಪುತ್ರಾಯ ನಮಃ

ಕಳಾನಿಧಯೇ ನಮಃ ಅತ್ರಿಗೋತ್ರ ಸಮುತ್ಪನ್ನಾಯ ನಮಃ

ಈ ಮಂತ್ರಗಳಿಂದ ಪೂಜಿಸಬೇಕು,

ಬಳಿಕ ಓರ್ವ ಬ್ರಾಹ್ಮಣ ಅಥವಾ ಜಂಗಮ ಮೂರ್ತಿಯನ್ನು ಭಸ್ಮ, ಗಂಧ, ಹಳದಿ ವಸ್ತ್ರ, ಪುಷ್ಪಹಾರಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಬಂಗಾರದ ಕಲಶವನ್ನು ದಕ್ಷಿಣೆ ತಾಂಬೂಲ ಸಹಿತವಾಗಿ ಭಕ್ತಿಪೂರ್ವಕವಾಗಿ ದಾನ ಕೊಡಬೇಕು.

ದಾನಮಂತ್ರ- ಮುದ್ಗಬೀಜೋ ಪರಿಗತ ಪಾತ್ರಸ್ಥಂ ಚಂದ್ರಪುತ್ರಕಂ।
ದದಾಮ್ಯಾಯುಷ್ಯ ಸಿದ್ಧ್ಯರ್ಥಂ ಬುಧದೋಷಾಯ ಪನುತ್ತಯೇ॥

ಈ ಪ್ರಕಾರ ಭಕ್ತಿ ಪುರಸ್ಸರವಾಗಿ ದಾನ ಕೊಡುವದರಿಂದ ಸರ್ವದೋಷ ಗಳಿಂದಲೂ, ಸಮಸ್ತಬಾಧೆಗಳಿಂದಲೂ ಮುಕ್ತನಾಗಿ ಸೌಭಾಗ್ಯ ಸಂಪನ್ನನಾಗಿ ಶತಾಯುಷಿಯಾಗಿ (100 ವರ್ಷ ಆಯುಷ್ಯ) ಸುಖಿಯಾಗಿ ಬಾಳುವನು, ಎಂಬುದಾಗಿ ಯಾಮಳ ತಂತ್ರದಲ್ಲಿ ಉಕ್ತವಾಗಿದೆ.



## ಬುಧದಶಾ ಬುಧಭುಕ್ತಿಯಲ್ಲಿ ಬುಧ ಪ್ರೀತಿಕರ ಲಕ್ಷ್ಮೀನಾರಾಯಣ ದಾನವು

ಜನನ ಲಗ್ನ ಕುಂಡಲಿಯಲ್ಲಿ ಬುಧನು 6–8–12 ಸ್ಥಾನಗಳಲ್ಲಿದ್ದರೆ, 2–7 ನೆಯ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ, ಕ್ರೂರಾಂಶದಲ್ಲಿದ್ದರೆ, ಪಾಪ ಗ್ರಹಗಳೊಡನೆ ಕೂಡಿದ್ದರೆ, ಬುಧ ದಶಾ ಬುಧ ಭುಕ್ತಿಯಲ್ಲಿ ಧನಹಾನಿಯು, ಮನೋವ್ಯಥೆಯು, ಕಾರಾಗೃಹ ವಾಸವು, ಬಂಧು ದ್ವೇಷವು, ಬಂಧು ಹಾನಿಯು, ಜ್ವರ ಪೀಡೆಯು, ಅಪಮೃತ್ಯುಭಯವು. ಈ ದೋಷ ಪರಿಹಾರಕ್ಕಾಗಿ ವಿಷ್ಣು ಸಹಸ್ರ ನಾಮಗಳನ್ನು ಜಪಿಸಿ ಚಂದ್ರದಶಾ ಬುಧ ಭುಕ್ತಿಯಲ್ಲಿ ಹೇಳಿದಂತೆ (ಪುಟ 57 ನೋಡಿರಿ) ಲಕ್ಷ್ಮೀನಾರಾಯಣ ಪ್ರತಿಮಾ ದಾನಮಾಡುವದರಿಂದ ಕ್ಷೇಮವಾಗುವದು.



## ಬುಧದಶಾ ಕೇತುಭುಕ್ತಿಯಲ್ಲಿ ಕೇತು ಪ್ರೀತಿಕರ ಮಹಿಷೀ (ಎಮ್ಮೆ) ದಾನವು

ಜನನ ಲಗ್ನಕುಂಡಲಿಯಲ್ಲಿ ಕೇತು 6–8–12 ಸ್ಥಾನಗಳಲ್ಲಿದ್ದರೆ, 2–7 ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ, ಕ್ರೂರಗ್ರಹಗಳಿಂದ ನಿರೀಕ್ಷಿಸಲ್ಪಟ್ಟರೆ, ಬುಧದಶಾ ಕೇತು ಭುಕ್ತಿಯಲ್ಲಿ ವಾತರೋಗದಿಂದ ಚಿತ್ತವಿಭ್ರಮವು, ಜ್ವರ ಗಂಡವು, ಪಾರ್ಶ್ವವಾಯು

ಮುಂತಾದ ರೋಗ ಭಯವು, ಧನಹಾನಿಯು, ಗುರು ಹಿರಿಯರೊಡನೆ ದ್ವೇಷವು, ಸ್ಥಾನ ನಷ್ಟವು, ಮಾನಭಂಗವು, ಅಪಕೀರ್ತಿಯು. ಈ ದೋಷ ಪರಿಹಾರಕ್ಕಾಗಿ ರವಿದಶಾ ರಾಹು ಭುಕ್ತಿಯಲ್ಲಿ ಹೇಳಿರುವಂತೆ ಮಹಿಷೀ (ಎಮ್ಮೆ) ದಾನ ಮಾಡಬೇಕು. (ಪುಟ 20 ನೋಡಿರಿ)

ಈ ಪ್ರಕಾರ ಯಾಮಳೋಕ್ತ ಪ್ರಕಾರ ದಾನ ಮಾಡುವದರಿಂದ ರೋಗ ಶಾಂತಿಯಾಗುವದು.



## ಬುಧದಶಾ ಶುಕ್ರಭುಕ್ತಿಯಲ್ಲಿ ಶುಕ್ರ ಪ್ರೀತಿಕರ ಶ್ವೇತಧೇನು (ಬಿಳಿಯ ಆಕಳು) ದಾನವು

ಜನನ ಲಗ್ನ ಕುಂಡಲಿಯಲ್ಲಿ ಶುಕ್ರನು ನೀಚನಾಗಿದ್ದರೆ ಅಸ್ತಂಗತನಾಗಿದ್ದರೆ ಪಾಪ ಗ್ರಹಗಳಿಂದ ಕೂಡಿದ್ದರೆ, 6–8–12, 2–7 ಸ್ಥಾನಗಳಲ್ಲಿದ್ದರೆ, ಆ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ, ಬುಧದಶಾ ಶುಕ್ರ ಭುಕ್ತಿಯಲ್ಲಿ ರೋಗಪೀಡೆಯು, ಹೆಂಡತಿಯ ವಿಯೋಗವು, ಮಾನಭಂಗವು, ಧನಹಾನಿಯು, ವಾಹನ ನಾಶವು, ಹೆಂಡತಿಯೊಡನೆ ವಿರೋಧವು, ಸ್ತ್ರೀದೋಷವು, ಬಂಧು ಕಲಹವು, ಮಿತ್ರರ ಹಾಗೂ ರಾಜ್ಯಾಧಿಕಾರಿಗಳ ವಿರೋಧವು. ಈ ದೋಷ ಪರಿಹಾರಕ್ಕಾಗಿ ರವಿದಶಾ ಚಂದ್ರಭುಕ್ತಿಯಲ್ಲಿ ತಿಳಿಸಿದಂತೆ (ಪುಟ 13 ನೋಡಿರಿ) ಬಿಳಿಯ ಆಕಳು ದಾನ ಮಾಡುವದರಿಂದ ಕ್ಷೇಮವಾಗುವದು.



## ಬುಧದಶಾ ರವಿಭುಕ್ತಿಯಲ್ಲಿ ರವಿಪ್ರೀತಿಕರ ಸೂರ್ಯ ಪ್ರತಿಮಾ ದಾನವು

ಜನನ ಲಗ್ನಕುಂಡಲಿಯಲ್ಲಿ ರವಿಯು 6–8–12 2–7 ಸ್ಥಾನಗಳಲ್ಲಿದ್ದರೆ ನೀಚ ರಾಶಿಗಳಲ್ಲಿದ್ದರೆ, ಪಾಪ ಗ್ರಹಗಳೊಡನೆ ಕೂಡಿದ್ದರೆ, ಶನಿ, ರಾಹು, ಕೇತುಗಳೊಡನೆ ಕೂಡಿದ್ದರೆ, ಪಾಪಗ್ರಹಗಳ ದೃಷ್ಟಿಯಲ್ಲಿದ್ದರೆ, ಬುಧದಶಾ ರವಿಭುಕ್ತಿಯಲ್ಲಿ ದೇಹದಲ್ಲಿ ಹುರುಕು, ಖಜ್ಜಿ, ಗಜಕರ್ಣ ಇತ್ಯಾದಿ ಚರ್ಮ ರೋಗಗಳು, ಹುಣ್ಣುಗಳ ಬಾಧೆಯು, ಮನಸ್ತಾಪವು, ಕಾರ್ಯ ಹಾನಿಯು, ಶತ್ರುಗಳ ಉಪದ್ರವವು, ಧನಹಾನಿಯು, ನಿತ್ಯ ಕಲಹವು, ಬಂಧುಗಳ ಹಾಗೂ ತಂದೆಯ ವಿಯೋಗವು, ನಾನಾ ರೀತಿಯಿಂದ ಧನ ನಷ್ಟವು, ಸಾಲದ ಬಾಧೆಯು, ಬಂಧನವು, ಸೆರೆಮನೆ ವಾಸವು, ಪಿತ್ತ ಕ್ಷಯಬಾಧೆಯು.

ಈ ದೋಷ ಪರಿಹಾರಕ್ಕಾಗಿ ಸೂರ್ಯ ಪ್ರತಿಮೆಯನ್ನು ದಾನ ಮಾಡಬೇಕೆಂದು ಹೇಮಾದ್ರಿಯಲ್ಲಿ ತಿಳಿಸಲಾಗಿದೆ.

ಕರ್ಕ ಹಾಗೂ ಮಕರ ಸಂಕ್ರಮಣ ಪುಣ್ಯ ಕಾಲಗಳಲ್ಲಿ ದೇವಾಲಯಾದಿ ಪುಣ್ಯಸ್ಥಳಗಳಲ್ಲಿ ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಪವಿತ್ರ ಸ್ಥಳದಲ್ಲಿ ಗೋದಿಯ ಗುಂಪೆಯನ್ನು ರಚಿಸಿ ಅದರ ಮೇಲೆ ಹರವಾದ ತಾಮ್ರದ ಪಾತ್ರೆಯನ್ನು ಇಟ್ಟು ಅದರಲ್ಲಿ ಏಳು ಕುದುರೆಗಳನ್ನು ಹೂಡಿದ ಬೆಳ್ಳಿಯ ರಥದಲ್ಲಿ ಬಂಗಾರದ ಸೂರ್ಯನ ಪ್ರತಿಮೆಯನ್ನು ಇರಿಸಿ ಯಜಮಾನನು ಆಚಮನ, ಪ್ರಾಣಾಯಾಮಗಳನ್ನು ಮಾಡಿ, ದೇಶಕಾಲಾದಿಗಳನ್ನು ಉಚ್ಚರಿಸಿ ಸಂಕಲ್ಪ ಮಾಡಬೇಕು.

"ಮಮ ಇಹಜನ್ಮನಿ ಜನ್ಮಾಂತರೇಷು ಸಂಭಾವಿತಾನಾಂ ಔಷಧಾದಿ ಪ್ರಯೋಗೇನ ನಾನಾ ಜನ್ಮ ಭ್ರಮಣ ಕರಣಾದೀನಾಂ ಭ್ರಮಣ ರೋಗನಿದಾನ ಭೂತಾನಾಂ। ಸರ್ವೇಷಾಂ ಪಾಪಾನಾಂ ನಿವೃತ್ತಿದ್ವಾರಾ ಶರೀರೇ ವರ್ತಮಾನ ಭ್ರಮಣ ರೋಗ ನಿದಾನ ಭೂತಾನಾಂ। ಸರ್ವೇಷಾಂ ಪಾಪಾನಾಂ ನಿವೃತ್ತಿದ್ವಾರಾ ಶರೀರೇ ವರ್ತಮಾನ ಭ್ರಮಣ ರೋಗ ಸಂಕ್ಷಯಾರ್ಥಂ। ಸರ್ವರೋಗ ನಿವಾರಣಾರ್ಥಂ ಸರ್ವಮಂಗಳಾ ಪ್ರಾಪ್ತ್ಯರ್ಥ್ಯಂ ದೃಢದೇಹ ತಯಾ ಶತವರ್ಷ ಜೀವಿತ್ವ ಸಿದ್ಧ್ಯರ್ಥಂ। ಸಕಲಾಭೀಷ್ಟ ಪ್ರದಾಯಕ ಶ್ರೀ ಸೂರ್ಯನಾರಾಯಣ ಪ್ರೀತ್ಯರ್ಥಂ ಗೌತಮೋಕ್ತಪ್ರಕಾರೇಣ ಸೂರ್ಯ ಪ್ರತಿಮಾ ದಾನಂ ಕರಿಷ್ಯೇ, ತದಾದೌ ಮಹಾಗಣಪತಿ ಪೂಜಾಂ ಕರಿಷ್ಯೇ"

ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಿ

ಧ್ಯಾನಂ- ಪದ್ಮಾಸನಃ ಪದ್ಮಕರೋ ದ್ವಿಬಾಹುಃ ಪದ್ಮದ್ಯುತಿಃ ಸಪ್ತ ತುರಂಗಬಾಹುಃ।
ದಿವಾಕರೋ ಲೋಕ ಗುರುಃ ಕರೀಟೀಮಯಿ ಪ್ರಸಾದಂ ವಿದಧಾತು ದೇವಃ

ಆಸತ್ಯೇನ ರಜಸಾ ವರ್ತಮಾನೋ ನಿವೇಶಯನ್ನ ಮೃತಂ ಮರ್ತ್ಯಂಚ ಹಿರಣ್ಯಯೇನ ಸವಿತಾ ರಥೇನಾ ದೇವೋಯಾತಿ ಭುವ ನಾನಿಪಶ್ಯನ್ ॥

ಎಂದು ಧ್ಯಾನಿಸಿ

ಓಂ ಭೂಃ ಸೂರ್ಯಗ್ರಹ ಮಾವಾಹಯಾಮಿ। ಓಂ ಭುವಃ ಸೂರ್ಯ ಗ್ರಹಮಾವಾಹಯಾಮಿ। ಓಂ ಸುವಃ ಸೂರ್ಯ ಗ್ರಹಮಾವಾಹಯಾಮಿ। ಓಂ ಭೂರ್ಭುವಃ ಸುವಃ ಸೂರ್ಯಗ್ರಹ ಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು. ಮತ್ತು

ಓಂ ಭೂರ್ಭುವಃ ಸ್ವರೋಂ ಸಶಕ್ತಿ ಸಾಂಗ, ಸಾಯುಧ, ಸವಾಹನ, ಸಪರಿವಾರ ಓಂ ಸೂರ್ಯಗ್ರಹ ದೇವತಾ ಅತ್ರಾಗಚ್ಛಾಗಚ್ಛ। ಆವಾಹಯಾಮಿ ಆವಾಹಿತೋಭವ।

ಸ್ಥಾಪಯಾಮಿ, ಸ್ಥಾಪಿತೋಭವ । ಸನ್ನಿಹಿತೋಭವ । ಸಮ್ಮುಖೋಭವ । ಅವಕುಂಠಿತೋಭವ। ವರದೋಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ,

"ಓಂ ಸೂರ್ಯದೇವಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ" ಎಂದು ನಮಸ್ಕರಿಸಿ "ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ" ಎಂದು ಆಸನವನ್ನು ಮುಟ್ಟಿ "ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ" ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ, "ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ" ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ "ಮುಖೇ ಆಚಮನೀಯಂ ಸಮರ್ಪಯಾಮಿ" ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು. ನಂತರ ಪ್ರತಿಮೆಗೆ ಪಂಚಾಮೃತ ಅಭಿಷೇಕವನ್ನು ಮಾಡಿ ಒಂದು ಕೆಂಪು ವಸ್ತ್ರವನ್ನು ಹಾಸಿ, ಇನ್ನೊಂದು ಕೆಂಪು ವಸ್ತ್ರವನ್ನು ಹೊದಿಸಿ ಭಸ್ಮ ಕೆಂಪು ಗಂಧ, ಕುಂಕುಮ, ಕೆಂಪು ಅಕ್ಷತೆ, ಎಕ್ಕೆಪತ್ರಿ, ಎಕ್ಕೆಹೂಗಳು, ಧೂಪ, ದೀಪ, ನೈವೇದ್ಯ, ತಾಂಬೂಲ, ದಕ್ಷಿಣೆಗಳನ್ನು ಸಮರ್ಪಿಸಿ ಪೂಜಾ ಸಮಾಪ್ತಿ ಮಾಡಬೇಕು. ನಂತರ ಸೂರ್ಯನ ಅಧಿದೇವತಾ, ಅಗ್ನಿಯನ್ನೂ, ಪ್ರತ್ಯಧಿದೇವತಾ ರುದ್ರನನ್ನೂ ಸ್ಥಾಪಿಸಿ ಪೂಜಿಸಬೇಕು.

ನಂತರ ಸೂರ್ಯ ದಕ್ಷಿಣ ಭಾಗದಲ್ಲಿರುವ ಕಲಶದಲ್ಲಿ ಅಥವಾ ಬೆಟ್ಟಡಿಕೆಯಲ್ಲಿ—

"ಅಗ್ನಿಂದೂತಂ ವೃಣೀಮಹೇಹೋತಾರಂ ವಿಶ್ವವೇದಸಂ । ಅಸ್ಯಯಜ್ಞಸ್ಯ ಸುಕ್ರತುಂ" ॥

"ಸೂರ್ಯಗ್ರಹಾಧಿದೇವತಾಂ ಅಗ್ನಿಂ ಸಾಂಗಂ ಸವಾಹನಂ ಸಶಕ್ತಿಪತ್ನೀ ಪುತ್ರ ಪರಿವಾರ ಸಮೇತಂ ಸೂರ್ಯಗ್ರಹಸ್ಯ ದಕ್ಷಿಣತಃ ಅಗ್ನಿಂ ಆವಾಹಯಾಮಿ । ಸ್ಥಾಪಯಾಮಿ। ಪೂಜಯಾಮಿ।"

ಎಂದು ಉಚ್ಚರಿಸಿ ಸೂರ್ಯನ ಅಧಿದೇವತೆಯಾದ ಅಗ್ನಿಯನ್ನು ಸೂರ್ಯನ ಬಲಭಾಗದಲ್ಲಿ ಆವಾಹಿಸಿ ಸ್ಥಾಪಿಸಿ ಪೂಜಿಸಬೇಕು.

ನಂತರ ಸೂರ್ಯನ ಉತ್ತರ ಭಾಗದಲ್ಲಿರುವ ಕಲಶದಲ್ಲಿ ಅಥವಾ ಬೆಟ್ಟಡಿಕೆಯಲ್ಲಿ—

"ಕದ್ರುದ್ರಾಯ ಪ್ರಚೇತಸೇ ಮೀಢುಷ್ಟಮಾಯ ತವ್ಯಸೇ । ವೋಚೇಮಶಂತಮಗ್‌ಂಹೃದೇ ॥"

ಸೂರ್ಯಗ್ರಹಸ್ಯ ಪ್ರತ್ಯಧಿದೇವತಾಂ ರುದ್ರ ಸಾಂಗಂ ಸಾಯುಧಂ ಸವಾಹನಂ ಸಶಕ್ತಿ ಪತ್ನೀಪುತ್ರ ಪರಿವಾರ ಸಮೇತಂ ಸೂರ್ಯಗ್ರಹಸ್ಯ ಉತ್ತರತಃ ರುದ್ರಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಎಂದು ಉಚ್ಚರಿಸಿ ಸೂರ್ಯನ ಪ್ರತ್ಯಧಿದೇವತೆಯಾದ ರುದ್ರನನ್ನು ಸೂರ್ಯನ ಎಡಭಾಗದಲ್ಲಿ ಆವಾಹಿಸಿ ಸ್ಥಾಪಿಸಿ ಪೂಜಿಸಬೇಕು.

ಆಮೇಲೆ ಗುರುಗಳ ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ ''ಯಜಮಾನಸ್ಯ ಚಿಕೀರ್ಷಿತ ಸರ್ವರೋಗ ಹರಸೂರ್ಯ ಪ್ರತಿಮಾದಾನಾಂಗ ವರುಣಕಲಶ ಸ್ಥಾಪನಂ ಹೋಮಂಚ ಕರಿಷ್ಯೇ'' ಎಂದು ಸಂಕಲ್ಪವನ್ನು ಮಾಡಿ ಸೂರ್ಯದೇವನನ್ನು ಧ್ಯಾನಿಸಬೇಕು.

ಧ್ಯಾನಂ- ಸಪ್ತಾಶ್ವರಥಮಾ ರೂಢಾಂ ಪದ್ಮಹಸ್ತಾಂ ಸ್ವಲಂಕೃತಾಂ।
ಕುಂಕುಮೇನಾನು ಲಿಪ್ತಾಂಗೀಂ ರಕ್ತವಸ್ತ್ರಯುಗಾವೃತಾಂ।
ಹಾರಕೇಯೂರ ಕಟಕ ಕುಂಡಲಾದಿ ವಿಭೂಷಿತಾಂ।
ಧ್ಯಾಯಾಮಿ ಸೂರ್ಯಮೂರ್ತಿಂತಾಂಸರ್ವಕಾಮಫಲ ಪ್ರದಾಂ।

ಈ ಪ್ರಕಾರ ಸೂರ್ಯನನ್ನು ಧ್ಯಾನಮಾಡಿ ಪುನಃ ಸೂರ್ಯದೇವನನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು ಮತ್ತು ಒಂದು ಕಲಶವನ್ನು ಸ್ಥಾಪಿಸಿ ಆ ಕಲಶದಲ್ಲಿ ವರುಣನನ್ನು ಆವಾಹನೆ ಮಾಡಿ ಸ್ಥಾಪಿಸಿ ಪೂಜಿಸಬೇಕು ಮತ್ತು ಹೋಮವನ್ನು ಮಾಡಬೇಕು. ''ಚಿತ್ರದೇವಾನಾಂ'' ಈ ಮಂತ್ರದಿಂದ ಅರ್ಕಸಮಿತ್ ಹೋಮವನ್ನೂ, ''ತಚ್ಚಕ್ಷುರಿತಿ'' ಈ ಮಂತ್ರದಿಂದ ಆಜ್ಯ ಹೋಮವನ್ನೂ ''ಉದುತ್ಯಂ ಜಾತವೇವಸಂ'' ಈ ಮಂತ್ರದಿಂದ ತಿಲ ಹೋಮವನ್ನೂ ಪ್ರತ್ಯೇಕವಾಗಿ 108 ಸಾರೆ ಮಾಡಿ ''ಸ್ವಿಷ್ಟಕೃದಾದ್ಯುಷ್ಟಾಂತಂ ತತಃ ಮಧುಮಿಶ್ರ ಲಾಜೈಃ ಆಕೃಷ್ಣೇನ'' ಈ ಪ್ರಕಾರ ಹವನ ಮಾಡಿ ಅನಂತರ ಕುಷ್ಠರೋಗಾದಿ ದೇವತಾ ಯೈದುರ್ಗಾಯೈ ಸಮಿತ್ತು ಆಜ್ಯದಿಂದ 108 ಸಾರೆ ಪ್ರತ್ಯೇಕವಾಗಿ ಆಹುತಿ ಕೊಟ್ಟು ಹೋಮವನ್ನು ಸಮಾಪ್ತಿಮಾಡಬೇಕು. ಬಳಿಕ ಯಜಮಾನನು ಭದ್ರಪೀಠದಲ್ಲಿ ಕುಳಿತುಕೊಂಡು ''ಅಕ್ಷೀಭ್ಯಾಂ'' ಸೂಕ್ತವನ್ನು (ಪುಟ ..... ನೋಡಿರಿ) ಮತ್ತು ''ಶನ್ನೋದೇವಿ'' ಅನುವಾಕ್ಯವನ್ನು ಜಪಿಸಬೇಕು. ಅನಂತರ ಯಜಮಾನನು ಉತ್ತರ ದಿಕ್ಕಿಗೆ ಮುಖಮಾಡಿ ಕುಳಿತುಕೊಂಡು ಬಂಗಾರದ ಸೂರ್ಯಪ್ರತಿಮೆಯನ್ನು ಮತ್ತು ಬಾಳೆಯ ಹಣ್ಣುಗಳನ್ನು ಷೋಡಶೋಪಚಾರಗಳಿಂದ ಪುನಃ ಪೂಜಿಸಬೇಕು. ನಂತರ ಓರ್ವ ಬ್ರಾಹ್ಮಣ ಅಥವಾ ಜಂಗಮ ಮೂರ್ತಿಯನ್ನು ಉತ್ತರ ದಿಕ್ಕಿಗೆ ಮುಖಮಾಡಿ ಕೂಡ್ರಿಸಿ ಗಂಧ, ಅಕ್ಷತೆ, ವಸ್ತ್ರ, ಪುಷ್ಪ ಹಾರಾದಿಗಳಿಂದ ಪೂಜಿಸಿ ''ಆದಿತ್ಯ ಸೂರ್ಯದ್ಯುಮಣಿ'' ಮಂತ್ರವನ್ನು ಉಚ್ಚರಿಸುತ್ತ ಸೂರ್ಯ ಪ್ರತಿಮೆಯನ್ನು ದಾನ ಕೊಡಬೇಕು.

ಕದಳೀದಾನ ಮಂತ್ರ- ಕದಳೀತ್ವಂ ಹಿ ದೇವಾನಾಂ ಪಿತೃಣಾಂದೇವಿ ಶರ್ಮದೇ।
ಲಕ್ಷ್ಮ್ಯಾಚ ಶಕ್ಯಾ ಪಾರ್ವತ್ಯಾ ದೇವತ್ಯಾದಿ ಭಿರೇವಚ।

ಸಾವಿತ್ರ್ಯಾ ರಂಭಯಾಚೈವ ಕಾರ್ಯಾರ್ಥಂ ಪೂಜಿತಾಪುರಾ।
ಅಂಗಪ್ರತ್ಯಂಗಜಂ ಸರ್ವಂ ಕುಷ್ಠಂ ಜಾತ ಮಪಾಕುರು॥

"ಅಸ್ಮೈ ಅಹಂ ಇಮಾಂಗೋಮಯಾನುಲೇಪಿತ ರಂಗವಲ್ಯಾದಿ ರಚಿತ ಭೂಭಾಗೋಪರಿ ದ್ರೋಣಪರಿಮಾಣ ಗೋಧೂಮ ರಾಶ್ಯುಪರಿಸ್ಥಿತಿ ರಜತ ರಥಾರೂಢಾಂ ಪಲಾದಿಪರಿಮಿತಿ ಸ್ವರ್ಣನಿರ್ಮಿತಾಂ ರಕ್ತವಸ್ತ್ರ ವೇಷ್ಟಿತಾಂ ಸರ್ವಲಕ್ಷಣ ಲಕ್ಷಿತಾಂ ಸ್ವರ್ಚಿತಾಂ ರಂಭಾಫಲೋಪೇತಾಂ ಸೂರ್ಯ ಪ್ರತಿಮಾಂ ಮಮಪೂರ್ವೋಕ್ತ ಸರ್ವರೋಗ ನಿವಾರಣಾರ್ಥಂ ಸರ್ವಮಂಗಳಾ ವಾಪ್ತ್ಯರ್ಥಂ ದೃಢದೇಹತಯಾ ಶತವರ್ಷ ಜೀವಿತ್ವ ಸಿದ್ಧ್ಯರ್ಥಂ ಸಕಲಾಭೀಷ್ಟ ಪ್ರದಾಯಕ ಶ್ರೀ ಸೂರ್ಯನಾರಾಯಣ ಪ್ರೀತ್ಯರ್ಥಂ ಸೂರ್ಯ ಪ್ರತಿಮಾ ದಾನಂ ಸದಕ್ಷಿಣಾಕಂ ಸತಾಂಬೂಲಂತುಭ್ಯಂ ಸಂಪ್ರದದೇ ನಮಮ ನಮಮ".

ಎಂದು ಶಕ್ತ್ಯಾನುಸಾರ ದಕ್ಷಿಣೆ ಸಹಿತ ಸೂರ್ಯ ಪ್ರತಿಮೆ ಹಾಗೂ ಬಾಳೆಯ ಫಲಗಳನ್ನು ದಾನ ಕೊಡಬೇಕು ಮತ್ತುಗಣಾರಾಧನೆ ಮಾಡಿಸಬೇಕೆಂದು ವೃದ್ಧಗೌತುಮ ಕಲ್ಪದಲ್ಲಿಹೇಳಲಾಗಿದೆ.



## ಬುಧದಶಾ ಚಂದ್ರಭುಕ್ತಿಯಲ್ಲಿ ಚಂದ್ರಪ್ರೀತಿಕರ ರಜತ (ಬೆಳ್ಳಿ) ದಾನವು

ಜನನ ಲಗ್ನ ಕುಂಡಲಿಯಲ್ಲಿ ಚಂದ್ರನು ಕ್ಷೀಣನಾಗಿದ್ದರೆ, ನೀಚರಾಶಿಗಳಲ್ಲಿದ್ದರೆ, ಕ್ರೂರ ಗ್ರಹಗಳೊಡನೆ ಕೂಡಿದ್ದರೆ, 6–8–12 ಸ್ಥಾನಗಳಲ್ಲಿದ್ದರೆ 2–7 ನೆಯ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ ಬುಧದಶಾ ಚಂದ್ರಭುಕ್ತಿಯಲ್ಲಿ ಭಯವು, ಶೀತರೋಗ ಪೀಡೆಯು, ಅರ್ಥನಾಶವು, ಬಂಧು ದ್ವೇಷವು, ಕಾರ್ಯಹಾನಿಯು, ಬುದ್ಧಿಭ್ರಂಶವು, ಮೃತ್ಯುಭಯವು. ಈ ದೋಷ ಪರಿಹಾರಕ್ಕಾಗಿ ಬೆಳ್ಳಿಯನ್ನು ದಾನ ಮಾಡಬೇಕು ಎಂಬುದಾಗಿ ಹೇಮಾದ್ರಿಯಲ್ಲಿತಿಳಿಸಿದೆ.

ಯಜಮಾನನು ಕರ್ಕ ಅಥವಾ ಮಕರ ಸಂಕ್ರಮಣ ಪುಣ್ಯ ಕಾಲಗಳಲ್ಲಿ ದೇವಾಲಯ ಮೊದಲಾದ ಪವಿತ್ರ ಸ್ಥಾನಗಳಲ್ಲಿ ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಭೂಭಾಗದಲ್ಲಿಬಿಳಿಯ ವಸ್ತ್ರವನ್ನು ಹಾಸಿ ಅದರ ಮೇಲೆ ಶಕ್ತ್ಯಾನುಸಾರ ಬೆಳ್ಳಿಯನ್ನು ಇಟ್ಟು,

ಕರ್ತೃವು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ,

"ಮಮ ಇಹಜನ್ಮನಿ ಜನ್ಮಾಂತರೇಷು ಸಂಭಾವಿತ ಸಕಲ ಪಾಪ ಕ್ಷಯಾರ್ಥಂ ಸರ್ವರೋಗ ನಿವೃತ್ಯರ್ಥಂ ರೂಪಕಾಂತಿ ಸುಖಸೌಭಾಗ್ಯ ಸಮೃದ್ಧ್ಯರ್ಥಂ ತತ್ರಚಿರಕಾಲ ಜೀವಿತ್ವ ಸಿದ್ಧ್ಯರ್ಥಂ ಸೋಮಲೋಕ ನಿವಾಸ ಸಿದ್ಧ್ಯರ್ಥಂ ಸೋಮಾತ್ಮಕ ಶ್ರೀ ಮಹಾವಿಷ್ಣು ಪ್ರೀತಿಂ ಕಾಮಯಮಾನಃ ಸ್ಕಂದ ಪುರಾಣೋಕ್ತ ಪ್ರಕಾರೇಣ ರಜತ ದಾನಂ ಕರಿಷ್ಯೇ, ತದಾದೌ ಮಹಾ ಗಣಪತಿ ಪೂಜಾಂ ಕರಿಷ್ಯೇ" ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಬೇಕು.

ಬಳಿಕ ಆ ಬೆಳ್ಳಿಯಲ್ಲಿ ಚಂದ್ರನನ್ನು ಆವಾಹನೆ ಮಾಡಿ ಸ್ಥಾಪಿಸಿ ಪೂಜಿಸಬೇಕು.

ಧ್ಯಾನಂ- "ಆಪ್ಯಾಯಸ್ವಸಮೇತುತೇ ವಿಶ್ವತಸ್ಸೋಮವೃಷ್ಣಿಯಂ ಭವಾ ವಾಜಸ್ಯ ಸಂಗಥೇ"

ಶ್ವೇತಾಂಬರಃ ಶ್ವೇತ ವಪುಃ ಕಿರೀಟೀ ಶ್ವೇತ ದ್ಯುತಿರ್ದಂಡ ಧರೋ
ದ್ವಿಬಾಹುಃ। ಚಂದ್ರೋ ಮೃತಾತ್ಮಾ ವರದಃ ಕಿರೀಟೀ ಶ್ರೇಯಾಂಸಿ
ಮಹ್ಯಂ ವಿದಧಾತು ದೇವಃ

ಎಂದು ಧ್ಯಾನಿಸಿ,

ಓಂ ಭೂಃ ಚಂದ್ರಗ್ರಹ ಮಾವಾಹಯಾಮಿ । ಓಂ ಭುವಃ ಚಂದ್ರಗ್ರಹ ಮಾವಾಹಯಾಮಿ। ಓಂ ಸುವಃ ಚಂದ್ರಗ್ರಹ ಮಾವಾಹಯಾಮಿ। ಓಂ ಭೂರ್ಭುವಃ ಸುವಃ ಚಂದ್ರಗ್ರಹ ಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಎಂದು ಬೆಳ್ಳಿಯ ಮೇಲೆ ಅಕ್ಷತೆಗಳನ್ನು ಹಾಕಬೇಕು, ನಂತರ

ಓಂ ಭೂರ್ಭುವಃ ಸ್ವರೋಂ ಸಶಕ್ತಿ ಸಾಂಗಸಾಯುಧ ಸವಾಹನ ಸಪರಿವಾರ ಓಂ ಚಂದ್ರಗ್ರಹ ಆಗಚ್ಛಾಗಚ್ಛ। ಆವಾಹಯಾಮಿ, ಆವಾಹಿತೋ ಭವ। ಸ್ಥಾಪಯಾಮಿ, ಸ್ಥಾಪಿತೋಭವ । ಸನ್ನಿಹಿತೋಭವ । ಸಮ್ಮುಖೋಭವ । ಅವಕುಂಠಿತೋಭವ । ವರದೋಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ,

"ಓಂ ಸೋಮಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ".

ಎಂದು ನಮಸ್ಕರಿಸಿ ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ" ಎಂದು ಆಸನವನ್ನು ಮುಟ್ಟಿ "ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ" ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ "ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪ ಯಾಮಿ" ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ '"ಮುಖೇ ಆಚಮನೀಯಂ ಸಮರ್ಪಯಾಮಿ". ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು ಮತ್ತು

"ಓಂ ಸೋಮಾಯ ನಮಃ" ಈ ಮಂತ್ರದಿಂದ ಷೋಡಶೋಪಚಾರ ಪೂಜೆಯನ್ನು ಮಾಡಿ,

ಓರ್ವ ಬ್ರಾಹ್ಮಣನನ್ನು ಅಥವಾ ಜಂಗಮ ಮೂರ್ತಿಯನ್ನು ಸೋಮ ಸ್ವರೂಪನೆಂದು ಭಾವಿಸಿ ಆತನನ್ನು ವಸ್ತ್ರ, ಗಂಧ, ಪುಷ್ಪಾದಿಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಆ ರಜತ (ಬೆಳ್ಳಿ) ವನ್ನು ದಕ್ಷಿಣೆ ಸಹಿತ ದಾನ ಮಾಡಬೇಕು.

ಮಂತ್ರ- ಪಿತ್ರೂಣಾಂ ವಲ್ಲಭಂ ಯಸ್ಮಾದ್ಧರೀಮ ದ್ವೋಶ್ಚ ಶಿವಸ್ಯಚ।
ರಜತಂ ಪಾಹಿನಸ್ತಸ್ಮಾದ್ದುಃಖ ಸಂಸಾರಸಾಗರಾತ್॥
ರುದ್ರನೇತ್ರ ಸಮುದ್ಭೂತಂ ರಜತಂ ಪಿತೃವಲ್ಲಭಂ।
ತಸ್ಮಾದಸ್ಯ ಪ್ರದಾನೇನ ಅತಶ್ಯಾಂತಿಂ ಪ್ರಯಚ್ಛಮೇ॥
ಅಸ್ಮೈ ಬ್ರಾಹ್ಮಣಾಯ ಸೋಮ ಸ್ವರೂಪಾಯ ಸೋಮ
ಪ್ರೀತ್ಯರ್ಥಂ ಅಹಂ ಫಲಾದಿ ಪರಿಮಿತ ರಜತಂ ಪೂರ್ವೋಕ್ತ
ಫಲಕಾಮಯ ಮಾನ ಸ್ತುಭ್ಯಮಿದಂ ಸಂಪ್ರದದೇ ನಮಮ ನಮಮ।

ಎಂದು ಶಕ್ತ್ಯಾನುಸಾರ ದಕ್ಷಿಣೆ ಸಹಿತ ದಾನಕೊಟ್ಟು ಅವರಿಂದ ಆಶೀರ್ವಾದ ಪಡೆಯಬೇಕು ಎಂಬುದಾಗಿ ಸ್ಕಂದ ಪುರಾಣದಲ್ಲಿ ಹೇಳಲ್ಪಟ್ಟಿದೆ.



## ಬುಧದಶಾ ಕುಜ ಭುಕ್ತಿಯಲ್ಲಿ ಕುಜಪ್ರೀತಿಕರ ಅನಡ್ವಾಹ (ಎತ್ತು) ದಾನವು

ಜನನ ಲಗ್ನ ಕುಂಡಲಿಯಲ್ಲಿ ಕುಜನು 6–8–12 ಸ್ಥಾನಗಳಲ್ಲಿದ್ದರೆ, ನೀಚ ರಾಶಿಗಳಲ್ಲಿದ್ದರೆ, ಶತ್ರುಕ್ಷೇತ್ರಗತನಾಗಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, ಕ್ರೂರ ದ್ರೇಕಾಕ್ಕಣದಲ್ಲಿದ್ದರೆ, 2–7ನೆಯ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ ಬುಧ ದಶಾ ಕುಜ ಭುಕ್ತಿಯಲ್ಲಿ ಸಹೋದರರ ಮರಣವು, ಬಂಧು ಜನರೊಡನೆ ವಿರೋಧವು, ದೇಹಕ್ಕೆ ತಾಪವು, ಭೀತಿಯು, ವಿಷಭಯವು, ಶಸ್ತ್ರಗಳ ಭಯವು, ಸಮಾನ ಜನರೊಡನೆ ದ್ವೇಷವು, ಅಣ್ಣ-ತಮ್ಮಂದಿರೊಡನೆ ಕಲಹವು. ಈ ದೋಷ ಪರಿಹಾರಕ್ಕಾಗಿ ರವಿದಶಾ ಕುಜಭುಕ್ತಿಯಲ್ಲಿ ಹೇಳಿರುವಂತೆ (ಪುಟ 17 ನೋಡಿರಿ) ಅನಡ್ವಾಹ (ಎತ್ತು) ದಾನ ಮಾಡಬೇಕು.



## ಬುಧದಶಾ ರಾಹುಭುಕ್ತಿಯಲ್ಲಿ ರಾಹು ಪ್ರೀತಿಕರ ಛಾಗ ದಾನವು

ಜನನ ಲಗ್ನ ಕುಂಡಲಿಯಲ್ಲಿ ರಾಹು 1–4–7–10–5–9 ಸ್ಥಾನಗಳಲ್ಲಿದ್ದರೆ ಮತ್ತು 6–8–12ನೆಯ ಸ್ಥಾನಗಳಲ್ಲಿದ್ದರೆ, ನೀಚರಾಶಿಗಳಲ್ಲಿನೀಚಾಂಶಗಳಲ್ಲಿದ್ದರೆ, ಕ್ರೂರ ಗ್ರಹಗಳೊಡನೆ ಕೂಡಿದ್ದರೆ ಬುಧದಶಾ ರಾಹುಭುಕ್ತಿಯಲ್ಲಿ ವಿಷ (ಮಾಟ, ಮದ್ದು) ಭಯವು, ಚೋರಬಯವು, ಅಗ್ನಿಭಯವು. ಹೆಂಡತಿಗೆ ದುಃಖವು, ಆಸ್ತಿ ನಾಶವು, ರೋಗೋಪದ್ರವವು, ಮೃತ್ಯುಭಯವು. ರಾಹು, ಕರ್ಕ, ಸಿಂಹ, ಕುಂಭ ರಾಶಿಗಳಲ್ಲಿದ್ದರೆ ಕಲಹವು. ಈ ದೋಷ ಪರಿಹಾರಕ್ಕಾಗಿ ಸಹಸ್ರ ರುದ್ರಜಪವನ್ನು ಮಾಡಬೇಕು. (ಅತಿರುದ್ರ, ಮಹಾರುದ್ರ ವಗೈರೆ ಶ್ರೀ ರುದ್ರಪೂಜೆಯ ವಿಧಾನವು ನಮ್ಮ "ರುದ್ರಾಭಿಷೇಕ ವಿಧಾನ – ಶ್ರೀ ರುದ್ರ ಕನ್ನಡ ಟೀಕಾ ಸಹಿತ" ಈ ಗ್ರಂಥದಲ್ಲಿ ವಿಸ್ತಾರವಾಗಿ ಇದೆ.) ಮತ್ತು ಛಾಗ (ಮೇಕೆ) ದಾನವನ್ನು ರವಿದಶಾ ಶನಿಭುಕ್ತಿಯಲ್ಲಿ ತಿಳಿಸಿದಂತೆ ಮಾಡುವದರಿಂದ ಕ್ಷೇಮವಾಗುವದು (ಪುಟ 26 ನೋಡಿರಿ)



## ಬುಧದಶಾ ಗುರುಭುಕ್ತಿಯಲ್ಲಿ ಗುರು ಪ್ರೀತಿಕರ ಕಾಂಚನ ಪ್ರತಿಮಾ ದಾನವು

ಜನನ ಲಗ್ನ ಕುಂಡಲಿಯಲ್ಲಿ ಗುರು ನೀಚನಾಗಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, ಕ್ರೂರದ್ರೇಕ್ಕಾಣದಲ್ಲಿದ್ದರೆ, 6–8–12 ಸ್ಥಾನಗಳಲ್ಲಿದ್ದರೆ 2–7ನೆಯ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ ಬುಧದಶಾ ಗುರುಭುಕ್ತಿಯಲ್ಲಿ ದೇಹದಲ್ಲಿ ರೋಗೋಪದ್ರವವು. ಗುರು, ಶನಿ, ರಾಹುಗಳೊಡನೆ ಕೂಡಿದ್ದರೆ ಕಲಹವು, ಬಂಧು ನಾಶವು, ಚೋರಭಯವು, ಸರಕಾರದವರ ಪೀಡೆಯು, ಮಾತಾಪಿತೃಗಳ ವಿಯೋಗವು, ದುಃಖವು, ಜ್ವರ, ವ್ರಣ ಅಗ್ನಿ ಭಯವು, ಪಶುಗಳ ಹಾನಿಯು, ಆಸ್ತಿನಾಶವು. ಈ ದೋಷ ಪರಿಹಾರಕ್ಕಾಗಿ ಮೃತ್ಯುಂಜಯ ಜಪವನ್ನು ಮಾಡಿಸಬೇಕು ಮತ್ತು ಗುರುದೆಶೆಯಲ್ಲಿ ಹೇಳಿದಂತೆ ಸುವರ್ಣ ಪ್ರತಿಮಾ ದಾನವನ್ನು ಮಾಡಬೇಕು. (ಪುಟ 25 ನೋಡಿರಿ) (ಮೃತ್ಯುಂಜಯ ಜಪಕ್ಕಾಗಿ ಪುಟ 67 ನೋಡಿರಿ)



## ಬುಧದಶಾ ಶನಿ ಭುಕ್ತಿಯಲ್ಲಿ ಶನಿ ಪ್ರೀತಿಕರ ಮಹಿಷೀ (ಎಮ್ಮೆ) ದಾನವು

ಜನನ ಲಗ್ನ ಕುಂಡಲಿಯಲ್ಲಿ ಶನಿಯು 6–8–12 ಸ್ಥಾನಗಳಲ್ಲಿದ್ದರೆ, ನೀಚರಾಶಿಗಳಲ್ಲಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, ಕ್ರೂರ ಷಷ್ಟ್ಯಂಶದಲ್ಲಿದ್ದರೆ, 2–7ನೆಯ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ ಬುಧದಶಾ ಶನಿಭುಕ್ತಿಯಲ್ಲಿ ದೇಶದಿಂದ ದೇಶಕ್ಕೆ ತಿರುಗಾಟವು, ದೇಶಾಂತರ ವಾಸವು, ಅಧಿಕಾರ ಕಳೆದುಕೊಳ್ಳುವಿಕೆಯು, ಯುದ್ಧ ಭಯವು, ವಾತರೋಗ, ಶೂಲಿರೋಗ ಪೀಡೆಯು, ಸ್ವಗ್ರಾಮದಲ್ಲಿ ಅಪಮಾನವು. ಈ ದೋಷ ಪರಿಹಾರಕ್ಕಾಗಿ ರವಿದಶಾ ರಾಹು ಭುಕ್ತಿಯಲ್ಲಿ ಹೇಳಿದಂತೆ (ಪುಟ 20 ನೋಡಿರಿ) ಮಹಿಷೀ ದಾನವನ್ನು ಮಾಡಬೇಕು.



## ಕೇತುದಶಾದಲ್ಲಿ ಕೇತು ಪ್ರೀತಿಕರ ರಜತ (ಬೆಳ್ಳಿ) ಲೋಹ (ಕಬ್ಬಿಣ) ದಾನ

ಜನನ ಲಗ್ನ ಕುಂಡಲಿಯಲ್ಲಿ ಕೇತುವು ದುಷ್ಟ ಸ್ಥಾನಗಳಲ್ಲಿದ್ದರೆ ಕೇತು ದಶೆಯಲ್ಲಿ ಸರ್ವತ್ರ ಭಯವು, ಮಹಾರೋಗ ಪೀಡೆಯು, ಮೃತ್ಯು ಭಯವು, ಬಂಧು ವಿನಾಶವು, ಧನ–ಧಾನ್ಯ, ಪಶು ಹಾನಿಯು. ಈ ದೋಷ ಪರಿಹಾರಕ್ಕಾಗಿ ಬೆಳ್ಳಿಯಿಂದ ನಿರ್ಮಿಸಿದ ಕೇತು ಪ್ರತಿಮೆಯನ್ನು ಕಬ್ಬಿಣ ಪಾತ್ರೆಯಲ್ಲಿಟ್ಟು ಪೂಜಿಸಿ ದಾನಕೊಡುವದರಿಂದ ಯಜಮಾನನ ಆಯುಷ್ಯ, ಆರೋಗ್ಯ, ಭಾಗ್ಯಾದಿಗಳು ವೃದ್ಧಿಯಾಗುವವು.

ರವಿವಾರ, ಮಂಗಳವಾರ, ಶನಿವಾರಗಳಲ್ಲಿ ದೇವಾಲಯದಲ್ಲಿ ಅಥವಾ ಮನೆಯಲ್ಲಿ ಗೋಮಯದಿಂದ ಸಾರಿಸಿ, ರಂಗವಲ್ಯಾದಿಗಳಿಂದ ಅಲಂಕರಿಸಿದ ಪವಿತ್ರ ಸ್ಥಳದಲ್ಲಿ ಹುಳ್ಳಿಯ ರಾಶಿಯನ್ನು ರಚಿಸಿ ಅದರ ಮೇಲೆ ಕಬ್ಬಿಣ ಪಾತ್ರೆಯನ್ನು ಇಟ್ಟು ಅದರಲ್ಲಿ ಎಲ್ಲ ಬಣ್ಣ ಕೂಡಿದ ವಸ್ತ್ರವನ್ನು ಹಾಸಿ ಅದರ ಮೇಲೆ ಧ್ವಜಾಕಾರ ಕೇತು ಪ್ರತಿಮೆಯನ್ನು ಇಟ್ಟು,

ಕರ್ತೃವು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಾದಿಗಳನ್ನು ಉಚ್ಚರಿಸಿ 'ಮಮ ಇಹಜನ್ಮನಿ ಜನ್ಮಾಂತರೇಷು ಸಂಭಾವಿತ ಸಕಲ ಪಾಪಕ್ಷಯಾರ್ಥಂ ಸರ್ವರೋಗ ನಿವೃತ್ತ್ಯರ್ಥಂ, ಸುಖ ಸೌಭಾಗ್ಯ ಸಮೃದ್ಧ್ಯರ್ಥಂ ಚಿರಕಾಲ ಜೀವಿತ್ವ ಸಿದ್ಧ್ಯರ್ಥಂ ಕೇತು ಪ್ರೀತಿಕರ ಲೋಹಪಾತ್ರೇ, ರಜತ ಕೇತು ಪ್ರತಿಮಾದಾನಂ ಕರಿಷ್ಯೇ ತದಾತೌ ಮಹಾಗಣಪತಿ ಪೂಜಾಂ ಕರಿಷ್ಯೇ' ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಬೇಕು.

ಧ್ಯಾನಂ- ಕೇತುಂ ಕೃಣ್ವನ್ನಕೇತವೇ ಪೇಶೋಮರ್ಯಾ ಅಪೇಶಸೇ ಸಮುಷದ್ಭಿರಜಾಯಥಾಃ॥
ಧೂಮ್ರಾದ್ವಿ ಬಾಹವಸ್ಸರ್ವೇಗದಿನೋ ವಿಕೃತಾನನಾಃ।
ಗೃಧ್ರಾಸನಗತಾ ನಿತ್ಯಂ ಕೇತುವಸ್ಯುರ್ವರ ಪ್ರದಾ॥

ಎಂದು ಧ್ಯಾನಿಸಿ ನಂತರ

ಓಂ ಭೂಃ ಕೇತುಗ್ರಹ ಮಾವಾಹಯಾಮಿ। ಓಂ ಭುವಃ ಕೇತುಗ್ರಹ ಮಾವಾಹಯಾಮಿ। ಓಂ ಸುವಃ ಕೇತುಗ್ರಹ ಮಾವಾಹಯಾಮಿ। ಓಂ ಭೂರ್ಭುವಃ ಸುವಃ ಕೇತುಗ್ರಹ ಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ॥

ಎಂದು ಮೂರ್ತಿಯ ಮೇಲೆ ಅಕ್ಷತೆಗಳನ್ನು ಹಾಕಬೇಕು. ನಂತರ,

ಓಂ ಭೂರ್ಭುವಃ ಸ್ವರೋಂ ಸಶಕ್ತಿಸಾಂಗಸಾಯುಧ ಸವಾಹನ ಸಪರಿವಾರ ಓಂ ಕೇತು ಗ್ರಹ ದೇವತಾ ಅತ್ರಾಗಚ್ಛಾಗಚ್ಛ। ಆವಾಹಯಾಮಿ ಆವಾಹಿತೋಭವ। ಸ್ಥಾಪಯಾಮಿ, ಸ್ಥಾಪಿತೋಭವ। ಸನ್ನಿಹಿತೋಭವ। ಸಮ್ಮುಖೋಭವ। ಅವಕುಂಠಿತೋಭವ ವರದೋಭವ॥

ಎಂದು ಷಣ್ಮುದ್ರೆಗಳನ್ನು ತೋರಿಸಿ,

''ಓಂ ಕೇತುವೇ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ'' ಎಂದು ನಮಸ್ಕರಿಸಿ ''ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ'' ಆಸನವನ್ನು ಮುಟ್ಟಿ ''ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ'' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ ''ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ'' ಎಂದು ಹಸ್ತಗಳಿಗೆ ಅರ್ಘ್ಯ ವನ್ನು ಮುಟ್ಟಿಸಿ ''ಮುಖೇ ಆಚಮನೀಯಂ ಸಮರ್ಪಯಾಮಿ'' ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು. ನಂತರ ''ಓಂ ಕೇತುವೇ ನಮಃ'' ಈ ಮಂತ್ರದಿಂದ ಭಸ್ಮ ನೀಲಿಗಂಧ, ನೀಲಿ ಅಕ್ಷತೆ, ದರ್ಭೆ, ನೀಲಿ ಹೂಗಳಿಂದ ಪೂಜಿಸಿ ಧೂಪ, ದೀಪಗಳನ್ನು ಬೆಳಗಿ ಪಾಯಸವನ್ನು ಉಪ್ಪು, ಜೇನುತುಪ್ಪ, ನೈವೇದ್ಯವನ್ನು ಸಮರ್ಪಿಸಿ ಪೂಜಾ ಸಮಾಪ್ತಿ ಮಾಡಬೇಕು. ನಂತರ ಓರ್ವ ಬ್ರಾಹ್ಮಣ ಅಥವಾ ಜಂಗಮ ಮೂರ್ತಿಯನ್ನು ನೀಲಿ ವಸ್ತ್ರ, ಪುಷ್ಪಾದಿಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಶಕ್ತ್ಯಾನುಸಾರ ದಕ್ಷಿಣೆಯೊಂದಿಗೆ ದಾನ ಕೊಡಬೇಕು.

ಮಂತ್ರ- ಕುಳಿತ್ಥಧಾನ್ಯ ರಾಶಿಸ್ಥಂ ಲೋಹಪಾತ್ರೇ ಸ್ಥಿತಂ ವಿಭುಂ।
ಕೇತುರೂಪಂ ಪ್ರದಾಸ್ಯಾಮಿ ಸರ್ವಾರಿಷ್ಟಪ್ರಶಾಂತಯೇ॥

ಈ ಪ್ರಕಾರ ದಾನ ಮಾಡುವದರಿಂದ ಸರ್ವದೋಷಗಳು ನಿವಾರಣೆಯಾಗಿ ಸುಖ–ಸಂತೋಷಗಳುಂಟಾಗುವವು.

# ಕೇತುದಶಾ ಕೇತು ಭುಕ್ತಿಯಲ್ಲಿ ಕೇತು ಪ್ರೀತಿಕರ ಉಮಾ ಮಹೇಶ್ವರ ದಾನವು

ಜನನ ಲಗ್ನ ಕುಂಡಲಿಯಲ್ಲಿ ಕೇತುವು 6–8–12 ಸ್ಥಾನಗಳಲ್ಲಿದ್ದರೆ, ಕ್ರೂರ ಗ್ರಹಗಳೊಡನೆ ಕೂಡಿದ್ದರೆ, 2–7 ನೆಯ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ, ಕ್ರೂರ ಷಷ್ಠ್ಯಂಶದಲ್ಲಿದ್ದರೆ ಕೇತುದಶಾ ಕೇತು ಭುಕ್ತಿಯಲ್ಲಿ ಧನ–ಧಾನ್ಯ ನಾಶವು. ತಾಯಿ–ತಂದೆಗಳ ವಿಯೋಗವು, ಬಂಧು ದ್ವೇಷವು, ಮನೋ ವ್ಯಥೆಯು. ಈ ದೋಷ ಪರಿಹಾರಕ್ಕಾಗಿ ಮೃತ್ಯುಂಜಯ ಜಪವನ್ನು ಮಾಡಬೇಕು ಮತ್ತು ಉಮಾ–ಮಹೇಶ್ವರ ದಾನ ಮಾಡಬೇಕು. (ಮೃತ್ಯುಂಜಯ ಜಪಕ್ಕಾಗಿ ಪುಟ 67 ನೋಡಿರಿ)

ಕರ್ಕ ಅಥವಾ ಮಕರ ಸಂಕ್ರಮಣ ಪುಣ್ಯಕಾಲಗಳಲ್ಲಿ ದೇವಾಲಯ ಅಥವಾ ಸ್ವ–ಗೃಹದಲ್ಲಿ ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಸ್ಥಳದಲ್ಲಿ ಅಕ್ಕಿಯ ಗುಂಪೆಯನ್ನು ರಚಿಸಿ ಅದರ ಮೇಲೆ ಒಂದು ವಸ್ತ್ರವನ್ನು ಹರವಿ ಅದರ ಮೇಲೆ ಕೊರಳಲ್ಲಿ ಗಂಟೆಯನ್ನು ಧರಿಸಿದ ಬೆಳ್ಳಿಯ ಬಸವಣ್ಣನ ಮೂರ್ತಿಯನ್ನು ಸ್ಥಾಪಿಸಿ ಆ ಮೂರ್ತಿಯ ಮೇಲೆ ಬಂಗಾರದಿಂದ ನಿರ್ಮಿಸಿದ ಉಮಾ–ಮಹೇಶ್ವರ ಪ್ರತಿಮೆಯನ್ನು ಇಟ್ಟು,

ಕರ್ತೃವು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಾದಿಗಳನ್ನು ಉಚ್ಚರಿಸಿ ''ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ.......ಶುಭತಿಥೌ ಮಮ ಇಹ ಜನ್ಮನಿ ಜನ್ಮಾಂತರೇಷು ಸಂಭಾವಿತಾನಾಂ ಬ್ರಾಹ್ಮಣಾಂಗ ಹಿಂಸಾ ದೀನಾಂ ದದ್ರೃರೋಗ ನಿದಾನ ಭೂತಾನಾಂ ಅಪನೋದನಾರ್ಥಂ ಶತವರ್ಷ ಜೀವಿತ್ವ ಸಿದ್ಧ್ಯರ್ಥಂ ಉಮಾ–ಮಹೇಶ್ವರ ದಾನಂಕರಿಷ್ಯೇ ಆದೌ ಪುಣ್ಯಾಹಂಕಾರಯಿಷ್ಯೇ ತದಾದೌ ಮಹಾಗಣಪತಿ ಪೂಜಾಂ ಕರಿಷ್ಯೇ.

ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಬೇಕು. ನಂತರ ಯಜಮಾನನು ದೇಶಕಾಲಾದಿಗಳನ್ನು ಉಚ್ಚರಿಸಿ, ''ಅಸ್ಯ ಉಮಾಮಹೇಶ್ವರ ಪೂಜಾ ಕರ್ಮಣಃ ಪುಣ್ಯಾಹಂ ವಾಚಯಿಷ್ಯೇ''

ಎಂದು ಸಂಕಲ್ಪ ಮಾಡಿ ಮಾಹೇಶ್ವರರನ್ನು ಎದುರಿಗೆ ಕುಳ್ಳಿರಿಸಿಕೊಂಡು ಅವರನ್ನು ಪೂಜಿಸಿ ದಕ್ಷಿಣೆ ತಾಂಬೂಲಾದಿಗಳಿಂದ ಸಂತೋಷಪಡಿಸಿ ಕೈಮುಗಿದುಕೊಂಡು.

| ಯಜಮಾನನು | ಮಾಹೇಶ್ವರರು |
|---|---|
| ಭಗದ್ಭಿರನುಜ್ಞಾತಃ ಪುಣ್ಯಾಹಂ ವಾಚಯಿಷ್ಯೇ | ವಾಚ್ಯತಾಂ |
| ಮನಸ್ಸಮಾಧೀಯತಾಂ | ಸಮಾಹಿತ ಮನಸಸ್ಮಃ |
| ಪ್ರಸೀದಂತು ಭವಂತಃ | ಪ್ರಸನ್ನಾಃ ಸ್ಮಃ |

ಎಂದು ಪರಸ್ಪರರು ಉಚ್ಚರಿಸಬೇಕು. ನಂತರ ಎಲ್ಲ ಮಾಹೇಶ್ವರರು ಒಂದೇ ಧ್ವನಿಯಿಂದ,

"ಶಾಂತಿರಸ್ತು ಪುಷ್ಟಿರಸ್ತು ತುಷ್ಟಿರಸ್ತು ವೃದ್ಧಿರಸ್ತು ಅವಿಘ್ನಮಸ್ತು ಆಯುಷ್ಯಮಸ್ತು ಆರೋಗ್ಯಮಸ್ತು ಸ್ವಸ್ತಿ, ಶಿವಂಕರ್ಮಾಸ್ತು ಕರ್ಮ ಸಮೃದ್ಧಿರಸ್ತು ಧರ್ಮ ಸಮೃದ್ಧಿರಸ್ತು ಪುತ್ರ ಸಮೃದ್ಧಿರಸ್ತು ವೇದ ಸಮೃದ್ಧಿರಸ್ತು ಶಾಸ್ತ್ರ ಸಮೃದ್ಧಿರಸ್ತು ಧನ-ಧಾನ್ಯ ಸಮೃದ್ಧಿರಸ್ತು ಇಷ್ಟ ಸಂಪದಸ್ತು" ಎಂದು ಹೇಳಬೇಕು.

| ಯಜಮಾನನು | ಮಾಹೇಶ್ವರರು |
|---|---|
| ಉಮಾ ಮಹೇಶ್ವರ ಪೂಜಾ ಕರ್ಮಣೇ ಭವಂತೋ ಬ್ರುವಂತು. | ಓಂ ಪುಣ್ಯಾಹಂ |
| ಉಮಾ ಮಹೇಶ್ವರ ಪೂಜಾ ಕರ್ಮಣೇ ಸ್ವಸ್ತಿ ಭವಂತೋ ಬ್ರುವಂತು. | ಓಂ ಸ್ವಸ್ತಿ |
| ಉಮಾ ಮಹೇಶ್ವರ ಪೂಜಾ ಕರ್ಮಣೇ ಋದ್ಧಿಂ ಭವಂತೋ ಬ್ರುವಂತು. | ಓಂ ಋಧ್ಯತಾಂ |

ಎಂದು ಪರಸ್ಪರರು ಉಚ್ಚರಿಸಿದ ಬಳಿಕ ಮಾಹೇಶ್ವರರು ಯಜಮಾನನ ಮಸ್ತಕದಲ್ಲಿ ದರ್ಭೆ ಹಾಗೂ ಮಾವಿನ ಚಿಗುರೆಲೆಗಳಿಂದ ಜಲವನ್ನು ಸಿಂಪಡಿಸುತ್ತ

"ಓಂ ಆಪೋಹಿಷ್ಠಾ ಮಯೋಭುವಸ್ತಾನ ಊರ್ಜೇದಧಾತನ। ಮಹೇರಣಾಯ ಚಕ್ಷಸೇ। ಯೋವಃ ಶಿವ ತಮೋರಸಸ್ತಸ್ಯ ಭಾಜಯ ತೇನಃ। ಉಶತೀರಿವ ಮಾತರಃ। ತಸ್ಮಾ ಅರಂಗ ಮಾಮವೋ ಯಸ್ಯ ಕ್ಷಯಾಯ ಜಿನ್ವಥ। ಆಪೋಜನ ಯಥಾಚನಃ। ಶಂನೋ ದೇವೀ ರಭೀಷ್ಟಯ ಆಪೋ ಭವಂತು ಪೀತಯೇ। ಶಂ ಯೋರಭಿಸ್ರವಂತು ನಃ॥

ಈ ಮಂತ್ರವನ್ನು ಉಚ್ಚರಿಸಬೇಕು.

ಬಳಿಕ "ವೃಷಭಾಯ ನಮಃ" ಈ ಮಂತ್ರದಿಂದ ವೃಷಭ ಪೂಜೆಯನ್ನು ಮಾಡಿ ಉಮಾಮಹೇಶ್ವರ ಪೂಜೆಯನ್ನು ಮಾಡಬೇಕು.

ಧ್ಯಾನಂ- ಪಂಚವಕ್ತ್ರೋ ವೃಷಾರೂಢಃ ಪ್ರತಿವಕ್ತ್ರಂ ತ್ರಿಲೋಚನಃ।
ಕಪಾಲಶೂಲ ಖಟ್ವಾಂಗೀ ಚಂದ್ರಮೌಳಿಃ ಸದಾಶಿವಃ॥

ಈ ಪ್ರಕಾರ ಉಮಾ ಮಹೇಶ್ವರರನ್ನು ಧ್ಯಾನಿಸಿ,

ಓಂ ಭೂಃ ಉಮಾಮಹೇಶ್ವರ ಮಾವಾಹಯಾಮಿ ॥ ಓಂ ಭುವಃ ಉಮಾಮಹೇಶ್ವರ ಮಾವಾಹಯಾಮಿ । ಓಂ ಸುವಃ ಉಮಾಮಹೇಶ್ವರ ಮಾವಾಹಾಯಾಮಿ। ಓಂ ಭೂರ್ಭುವಃ ಸುವಃ ಉಮಾಮಹೇಶ್ವರ ಮಾವಾಹ ಯಾಮಿ । ಸ್ಥಾಪಯಾಮಿ। ಪೂಜಯಾಮಿ।

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಬೇಕು. ನಂತರ,

ಓಂ ಭೂರ್ಭುವಃಸ್ವರೋಂ ಸಶಕ್ತಿ ಸಾಂಗ, ಸಾಯುಧ, ಸವಾಹನ, ಸಪರಿವಾರ ಓಂ ಉಮಾಮಹೇಶ್ವರ ಅತ್ರಾಗಚ್ಛಾಗಚ್ಛ । ಆವಾಹಯಾಮಿ ಆವಾಹಿತೋಭವ । ಸ್ಥಾಪಯಾಮಿ ಸ್ಥಾಪಿತೋಭವ। ಸನ್ನಿಹಿತೋಭವ। ಸಮ್ಮುಖೋಭವ। ಅವಕುಂಠಿತೋ ಭವ। ವರದೋಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ,

''ಓಂ ಉಮಾಮಹೇಶ್ವರಾಭ್ಯಾಂ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ।'' ಎಂದು ನಮಸ್ಕರಿಸಿ ''ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ'' ಎಂದು ಆಸನವನ್ನು ಮುಟ್ಟಿ 'ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ'' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ ''ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ'' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ ''ಮುಖೇ ಆಚಮನೀಯಂ ಸಮರ್ಪಯಾಮಿ'' ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು. ನಂತರ ''ಓಂ ಉಮಾಮಹೇಶ್ವರಾಭ್ಯಾಂ ನಮಃ'' ಈ ಮಂತ್ರದಿಂದ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಬಳಿಕ ಉತ್ತರ ಭಾಗದಲ್ಲಿ ಅಷ್ಟದಳ ಕಮಲವನ್ನು ಬರೆದು ಅದರ ಮೇಲೆ ಅಕ್ಕಿಯ ಗುಂಪೆಯನ್ನು ಹಾಕಿ ಅದರ ಮೇಲೆ ಜಲದಿಂದ ತುಂಬಿದ ಕಲಶವನ್ನು ಸ್ಥಾಪಿಸಿ, ಆ ಕಲಶದಲ್ಲಿ ವರುಣನನ್ನು ಆವಾಹನೆ ಮಾಡಿ ಷೋಡಶೋಪಚಾರ ಪೂಜೆಯನ್ನು ಮಾಡಬೇಕು.

## ವರುಣ ಕಲಶ ಪೂಜಾ

('ಯದತ್ರ ಸಂಸ್ಥಿತಂ.............ತತ್ರಗಚ್ಛತು'॥)

ಈ ಮಂತ್ರದಿಂದ ಸುತ್ತಲೂ ಬಿಳಿಯ ಸಾಸಿವೆಗಳನ್ನು ಎರಚಿ.

('ಆಪೋಹಿಷ್ಠಾ..........ಆಪೋಜನ ಯಥಾಚನಃ॥)

ಈ ಮಂತ್ರದಿಂದ ಜಲವನ್ನು ಸಿಂಪಡಿಸಿ ಅಲ್ಲಿಯೇ 8 ದಿಕ್ಕುಗಳಲ್ಲಿ 8 ಕಲಶಗಳನ್ನು ಸ್ಥಾಪಿಸಬೇಕು.

('ಮಹಿದ್ಯೌಃ ಪೃಥಿವೀಚನ.......ಭರೀಮಭಿಃ ॥)

ಈ ಮಂತ್ರದಿಂದ ಕಲಶಗಳನ್ನು ಸ್ಥಾಪಿಸುವ ಸ್ಥಳದ ಭೂಮಿಯನ್ನು ಮುಟ್ಟಿ

('ಓಷಧಯಃ........ರಾಜನ್ ಪಾರಯಾಮಸಿ'॥)

ಈ ಮಂತ್ರದಿಂದ ಎಂಟು ದಿಕ್ಕುಗಳಲ್ಲಿ ಎಂಟು ಬಾಳೆಯ ಎಲೆಗಳನ್ನು ಹಾಸಿ

('ಯೇನತೋಕಾಯ.........ವಿಶ್ವಾಯ ಸೌಭಗಂ' ॥)

ಈ ಮಂತ್ರದಿಂದ ಎಲೆಗಳ ಮೇಲೆ ಅಕ್ಕಿಯ ಗುಡ್ಡೆಗಳನ್ನು ರಚಿಸಿ

('ಆಕಲಶೇಷು ಧಾವತಿ.........ಅಭಿದ್ರೋಣಾ ಕನಿಕ್ರದತ್' ॥)

ಈ ಮಂತ್ರದಿಂದ ಅಕ್ಕಿಯ ಗುಂಪೆಗಳ ಮೇಲೆ 8 ಕಲಶ (ತಂಬಿಗೆ) ಗಳನ್ನು ಸ್ಥಾಪಿಸಿ

(''ಇಮಂಮೇ ಗಂಗೇ........ಶೃಣುಹ್ಯಾ ಸುಷೋಮಯಾ'' ॥)

ಈ ಮಂತ್ರದಿಂದ ಕಲಶಗಳಲ್ಲಿ ನೀರನ್ನು ತುಂಬಿ

(''ಗಂಧದ್ವಾರಾಂ.........ತಾಮಿಹೋಪ ಹ್ವಯೇಶ್ರಿಯಂ'' ॥)

ಈ ಮಂತ್ರದಿಂದ ಕಲಶಗಳಲ್ಲಿ ಗಂಧವನ್ನು ಹಾಕಿ ಹಾಗೂ ಮೇಲೆಯೂ ಲೇಪಿಸಿ ಪುಷ್ಪ ಮಾಲಿಕೆಗಳಿಂದ ಅಲಂಕರಿಸಿ

(''ಯಾಓಷಧೀಃ.........ಶತಂಧಾಮಾನಿ ಸಪ್ತಚ'' ॥)

ಈ ಮಂತ್ರದಿಂದ ಸರ್ವ ಔಷಧಿ ದ್ರವ್ಯಗಳನ್ನು ಹಾಕಿ

(''ಕಾಂಡಾತ್ಕಾಂಡಾ...........ಸಹಸ್ರೇಣ ಶತೇನಚ'' ॥)

ಈ ಮಂತ್ರದಿಂದ ಕಲಶಗಳಲ್ಲಿ ದರ್ಭೆಗಳನ್ನಿಟ್ಟು

(''ಅಶ್ವತ್ಥೇವೋ..........ಯತ್ಸುನವಥ ಪೂರುಷಂ'' ॥)

ಈ ಮಂತ್ರದಿಂದ ಪಂಚಪಲ್ಲವಗಳನ್ನು ಇಟ್ಟು

(''ಸ್ಯೋನಾ ಪೃಥ್ವಿ............ಶರ್ಮಸಪ್ರಥಾಃ ॥)

ಈ ಮಂತ್ರದಿಂದ ಸಪ್ತಮೃತ್ತಿಕೆಗಳನ್ನು ಹಾಕಿ

(''ಯಾಃ ಫಲಿನೀರ್ಯಾ........ಮುಂಚತ್ವಗ್ಂ ಹಸಃ'' ॥)

ಈ ಮಂತ್ರದಿಂದ ಕಲಶಗಳ ಮೇಲೆ ತೆಂಗಿನಕಾಯಿಗಳನ್ನಿಟ್ಟು

(''ಸಹಿರತ್ನಾನಿದಾಶುಷೇ.........ಚಿತ್ರಮೀಮಹೇ'' ॥)

ಈ ಮಂತ್ರದಿಂದ ಪಂಚರತ್ನಗಳನ್ನು ಹಾಕಿ

(''ಹಿರಣ್ಯರೂಪಃ...........ಹಿರಣ್ಯದಾದದತ್ಯನ್ನಮಸ್ಮೈ'' ॥)

ಈ ಮಂತ್ರದಿಂದ ಕಲಶಗಳಲ್ಲಿ ಬಂಗಾರವನ್ನು ಹಾಕಿ

(''ಯುವಾಸುವಾಸಾಃ...........ಮನಸಾದೇವಯಂತಃ'' ॥)

ಈ ಮಂತ್ರದಿಂದ ಕಲಶಗಳಿಗೆ ವಸ್ತ್ರಗಳನ್ನು ಧರಿಸಿ

(''ತಂತುಂತನ್ವನ್..........ಜನಯಾದೈವ್ಯಂಜನಂ'' ॥)

ಈ ಮಂತ್ರದಿಂದ ಕಲಶಗಳಿಗೆ ಬಿಳಿಯ ದಾರವನ್ನು ಸುತ್ತಿ

ಎಲ್ಲಕಲಶಗಳಲ್ಲಿ ವರುಣನನ್ನು ಆವ್ಹಾನಿಸಬೇಕು

"ತತ್ವಾಯಾಮಿತಿ ಮಂತ್ರಸ್ಯಶುನಶ್ಯೇಫ ಋಷಿಃ, ವರುಣೋದೇವತಾ ತ್ರಿಷ್ಟುಪ್‌ಛಂದಃ, ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ, ಆಗ್ನೇಯ, ನೈರುತ್ಯ, ವಾಯವ್ಯ, ಈಶಾನ್ಯ, ಕಲಶೇಷು ವರುಣಾವಾಹನೇ ವಿನಿಯೋಗಃ

"ತತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾ ಶಾಸ್ತೇ ಯಜಮಾನೋ ಹವಿರ್ಭಿಃ। ಅಹೇಡಮಾನೋ ವರುಣೇಹಬೋಧ್ಯುರುಶಗ್ಂ ಸಮಾನ ಆಯುಃ ಪ್ರಮೋಷಿಃ॥

ಓಂ ಭೂಃ ವರುಣ ಮಾವಾಹಯಾಮಿ ಓಂ ಭುವಃ ವರುಣಮಾವಾಹಯಾಮಿ, ಓಂ ಸುವಃ ವರುಣ ಮಾವಾಹಯಾಮಿ, ಓಂ ಭೂರ್ಭುವಃ ಸ್ವಃ ವರುಣ ಮಾವಾಹಯಾಮಿ"॥

ಎಂದು ಉಚ್ಚರಿಸುತ್ತ ಕಲಶಗಳ ಮೇಲೆ ಅಕ್ಷತೆಗಳನ್ನು ಹಾಕಿ ವರುಣನನ್ನು ಆವಾಹನೆ ಮಾಡಿ ಆ ಕಲಶಗಳನ್ನು ಮುಟ್ಟಿ,

"ಕಲಶಸ್ಯ ಮುಖೇರುದ್ರಃ ಕಂಠೇವಿಷ್ಣುಃ ಸಮಾಶ್ರಿತಃ।
ಮೂಲೇತತ್ರಸ್ಥಿತೋಬ್ರಹ್ಮಾ ಮಧ್ಯೇ ಮಾತೃ ಗಣಾಃ ಸ್ಮೃತಾಃ॥
ಕುಕ್ಷೌತು ಸಾಗರಾಃ ಸರ್ವೇ ಸಪ್ತದೀಪಾ ವಸುಂಧರಾ।
ಋಗ್ವೇದೋಽಥ ಯಜುರ್ವೇದ ಸಾಮವೇದೋ ಹ್ಯಥರ್ವಣಃ॥
ಅಂಗೈಶ್ಚ ಸಹಿತಾಃ ಸರ್ವೇ ಕಲಶಂತು ಸಮಾಶ್ರಿತಾಃ।
ಗಂಗೇಚ ಯಮುನೇ ಚೈವ ಗೋದಾವರಿ ಸರಸ್ವತಿ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು"॥

ಎಂಬ ಮಂತ್ರದಿಂದ ಜಪಿಸಿ, ಷೋಡಶೋಪಚಾರಗಳಿಂದ ಪೂಜಿಸಿ

"ಅನಯಾಪೂಜಯಾ ವರುಣದೇವಃ ಸುಪ್ರೀತಃ ಪ್ರಸನ್ನಃ ವರದೋಭವತು"

ಎಂದು ದಕ್ಷಿಣೆ, ಅಕ್ಷತೆಗಳಿಂದ ಕೂಡಿದ ಜಲವನ್ನು ಅಂಗೈಯಲ್ಲಿ ಹಾಕಿಕೊಂಡು ಕಿರಿ ಬೆರಳಿನಿಂದ ಕೆಳಗೆ ಬಿಡಬೇಕು.

ನಂತರ "ಅಗ್ನೇಃ ಪ್ರತ್ಯಗಾಸಿನಃ" ಈ ಮಂತ್ರದಿಂದ ಅಗ್ನಿಯನ್ನು ಧ್ಯಾನಿಸಿ ಕದ್ರುದ್ರಾಯ ಈ ಮಂತ್ರದಿಂದ ಸಮಿತ್ತುತುಪ್ಪಗಳಿಂದ 108 ಸಾರೆ ಹೋಮ ಮಾಡಬೇಕು.

ಬಳಿಕ ವರುಣ ಕಲಶದಲ್ಲಿಯ ಜಲವನ್ನು ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಸ್ನಾನ ಮಾಡಬೇಕು.

ಆಪೋಹಿಷ್ಠಾ ಮಯೋಭುವಸ್ತಾನ ಊರ್ಜೇ ದಧಾತನ। ಮಹೇರಣಾಯ ಚಕ್ಷಸೇ। ಯೋವ ಶ್ಶಿವತಮೋರಸಸ್ತಸ್ಯ ಭಾಜಯತೇ ಹನಃ ಉಶತೀರಿವ ಮಾತರಃ। ತಸ್ಮಾ ಅರಂಗ ಮಾಮವೋಯಸ್ಯಕ್ಷಯಾಯ ಜಿನ್ವಥ। ಆಪೋಜನ ಯಥಾಚನಃ॥

ಈ ಮಂತ್ರದಿಂದ ಕರ್ತೃವು ಸ್ನಾನ ಮಾಡಿ ಬಿಳಿಯ ಬಣ್ಣದ ಬಟ್ಟೆಗಳನ್ನು ಧರಿಸಿಕೊಂಡು ಪುನಃ ಶಿವಪೂಜಾದಿಗಳನ್ನು ಪೂರೈಸಿ ತದನಂತರ ಓರ್ವ ಬ್ರಾಹ್ಮಣ ಅಥವಾ ಜಂಗಮಮೂರ್ತಿಯನ್ನು ವಸ್ತ್ರ, ಗಂಧ, ಪುಷ್ಪ ಹಾರಾದಿಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಉಮಾ ಮಾಹೇಶ್ವರ ಪ್ರತಿಮೆಯನ್ನು ಹಾಗೂ ಕಲಶವನ್ನು ಶಕ್ತ್ಯಾನುಸಾರ ದಕ್ಷಿಣೆಯೊಂದಿಗೆ ದಾನ ಮಾಡಿದರೆ ಕ್ಷೇಮವಾಗುವದು.

ಮಂತ್ರ- ಪಂಚವಕ್ತ್ರೋ ವೃಷಾರೂಢಃ ಪಾರ್ವತಿ ರಮಣ ಪ್ರಭೋ।
ಶಿವತ್ವದ್ರೂಪ ದಾನೇನ ಮಮಾಸ್ತ್ವವಿಕಲಂ ಫಲಂ।
ಅಸ್ಮೈ ಅಹಂ ಇಮಾಂ ಭೂಭಾಗೋಪರಿ ದ್ರೋಣಪರಿಮಿತಂ
ತಂಡುಲರಾಶೌ ವೃಷಭಸಹಿತ ಸುವರ್ಣ ನಿರ್ಮಿತ ಸರ್ವ ಲಕ್ಷಣ
ಲಕ್ಷಿತಾಂ। ವಸ್ತ್ರ ವೇಷ್ಟಿತಾಂ ಗಂಧ ಪುಷ್ಪಾದ್ಯರ್ಚಿತಾಂ ಉಮಾಮಹೇಶ್ವರ ಪ್ರತಿಮಾಂ।
ಮಮ ಪೂರ್ವೋಕ್ತ ಫಲ ಕಾಮಸ್ತುಭ್ಯಂ ಸಂಪ್ರದದೇ ನಮಮ ನಮಮ।

ಈ ಪ್ರಕಾರ ದಾನಕೊಟ್ಟು ಅವರಿಂದ ಶುಭಾಶೀರ್ವಾದ ಪಡೆಯಬೇಕು.



## ಕೇತುದಶಾದಲ್ಲಿ ಶುಕ್ರಭುಕ್ತಿಯಲ್ಲಿ ಶುಕ್ರ ಪ್ರೀತಿಕರ ದುರ್ಗಾ ದಾನವು

ಜನನ ಲಗ್ನ ಕುಂಡಲಿಯಲ್ಲಿ ಶುಕ್ರನು ನೀಚ ರಾಶಿಗಳಲ್ಲಿದ್ದರೆ, ಪರಾಜಿತನಾಗಿದ್ದರೆ, 6–8–12 ಸ್ಥಾನಗಳಲ್ಲಿದ್ದರೆ 2–7ನೆಯ ಸ್ಥಾನಾಧಿಪತಿಯೊಡನೆ ಕೂಡಿದ್ದರೆ, ಕ್ರೂರಾಂಶದಲ್ಲಿದ್ದರೆ, ಕ್ರೂರ ಗ್ರಹಗಳೊಡನೆ ಕೂಡಿದ್ದರೆ ಕೇತುದಶಾ ಶುಕ್ರಭುಕ್ತಿಯಲ್ಲಿ ಸ್ತ್ರೀ ಸಂಬಂಧ ಕಲಹವು, ಬಂಧು ದ್ವೇಷವು, ಪರಸ್ಥಳ ಪ್ರವಾಸವು, ಯತ್ನಿಸಿದ ಕಾರ್ಯ ನಾಶವು, ಅಜೀರ್ಣ, ಹೊಟ್ಟೆಶೂಲಿ, ಪ್ರಮೇಹ ಗುಲ್ಮರೋಗೋಪದ್ರವವು. ಮೃತ್ಯು ಭಯವು, ಈ ದೋಷ ಪರಿಹಾರಕ್ಕಾಗಿ ಚಂದ್ರದಶಾ ಗುರುಭುಕ್ತಿಯಲ್ಲಿ ಹೇಳಿರುವಂತೆ (ಪುಟ 39 ನೋಡಿರಿ) ದುರ್ಗಾ ದಾನವನ್ನು ಮಾಡುವದರಿಂದ ಕ್ಷೇಮವಾಗುವದು.



## ಕೇತುದಶಾ ರವಿಭುಕ್ತಿಯಲ್ಲಿ ರವಿ ಪ್ರೀತಿಕರ ಶಿವಜಪ ವಿಧಾನವು

ಜನನ ಲಗ್ನಕುಂಡಲಿಯಲ್ಲಿ ರವಿಯು ನೀಚ ರಾಶಿಗಳಲ್ಲಿದ್ದರೆ, 2–6–8–12 ಸ್ಥಾನಗಳಲ್ಲಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, ಕೇತುದಶಾ ರವಿಭುಕ್ತಿಯಲ್ಲಿ ಮಿತ್ರರ ವಿಯೋಗವು, ಬಂಧು–ಬಾಂಧವರಿಂದ ಭಯವು, ಸ್ಥಾನ ಪಲ್ಲಟವು, ಸರ್ವತ್ರ ಕಲಹವು, ಸರ್ವ ಕಾರ್ಯ ವಿನಾಶವು, ಈ ದೋಷ ಪರಿಹಾರಕ್ಕಾಗಿ ಶಿವಜಪ ಹೋಮಗಳನ್ನು

ಜಪಿಸಬೇಕು ಮತ್ತು ರವಿದಶಾ ಕುಜಭುಕ್ತಿಯಲ್ಲಿ ಹೇಳಿದಂತೆ ಕಪಿಲ ಬಣ್ಣದ ವೃಷಭ (ಎತ್ತು)ವನ್ನು ದಾನ ಮಾಡುವದರಿಂದ ಸುಖವಾಗುವದು. (ಪುಟ 17 ನೋಡಿರಿ)



## ಕೇತುದಶಾ ಚಂದ್ರಭುಕ್ತಿಯಲ್ಲಿ ಚಂದ್ರ ಪ್ರೀತಿಕರ ರಜತಾಶ್ವ (ಬೆಳ್ಳಿಯ ಕುದುರೆ) ದಾನವು

ಜನನ ಲಗ್ನ ಕುಂಡಲಿಯಲ್ಲಿ ಚಂದ್ರನು ನೀಚರಾಶಿಗಳಲ್ಲಿದ್ದರೆ, ಪಾಪ ಗ್ರಹಗಳೊಡನೆ ಕೂಡಿದ್ದರೆ, 6–8–12ನೆಯ ಸ್ಥಾನಗಳಲ್ಲಿದ್ದರೆ ಅಥವಾ ಆ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ ಕೇತುದಶಾ ಚಂದ್ರಭುಕ್ತಿಯಲ್ಲಿ ತಾಯಿಗೆ ಕಷ್ಟ–ನಷ್ಟಗಳು, ವಿಷಭಯ, ಆಪ್ತ ಮಿತ್ರರ ವಿಯೋಗವು, ಆಸ್ತಿನಾಶವು, ಸ್ತ್ರೀ ಸಂಬಂಧ ಕಲಹವು, ಸರಕಾರದವರ ಭಯವು, ಯತ್ನಿಸಿದ ಕಾರ್ಯನಾಶವು, ಶಿರೋರೋಗವು ಈ ದೋಷ ಪರಿಹಾರಕ್ಕಾಗಿ ದುರ್ಗಾ ಸಹಸ್ರ ಜಪ ಮಾಡಿಸಬೇಕು ಮತ್ತು ಬೆಳ್ಳಿಯಿಂದ ಕುದುರೆ ಮಾಡಿಸಿ ಪೂಜಿಸಿ ದಾನ ಕೊಡಬೇಕು. (ಕುಜದಶಾ ಬುಧಭುಕ್ತಿಯಲ್ಲಿ ಹೇಳಿದಂತೆ (ಪುಟ 77 ನೋಡಿರಿ)

ದಾನಮಂತ್ರ– ರಜತೇನ ವಿನಿರ್ಮಾಯತುರಂಗಂ ಸೂರ್ಯವಾಹನಂ।
ಪ್ರಯಚ್ಛಾಮಿದ್ವಿಜ ಶ್ರೇಷ್ಠ ಪ್ರಿಯತಾಮ್ಮಿಹಿರೇ ಮಮ॥

ಈ ಮಂತ್ರವನ್ನು ಉಚ್ಚರಿಸುತ್ತ ಶಕ್ತ್ಯಾನುಸಾರ ದಕ್ಷಿಣೆ ಸಹಿತ ದಾನ ಮಾಡಬೇಕು.



## ಕೇತುದಶಾ ಕುಜಭುಕ್ತಿಯಲ್ಲಿ ಕುಜಪ್ರೀತಿಕರ ತೈಲಕುಂಭ (ಎಣ್ಣೆ ತುಂಬಿದ ಕೊಡ) ದಾನವು

ಜನನ ಲಗ್ನಕುಂಡಲಿಯಲ್ಲಿ ಕುಜನು 6–8–12–2–7 ಸ್ಥಾನಗಳಲ್ಲಿದ್ದರೆ ಪಾಪಗ್ರಹಗಳೊಡನೆ ಕೂಡಿದ್ದರೆ, ನೀಚಕ್ಷೇತ್ರಗಳಲ್ಲಿದ್ದರೆ, ಶತ್ರುರಾಶಿಗಳಲ್ಲಿದ್ದರೆ, ಕೇತುದಶಾ ಕುಜಭುಕ್ತಿಯಲ್ಲಿ ಅಣ್ಣ–ತಮ್ಮಂದಿರ ನಾಶವು, ಭೂಮಿ ನಾಶವು, ಧನಹಾನಿಯು, ಸೇವಕ ವರ್ಗದವರ ವಿರೋಧವು, ರಾಜಭಯವು, ಚೋರೋಪದ್ರವವು, ಅಗ್ನಿಪೀಡೆಯು, ಅತಿಸಾರ, ಕ್ಷಯ, ಅಪಸ್ಮಾರಾದಿ ರೋಗಪೀಡೆಯು. ಈ ದೋಷ ಪರಿಹಾರಕ್ಕಾಗಿ ಸುಬ್ರಹ್ಮಣ್ಯ ಜಪವನ್ನು ಮಾಡಿಸಿ ತೈಲಕುಂಭ (ಎಣ್ಣೆತುಂಬಿದ ಕೊಡ)ವನ್ನು ದಾನ ಮಾಡುವದರಿಂದ ಆರೋಗ್ಯ, ಆಯುಷ್ಯ ವೃದ್ಧಿಯಾಗುವವು.

ಆದಿತ್ಯವಾರ, ಮಂಗಳವಾರ, ಶನಿವಾರಗಳಲ್ಲಿ ಅಷ್ಟಮಿ, ಚತುರ್ಥಿ, ನವಮಿ, ಚತುರ್ದಶಿ ತಿಥಿಗಳಲ್ಲಿ ಕಾಡಾಟದ ಕ್ರೂರ ದಿವಸಗಳಲ್ಲಿ ದೇವಾಲಯ ಅಥವಾ ಸ್ವಗೃಹದ ಪರಿಶುದ್ಧ ಪ್ರದೇಶವನ್ನು ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿ, ಆ ಸ್ಥಳದಲ್ಲಿ ಕರಿಯ ಎಳ್ಳಿನ ಗುಂಪೆಯನ್ನು ರಚಿಸಿ ಅದರ ಮೇಲೆ ಎಳ್ಳಿನ ಎಣ್ಣೆಯಿಂದ ತುಂಬಿದ ಕಬ್ಬಿಣದ ಕುಂಭ (ಕೊಡ)ವನ್ನು ಸ್ಥಾಪಿಸಬೇಕು. ಆ ಕುಂಭಕ್ಕೆ ನೀಲಿಬಣ್ಣದ ವಸ್ತ್ರವನ್ನು ಹೊದಿಸಿ ಆ ಕುಂಭದ ಮೇಲೆ ಒಂದು ಕಬ್ಬಿಣದ ಪಾತ್ರೆಯನ್ನು ಇಟ್ಟು ಅದರ ಮೇಲೆ ನೀಲಿ ವಸ್ತ್ರವನ್ನು ಹಾಸಿ ಅದರ ಮೇಲೆ ಬಂಗಾರದ ಯಮ ಪ್ರತಿಮೆಯನ್ನು ಇಟ್ಟು,

(ಯಮ ಪ್ರತಿಮೆಯು ಮಹಿಷವಾಹನ, ಚತುರ್ಭುಜ, ತ್ರಿಶೂಲ, ಧನಸ್ಸು, ಬಾಣ, ಅಭಯ ಹಸ್ತ ಈ ಪ್ರಕಾರ ಇರಬೇಕು)

"ಮಮ ಇಹಜನ್ಮನಿ ಜನ್ಮಾಂತರೇಷು ಸಂಭಾವಿತ ದುಷ್ಟಾರಿಷ್ಟ ನಿವಾರಣಾರ್ಥಂ ಸಮಸ್ತಪಾಪ ಕ್ಷಯಾರ್ಥಂ ಸರ್ವರೋಗ ನಿವೃತ್ತ್ಯರ್ಥಂ ಸುಖ ಸೌಭಾಗ್ಯ ಸಮೃದ್ಧ್ಯರ್ಥಂ ಚಿರಕಾಲ ಜೀವಿತ್ವ ಸಿದ್ಧ್ಯರ್ಥಂ ಸುಬ್ರಹ್ಮಣ್ಯ ಜಪಂ ಕರಿಷ್ಯೇ ತದನಂತರಂ ಯಮಪ್ರತಿಮಾ, ತೈಲ ಕುಂಭ ದಾನಂ ಚ ಕರಿಷ್ಯೇ ತದಾದೌ ಶ್ರೀ ಮಹಾಗಣಪತಿ ಪೂಜಾಂ ಕರಿಷ್ಯೇ"

ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಿ, 108 ಸಾರೆ ಸುಬ್ರಹ್ಮಣ್ಯ ಜಪವನ್ನು ಮಾಡಬೇಕು. ಬಳಿಕ ಯಮ ಪ್ರತಿಮೆಯನ್ನು ಮುಟ್ಟಿ ಧ್ಯಾನಿಸಬೇಕು.

ಧ್ಯಾನಂ- ಮಹಿಷಸ್ಥಂ ಚತುರ್ಬಾಹುಂ ತ್ರಿಶೂಲ ವರಹಸ್ತಕಃ।
ತ್ರಾಸ ಬಾಣ ಧನುರ್ಹಸ್ತಂ ಕಿರೀಟಾದಿ ವಿಭೂಷಿತಂ॥
ವಾಹಿ ಸೂರ್ಯಸುತಃ ಕ್ರೂರ ಗ್ರಹ್ಯದೇಹ ಕೃಶೋದರ।
ಇಷ್ಟಾರ್ಥ ಫಲದಾನಾಯ ಪ್ರತಿಮಾಯಾಂ ಸಮಾವಿಶ॥
ಇಂದ್ರನೀಲದ್ಯುತಿ ಶೂಲೀ ವರದೋ ಮಹಿಷಾಸನಃ।
ಚಾಪಬಾಣ ಧರಸ್ರಗ್ವೀ ಧ್ಯೇಯೋರ್ಕ ತನಯಸ್ಸದಾ॥

ಎಂದು ಧ್ಯಾನಿಸಿ,

ಓಂ ಭೂಃ ಯಮಮಾವಾಹಯಾಮಿ ಓಂ ಭುವಃ ಯಮ ಮಾವಾಹಯಾಮಿ। ಓಂ ಸುವಃ ಯಮ ಮಾವಾಹಯಾಮಿ। ಓಂ ಭೂರ್ಭುವಃ ಸುವಃ ಯಮ ಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಿ ನಂತರ,

ಓಂ ಭೂರ್ಭುವಃ ಸ್ವರೋಂ ಸಶಕ್ತಿ ಸಾಂಗಸಾಯುಧ ಸವಾಹನ ಸಪರಿವಾರ ಓಂ ಯಮದೇವ ಅತ್ರಾಗಚ್ಛಾಗಚ್ಛ। ಆವಾಹಯಾಮಿ ಆವಾಹಿತೋಭವ।

ಸ್ಥಾಪಯಾಮಿ ಸ್ಥಾಪಿತೋಭವ। ಸನ್ನಿಹಿತೋಭವ। ಸಮ್ಮುಖೋಭವ। ಅವಕುಂಠಿತೋಭವ । ವರದೋಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ,

"ಓಂ ಯಮದೇವಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ" ಎಂದು ನಮಸ್ಕರಿಸಿ "ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ"

ಎಂದು ಆಸನವನ್ನು ಮುಟ್ಟಿ "ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ" ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ "ಹಸ್ತಯೋಃ ಅರ್ಘ್ಯ ಮರ್ಘ್ಯಂ ಸಮರ್ಪಯಾಮಿ" ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ "ಮುಖೇ ಆಚಮನೀಯಂ ಸಮರ್ಪಯಾಮಿ" ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು. ನಂತರ "ಓಂ ಯಮದೇವಾಯ ನಮಃ" ಈ ಮಂತ್ರದಿಂದ ಭಸ್ಮ ನೀಲಿ ಗಂಧ, ನೀಲಿ ಅಕ್ಷತೆ, ಬನ್ನಿಪತ್ರಿ, ಕರಿಕೆ, ದರ್ಭೆಗಳಿಂದ ಪೂಜಿಸಿ,

ಓಂ ಧರ್ಮರಾಜಾಯ ನಮಃ, ಓಂ ಮೃತ್ಯು ದೇವಾಯ ನಮಃ, ಓಂ ಅಂತಕಾಯ ನಮಃ, ಓಂ ಕಾಲಾಯ ನಮಃ, ಓಂ ಸರ್ವಭೂತ ಕ್ಷಯಾಯ ನಮಃ, ಓಂ ಔದುಂಬರಾಯ ನಮಃ, ಓಂ ಪರಮೇಷ್ಠಿನೇ ನಮಃ, ಓಂ ವೃಕೋದರಾಯ ನಮಃ, ಓಂ ಚಿತ್ರಗುಪ್ತಾಯ ನಮಃ, ಓಂ ನೀಲಾಯ ನಮಃ, ಓಂ ಚಿತ್ರಾಯ ನಮಃ, ಓಂ ವೈವಸ್ವತಾಯ ನಮಃ॥

ಈ ರೀತಿಯಾಗಿ ಯಮದೇವನ ದ್ವಾದಶ ನಾಮಗಳಿಗೆ ಗಂಧ, ಪುಷ್ಪ, ಅಕ್ಷತಾದಿಗಳಿಂದ ಪೂಜಿಸಿ, ಪ್ರತಿಮೆಗೆ ಧೂಪ, ದೀಪಗಳನ್ನು ಬೆಳಗಿ ಮೊಸರಾನ್ನವನ್ನು ನೈವೇದ್ಯ ಮಾಡಿ ಪೂಜಾ ಸಮಾಪ್ತಿಗೊಳಿಸಬೇಕು. ಬಳಿಕ ಓರ್ವ ಬ್ರಾಹ್ಮಣ ಅಥವಾ ಜಂಗಮ ಮೂರ್ತಿಯನ್ನು ಭಸ್ಮ ನೀಲಿಗಂಧ, ನೀಲಿವಸ್ತ್ರ, ಪುಷ್ಪಹಾರಾದಿಗಳಿಂದ ಪೂಜಿಸಿ ತೈಲಕುಂಭ, ಯಮ ಪ್ರತಿಮೆಗಳನ್ನು ಯಥಾಶಕ್ತಿ ದಕ್ಷಿಣೆ ಸಹಿತ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ದಾನ ಕೊಡಬೇಕು.

ಮಂತ್ರ- ಕ್ರೂರಾವ ಲೋಕನ ವಶಾದ್ಭುವನಂ ವಿನಾಶಯತಿ ಯೋಗ್ರಹೋರಿಷ್ಟ।

ತುಷ್ಟೋಧನಕನಕ ಸಮೃದ್ಧಿಂ ದದಾತಿ ಸೋಸ್ಮಾನ್ ಶನೈಶ್ಚರಃ ಪಾತು॥

ತೈಲಂ ಪುಷ್ಟಿಕರಂ ನಿತ್ಯಂ ತೈಲಮಾಯುಷ್ಯ ವರ್ಧನಂ।

ಅಮಾಂಗಲ್ಯ ಹರಂ ನಿತ್ಯಂ ದಾನಾತ್ಪ್ರೀತಿ ಕರೋಭವೇತ್

ಯಾವನು ತೈಲಕುಂಭವನ್ನು ಈ ಪ್ರಕಾರ ಭಕ್ತಿಯಿಂದ ದಾನ ಮಾಡುವನೋ ಅವನ ದೋಷಗಳೆಲ್ಲವೂ ಶಮನವಾಗಿ ಶಾಂತಿಯಾಗುವದು.

●○●

## ಕೇತುದಶಾ ರಾಹುಭುಕ್ತಿಯಲ್ಲಿ ರಾಹು ಪ್ರೀತಿಕರ ಮಹಾಕೂಷ್ಮಾಂಡ (ಕುಂಬಳಕಾಯಿ) ದಾನವು

ಜನನ ಲಗ್ನಕುಂಡಲಿಯಲ್ಲಿ ರಾಹು 6–8–12–4–7–10–5–9 ಸ್ಥಾನಗಳಲ್ಲಿದ್ದರೆ ದ್ವಿತೀಯ ಸಪ್ತಮಾಧಿಪತಿಗಳೊಡನೆ ಕೂಡಿದ್ದರೆ ಪಾಪಗ್ರಹಗಳೊಡನೆ ಕೂಡಿದ್ದರೆ, ನೀಚನಾಗಿದ್ದರೆ, ನೀಚಾಂಶದಲ್ಲಿದ್ದರೆ ಕೇತುದಶಾ ರಾಹುಭುಕ್ತಿಯಲ್ಲಿ ಪಿತೃ ಪೀಡೆಯು, ಭೂತ ಪ್ರೇತ ಬ್ರಹ್ಮರಾಕ್ಷಸ ಪೀಡೆಗಳು, ಅಪಸ್ಮಾರ, ಜ್ವರಭಯವು, ವಿಧವಾ ಸ್ತ್ರೀ ಸಂಬಂಧ ಕಲಹವು, ಸಾಲದ ಬಾಧೆಯು, ದಾರಿದ್ರ್ಯವು ನೀಚ ಜನಸೇವೆಯು, ಮಾನ ಭಂಗವು, ಹೆಂಡತಿಗೆ ರೋಗಭಯವು. ಈ ದೋಷಪರಿಹಾರಕ್ಕಾಗಿ ಮೃತ್ಯುಂಜಯ ಜಪವನ್ನು ಮಾಡಬೇಕು ಮತ್ತು ಮಹಾಕೂಷ್ಮಾಂಡ ಧಾನವನ್ನು ಮಾಡುವದರಿಂದ ಆರೋಗ್ಯ, ಆಯುಷ್ಯಗಳು ವೃದ್ಧಿಯಾಗುವವೆಂದು ರುದ್ರಯಾಮಳ ತಂತ್ರದಲ್ಲಿಹೇಳಲಾಗಿದೆ. ಭ್ರೂಣ (ಶಿಶು) ಹತ್ಯಾದಿ ಮಹಾಪಾತಕಗಳೂ ಸಹ ಈ ಮಹಾಕೂಷ್ಮಾಂಡ ದಾನದಿಂದ ಪರಿಹಾರವಾಗುವವು. (ಮೃತ್ಯುಂಜಯ ಜಪವಿಧಾನಕ್ಕಾಗಿ ಪುಟ67 ನೋಡಿರಿ)

ಸಂಕ್ರಾಂತಿಯ ಪುಣ್ಯಕಾಲದಲ್ಲಿ, ರಥಸಪ್ತಮಿ ದಿವಸ, ವ್ಯತಿಪಾತ, ವೈಧೃತಿ ಯೋಗಗಳಲ್ಲಿ ಜನ್ಮನಕ್ಷತ್ರದ ದಿವಸ ಗ್ರಹಣ ಕಾಲದಲ್ಲಿ ಶಯನ ಏಕಾದಶಿ ದಿವಸ (ಆಷಾಢ ಶುದ್ಧ ಏಕಾದಶಿ) ದಲ್ಲಿ 10ಕ್ಕಿಂತ ಹೆಚ್ಚು 108 ವರೆಗೆ ಉತ್ತಮವಾದ ಹಾಗೂ ಅತೀ ದೊಡ್ಡ ಕುಂಬಳಕಾಯಿಗಳನ್ನು ತಂದು ಪ್ರತಿಯೊಂದರಲ್ಲಿಯೂ ಬಂಗಾರದ ವಿಷ್ಣು ಪ್ರತಿಮೆಯನ್ನು ಇಟ್ಟು ಒಂದೊಂದು ಕೆಂಪು ವಸ್ತ್ರವನ್ನು ಹೊದಿಸಿ ಗಂಧ ಪುಷ್ಪಾದಿಗಳಿಂದ ಪೂಜಿಸಬೇಕು ಮತ್ತು ಓರ್ವ ಬ್ರಾಹ್ಮಣ ಅಥವಾ ಜಂಗಮ ಮೂರ್ತಿಯನ್ನು ಭಸ್ಮ ಗಂಧ, ಪುಷ್ಪಾದಿಗಳಿಂದ ಪೂಜಿಸಿ ಅವರನ್ನು ಪಾರ್ವತಿ ಪರಮೇಶ್ವರರೆಂದು ಅಥವಾ ಲಕ್ಷ್ಮೀ ನಾರಾಯಣರೆಂದು ಭಾವಿಸಿ ಅವರ ಪ್ರೀತಿಗಾಗಿ ಭಕ್ತಿಯಿಂದ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಕುಂಬಳಕಾಯಿಗಳನ್ನು ಶಕ್ಯಾನುಸಾರ ದಕ್ಷಿಣೆ ಸಹಿತ ದಾನ ಮಾಡಬೇಕು.

ಮಂತ್ರ- ಬ್ರಹ್ಮಹತ್ಯಾಪನೋದಾರ್ಥಂ ಬ್ರಹ್ಮಣಾ ನಿರ್ಮಿತಂ ಪುರಾ।
ಕೂಷ್ಮಾಂಡಂ ಬಹು ಬೀಜಾಢ್ಯಂ ಅತಶ್ಶಾಂತಿಂ ಪ್ರಯಚ್ಛತಿ।

ಈ ವಿಧಿಯಿಂದ ಕೂಷ್ಮಾಂಡ ದಾನಮಾಡುವವದರಿಂದ ದೀರ್ಘಾಯುಷಿಯಾಗಿ ವಿಷ್ಣುಲೋಕವನ್ನು ಹೊಂದಿ ಸುಖವಾಗಿರುವನೆಂದು ಬ್ರಹ್ಮಾಂಡ ಪುರಾಣದಲ್ಲಿ ಉಕ್ತವಾಗಿದೆ.



## ಕೇತುದಶಾ ಗುರುಭುಕ್ತಿಯಲ್ಲಿ ಗುರು ಪ್ರೀತಿಕರ ತಿಲ (ಎಳ್ಳು) ದಾನವು

ಜನನ ಲಗ್ನಕುಂಡಲಿಯಲ್ಲಿ ಗುರು 6–8–12 ಸ್ಥಾನಗಳಲ್ಲಿದ್ದರೆ, 2–7ನೆಯ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ, ನೀಚಾಂಶದಲ್ಲಿದ್ದರೆ, ನೀಚರಾಶಿಗಳಲ್ಲಿದ್ದರೆ, ಕ್ರೂರ ಗ್ರಹಗಳೊಡನೆ ಕೂಡಿದ್ದರೆ, ಕೇತುದಶಾ ಗುರುಭುಕ್ತಿಯಲ್ಲಿ ಮನಸ್ಸಿಗೆ ದುಃಖವು, ಅಪಕೀರ್ತಿಯು, ಭಯವು, ಸ್ಥಾನ ನಾಶವು, ತಂದೆಗೆ ಪೀಡೆಯು ಬಂಧುಗಳ ಕಲಹವು, ದೇಹಪೀಡೆಯು, ಹೆಂಡತಿ ಮಕ್ಕಳೊಡನೆ ಕಲಹವು, ಧನಹಾನಿಯು. ಈ ದೋಷ ಪರಿಹಾರಕ್ಕಾಗಿ ಶನಿದಶಾ ಶನಿಭುಕ್ತಿಯಲ್ಲಿ ಹೇಳಿದಂತೆ ಎಳ್ಳು ದಾನ ಮಾಡಿದರೆ ಶಾಂತಿಯಾಗುವದು (ಪುಟ 109 ನೋಡಿರಿ)



## ಕೇತುದಶಾ ಶನಿಭುಕ್ತಿಯಲ್ಲಿ ಶನಿ ಪ್ರೀತಿಕರ ಯಮದಾನವು

ಜನನ ಲಗ್ನ ಕುಂಡಲಿಯಲ್ಲಿ ಶನಿಯು ನೀಚರಾಶಿಗಳಲ್ಲಿದ್ದರೆ, ಶತ್ರುರಾಶಿಗಳಲ್ಲಿದ್ದರೆ, 2–7ನೆಯ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ, 6–8–12 ಸ್ಥಾನಗಳಲ್ಲಿದ್ದರೆ, ಕ್ರೂರಗ್ರಹಗಳೊಡನೆ ಕೂಡಿದ್ದರೆ, ಕೇತುದಶಾ ಶನಿಭುಕ್ತಿಯಲ್ಲಿ ಮರಣ ಭಯವು, ಬಂಧುಗಳ ಕಲಹವು, ಸಹೋದರರ ನಾಶವು, ಮಿತ್ರರ ವಿಯೋಗವು, ಆಪ್ತ ಬಂಧುಗಳ ನಾಶವು, ಸಾಲದ ಭಯವು, ನಾನಾ ರೀತಿಯ ರೋಗಪೀಡೆಯು. ಈ ದೋಷ ಪರಿಹಾರಕ್ಕಾಗಿ ಯಮದೇವ ಪ್ರತಿಮಾ ದಾನ ಮಾಡಬೇಕು.

ಕೃಷ್ಣ ಪಕ್ಷದ ಅಷ್ಟಮಿ, ಚತುರ್ದಶಿಗಳಲ್ಲಿ ಅಥವಾ ಪುಣ್ಯ ಕಾಲಗಳಲ್ಲಿ ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಭೂಭಾಗದೊಳು ಕಬ್ಬಿಣದ ಪಾತ್ರೆಯನ್ನು ಇಟ್ಟು ಅದರ ಸಮೀಪದಲ್ಲಿ ಕಂಚಿನ ಪಾತ್ರೆಯನ್ನು ಇರಿಸಿ ಅದರಲ್ಲಿ ಬೆಳ್ಳಿಯ ಪದ್ಮ(ಕಮಲ) ವನ್ನು ಇಟ್ಟು ಅದರ ಮೇಲೆ ಕೋಣ(ಮಹಿಷ) ನನ್ನು ವಾಹನವಾಗಿ ಮಾಡಿಕೊಂಡ ಬಂಗಾರದ ಯಮ ಪ್ರತಿಮೆಯನ್ನು ಇಟ್ಟು ಆ ಪ್ರತಿಮೆಯ ಸುತ್ತಲೂ ತಾಮ್ರ, ಕಂಚು, ಹಿತ್ತಾಳೆಯ ಮೂವರು ಯಮಧೂತರನ್ನು ಇಟ್ಟು (ಯಮಧೂತರು ಕೈಯಲ್ಲಿ ಖಡ್ಗ ಚೂರಿ, ಬಡಿಗೆಗಳನ್ನು ಹಿಡಿದಿರಬೇಕು) ಯಮ ಪ್ರತಿಮೆಗೆ ನೀಲಿ ಬಟ್ಟೆಯನ್ನು ಸುತ್ತಿ ಆ ಪ್ರತಿಮೆಯನ್ನು ಜೀವಂತ ಎಮ್ಮೆಯ ಪೃಷ್ಠ ಭಾಗದಲ್ಲಿ ಇಟ್ಟು,

ಕರ್ತೃವು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ ''ಮಮ ಇಹಜನ್ಮನಿ ಜನ್ಮಾಂತರೇಷು ಸಂಭಾವಿತ ಸಮಸ್ತಪಾಪಕ್ಷಯ ದ್ವಾರಾ

ಯಮಪಾಶ ಭಯ ನಿವೃತ್ಯರ್ಥಂ ಸಕಲಾಭೀಷ್ಟ ಫಲಪ್ರದಾಯಕ ಶ್ರೀ ಯಮಧರ್ಮ ರಾಜ ಪ್ರೀತ್ಯರ್ಥಂ ಮೃತ್ಯುಂ ಯಮಪ್ರೋಕ್ತಪ್ರಕಾರೇಣ ಯಮದೇವತಾದಾನಂ ಕರಿಷ್ಯೇ ತದಾದೌ ಮಹಾಗಣಪತಿ ಪೂಜಾಂ ಕರಿಷ್ಯೇ''

ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಬೇಕು. ನಂತರ ಯಮ ಪ್ರತಿಮೆಯನ್ನು ಮುಟ್ಟಿ,

ಧ್ಯಾನಂ- ಪಾಶದಂಡಧರಂ ಭೀಮಂ ಯಮಂ ಮಹಿಷವಾಹನಂ।
ಕಾಲಮೇಘ ಸಮಾನಾಭಂ ಕರಾಳವದನಾನ್ವಿತಂ॥
ಭಯದಾಸ್ತ್ರೈಸ್ಸದೋಪೇತಂ ಕಾಲದೂತೈರ್ಭಯಂಕರೈಃ।
ಭಯಂಕರಂತು ಪಾಪಾನಾಂ ಸೌಮ್ಯಂ ಸುಕೃತಿನಾಂ ಸದಾ।
ಚಿಂತಾಯಾಮಾಯುರಾರೋಗ್ಯಂ ಸಂಪದರ್ಥಂ ಸುಖಾಯಚ॥

ಎಂದು ಧ್ಯಾನಿಸಿ ಓಂ ಭೂಃ ಯಮ ಮಾವಾಹಯಾಮಿ। ಓಂ ಭುವಃ ಯಮ ಮಾವಾಹಯಾಮಿ। ಓಂ ಸುವಃ ಯಮ ಮಾವಾಹಯಾಮಿ। ಓಂ ಭೂರ್ಭುವಃ ಸುವಃ ಯಮ ಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಿ ನಂತರ,

ಓಂ ಭೂರ್ಭುವಃ ಸ್ವರೋಂ ಸಶಕ್ತಿಸಾಂಗಸಾಯುಧ ಸವಾಹನ ಸಪರಿವಾರ ಓಂ ಯಮದೇವ ಅತ್ರಾಗಚ್ಛಾಗಚ್ಛ। ಆವಾಹಯಾಮಿ ಆವಾಹಿತೋ ಭವ। ಸ್ಥಾಪಯಾಮಿ ಸ್ಥಾಪಿತೋ ಭವ। ಸನ್ನಿಹಿತೋ ಭವ। ಸಮ್ಮುಖೋ ಭವ। ಅವಕುಂಟಿತೋ ಭವ। ವರದೋ ಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ,

''ಓಂ ಯಮದೇವಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ'' ಎಂದು ನಮಸ್ಕರಿಸಿ ''ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ'' ಎಂದು ಆಸನವನ್ನು ಮುಟ್ಟಿ ''ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ'' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ ''ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ'' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ ''ಮುಖೇ ಆಚಮನೀಯಂ ಸಮರ್ಪಯಾಮಿ'' ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು. ನಂತರ ''ಓಂ ಯಮದೇವಾಯ ನಮಃ'' ಎಂಬ ಮಂತ್ರದಿಂದ ಭಸ್ಮ ನೀಲಿಗಂಧ, ನೀಲಿ ಅಕ್ಷತೆ, ನೀಲಿ ಹೂ, ಬನ್ನಿ ಪತ್ರಿ, ಧೂಪ ದೀಪಾದಿಗಳಿಂದ ಪೂಜಿಸಬೇಕು. ನಂತರ ಓರ್ವ ಬ್ರಾಹ್ಮಣ ಅಥವಾ ಜಂಗಮ ಮೂರ್ತಿಯನ್ನು ನೀಲಿಗಂಧ, ಅಕ್ಷತೆ, ನೀಲಿವಸ್ತ್ರ, ಪುಷ್ಪಹಾರಾದಿಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ದಾನ ಕೊಡಬೇಕು.

ಮಂತ್ರ- ಮಹಿಷೀ ಪೃಷ್ಠ ದೇಶಸ್ಥಂ ಲೋಹಪಾತ್ರ ಪ್ರತಿಷ್ಠಿತಂ।
ಕಾಂಸ್ಯಪಾತ್ರೇ ಪ್ರವಿನ್ಯಸ್ತಂ ರೂಪ್ಯಪದ್ಮೋ ಪರಿಸ್ಥಿತಂ॥
ದಂಡಪಾಶಧರಂ ಭೀಮಂ ಭೀಮ ದೂತೈಸ್ಸಮಾ ವೃತಂ।
ಪ್ರಾಸಾನಿಕುಂತ ಪರಿಘತೋಮರಾದ್ಯಾಯುಧಾನ್ವಿತಂ॥
ದದಾಮಿತ್ವಂ ವಸುವಿಪ್ರೇಂದ್ರಯಮಂ ಮೃತ್ಯುಭಯಾರ್ದಿತಃ।
ಅಸ್ಮೈ ಅಹಂ ಇಮಾಂ ಗೋಮಯಾನುಲೇಪಿತ ರಂಗವಲ್ಯಾದಿ
ರಚಿತ ಭೂಭಾಗೋಪರಿಸ್ಥಿತ ಪ್ರತ್ಯಕ್ಷ ಮಹಿಷೀ ಪೃಷ್ಠೋ
ಪರಿವಿನ್ಯಸ್ತ ಲೋಹಪಾತ್ರ ಮಧ್ಯಸ್ಥಿತ ಕಾಂಸ್ಯಪಾತ್ರೋ
ಪರಿಪ್ರತಿಷ್ಠಿತ ರಜತಪದ್ಮೋ ಪರಿಸಂಸ್ಥಿತಂ। ಯಥಾಶಕ್ತಿ
ಸುವರ್ಣ ನಿರ್ಮಿತಂ ಮಹಿಷೀವಾಹನಂ ದಂಡಪಾಶಧರಂ
ದ್ವಿಭುಜಂ ಭಯದಾಸ್ತ್ರಸಮನ್ವಿತಂ। ತ್ರಿಲೋಹಮಯ
ಕಾಲದೂತಾಖ್ಯ ಪುರುಷತ್ರಯಾನ್ವಿತಂ ಸರ್ವಲಕ್ಷಣ ಲಕ್ಷಿತಾಂ
ಸ್ವರ್ಚಿತಂ ಯಮ। ಪೂರ್ವೋಕ್ತಫಲಕಾಮಸ್ತುಭ್ಯಮಹಂ ಸಂಪ್ರದದೇ ನಮಮ ನಮಮ.

ಈ ಪ್ರಕಾರ ಪ್ರತಿಮಾ ಸಹಿತ ಮಹಿಷೀ ದಾನವನ್ನು ಯಥಾಶಕ್ತಿ ದಕ್ಷಿಣೆಯೊಡನೆ ದಾನಕೊಟ್ಟು ಲೋಹಮಹಿಷಿ ದಾನವನ್ನೂ ಒಂದು ತುಪ್ಪದ ಕೊಡ ಸಹಿತ ದಾನ ಮಾಡಿ ಶಕ್ತ್ಯಾನುಸಾರ ಗಣಾರಾಧನೆಯನ್ನು ಮಾಡಿಸಬೇಕು.



## ಕೇತುದಶಾ ಬುಧಭುಕ್ತಿಯಲ್ಲಿ ಬುಧ ಪ್ರೀತಿಕರ ಮೃಗ (ಚಿಗರೆ) ದಾನವು

ಜನನ ಲಗ್ನ ಕುಂಡಲಿಯಲ್ಲಿ ಬುಧನು 6–8–12 ಸ್ಥಾನಗಳಲ್ಲಿದ್ದರೆ, ನೀಚ ರಾಶಿಗಳಲ್ಲಿದ್ದರೆ, ಅಸ್ತಂಗತನಾಗಿದ್ದರೆ, ಕ್ರೂರ ದೇಕ್ಕಾಣಗಳಲ್ಲಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, ಮಾರಕ ಸ್ಥಾನಗಳಲ್ಲಿದ್ದರೆ, ಕೇತುದಶಾ ಬುಧಭುಕ್ತಿಯಲ್ಲಿ ಪಿತ್ತರೋಗ, ತಲೆಶೂಲಿ, ಶಿರೋರೋಗವು, ವಾತರೋಗವು, ತಾಯಿ ಹಾಗೂ ತಾಯಿಯ ಸಂಬಂಧಿಕರಿಗೆ ಅರಿಷ್ಟವು, ಕಲಹವು, ಸಂತಾಪವು ಸ್ವಸ್ಥಾನ ಬಿಟ್ಟು ತಿರುಗಾಡುವಿಕೆಯು, ಬಂಧು ಮಿತ್ರರ ವಿರೋಧವು. ಈ ದೋಷ ಪರಿಹಾರಕ್ಕಾಗಿ ವಾತರೋಗ ನಿವರ್ತಕವಾದ ಮೃಗ (ಚಿಗರೆ) ವನ್ನು ದಾನ ಮಾಡುವದರಿಂದ ಶಾಂತಿಯಾಗುವದು. ಪೂರ್ವಕರ್ಮ ವಿಪಾಕದಿಂದ ನಾನಾ ದೋಷಾನುಸಾರವಾಗಿ ಮನುಷ್ಯರಿಗೆ ಅನೇಕ ರೋಗಾದಿಗಳುಂಟಾಗುವವು.

ವೈಧೃತಿ, ವ್ಯತಿಪಾತ ಯೋಗಗಳಲ್ಲಿ ಅಥವಾ ಯಾವದೇ ದುರ್ಯೋಗ ಕಾಲದಲ್ಲಿಅಷ್ಟಮಿ, ದ್ವಾದಶಿ, ಷಷ್ಠಿ ಚತುರ್ಥಿ, ಚತುರ್ದಶಿ ತಿಥಿಗಳಲ್ಲಿ(ಪಕ್ಷಛಿದ್ರಗಳಲ್ಲಿ)

ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಭೂಭಾಗದಲ್ಲಿ ಅಕ್ಕಿಯ ಗುಂಪೆಯನ್ನು ರಚಿಸಿ ಅದರ ಮೇಲೆ ಬಂಗಾರದ (ಮೃಗ) ಚಿಗರೆಯ ಪ್ರತಿಮೆಯನ್ನು ಸ್ಥಾಪಿಸಬೇಕು. ಚಿಗರೆಯ ಮೂರ್ತಿಯ ಮೂಗಿನಲ್ಲಿ ವೈಢೂರ್ಯ, ಕಣ್ಣಿನಲ್ಲಿ ಮುತ್ತು ಬೆಳ್ಳಿಯ ಬಾಲ ಕೊಳಗ (ಗೊರಸು)ಗಳಿಗೆ ತಾಮ್ರ ಉಪಯೋಗಿಸಿ ಕೂಡ್ರಿಸಬೇಕು ಮತ್ತು ಉತ್ತಮವಾದ ಜೀವಂತ ಸಾಕ್ಷಾತ್ ಮೃಗ(ಚಿಗರೆ), ವನ್ನು ತಂದು ಅದನ್ನು ಪೂಜಿಸಿ ಮತ್ತು ಚಿಗರೆಯ ಮೂರ್ತಿಯನ್ನು ಸಹಿತ ಪೂಜಿಸಿ ಓರ್ವ ಬ್ರಾಹ್ಮಣ ಅಥವಾ ಜಂಗಮ ಮೂರ್ತಿಯನ್ನು ಭಸ್ಮ ಗಂಧ, ವಸ್ತ್ರ ಆಭರಣಾದಿಗಳಿಂದ ಸತ್ಕರಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಶಕ್ತ್ಯಾನುಸಾರ ದಕ್ಷಿಣೆಯೊಂದಿಗೆ ಜೀವಂತ ಚಿಗರೆ, ಬಂಗಾರದ ಚಿಗರೆ ಹಾಗೂ ಅಕ್ಕಿಯನ್ನು ದಾನಕೊಡಬೇಕು.

ಮಂತ್ರ- ಪೂರ್ವ ಕರ್ಮ ವಿಪಾಕೋತ್ಥ ವಾತರೋಗೇಣ ಪೀಡಿತಂ।
ಮಾಂತ್ರಾಹಿ ಮೃಗ ದಾನೇನ ವಾತ ರೋಗಂ ಹರಸ್ವಮೇ ॥
ಸುವರ್ಣ ದಕ್ಷಿಣಾಂ ದದ್ಯಾದ್ಯಥಾ ವಿತ್ತಾನುಸಾರತಃ।
ಬಹುಧಾ ವಾತರೋಗಾದ್ಯೈಃ ವಿಮುಕ್ತಸ್ಸುಖಭಾಗ್ಭವೇತ್ ॥

ಈ ಪ್ರಕಾರ ದಾನ ಮಾಡಿದರೆ ವಾಯುಪ್ರೀತಿಯಾಗಿ ಕ್ಷೇಮವಾಗುವದು.



## ಶುಕ್ರದಶೆಯಲ್ಲಿ ಶುಕ್ರ ಪ್ರೀತಿಕರ ರಜತ (ಬೆಳ್ಳಿ) ಪಾತ್ರೆಯ ದಾನವು

ಜನನ ಲಗ್ನ ಕುಂಡಲಿಯಲ್ಲಿ ಶುಕ್ರನು ಬಲಹೀನನಾಗಿದ್ದರೆ ಬಂಧು ಕಲಹವು, ಹೆಂಡತಿ–ಮಕ್ಕಳಿಗೆ ದುಃಖವು, ಧನಹಾನಿಯು, ಭ್ರಾಂತಿಯು, ಬಹುಮೂತ್ರ, ಪೀನಸ ಮೊದಲಾದ ರೋಗಪೀಡೆಯು. ಈ ದೋಷ ಪರಿಹಾರವಾಗಿ ಸುಖ–ಸಂತೋಷ ವೃದ್ಧಿಯಾಗಿ ಪೌತ್ರ–ಪೌತ್ರ ಸಂತಾನವೃದ್ಧಿಗೆ, ಶುಕ್ರನಿಗೆ ಪ್ರೀಯಕರವಾದ ಅವರೆಕಾಳು ತುಂಬಿದ ಬೆಳ್ಳಿಯ ಪಾತ್ರೆಯನ್ನು ದಾನಮಾಡಬೇಕು.

ಕರ್ತೃವಿನ ಜನ್ಮನಕ್ಷತ್ರವಿದ್ದ ದಿವಸ ಅಥವಾ ನಾಮ ನಕ್ಷತ್ರವಿದ್ದ ದಿವಸ ಶುಕ್ರವಾರ ವಿಶೇಷ ಗ್ರಹ ಯೋಗವಿದ್ದ ಪುಣ್ಯ ಕಾಲದಲ್ಲಿ ದೇವಾಲಯ ಅಥವಾ ಮನೆಯಲ್ಲಿ ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಭೂಭಾಗದೊಳು ಪಂಚಕೋಣಾಕಾರ ಮಂಡಲವನ್ನು ಬರೆದು ಅದರ ಮೇಲೆ ಅವರೆಯ ಗುಂಪೆಯನ್ನು

ಹಾಕಿ ಅದರ ಮೇಲೆ ಹರವಾದ ಬೆಳ್ಳಿಯ ಪಾತ್ರೆಯನ್ನು ಇಟ್ಟು ಅದರ ಮೇಲೆ ಬಿಳಿಯ ವಸ್ತ್ರವನ್ನು ಹಾಸಿ ಅದರಲ್ಲಿ ಗಂಧದಿಂದ ಪಂಚಕೋಣಾಕಾರ ಮಂಡಲವನ್ನು ಬರೆದು ಮಧ್ಯದಲ್ಲಿ ಬೆಳ್ಳಿಯ ಶುಕ್ರನ ಪ್ರತಿಮೆಯನ್ನು ಇಟ್ಟು ಶುಕ್ರದೇವನನ್ನು ಆವಾಹನೆ ಮಾಡಿ ಪೂಜಿಸಬೇಕು.

ಕರ್ತೃವು ಆಚಮನ ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಾದಿಗಳನ್ನು ಉಚ್ಚರಿಸಿ ''ಮಮ ಇಹಜನ್ಮನಿ ಜನ್ಮಾಂತರೇಷು ಸಂಭಾವಿತಾನಾಂ ಸಮಸ್ತ ಪಾಪಕ್ಷಯ ದ್ವಾರಾ ಶುಕ್ರ ದೇವತಾ ಭಯ ನಿವೃತ್ತ್ಯರ್ಥಂ ಸಕಲಾಭೀಷ್ಟ ಸಿದ್ಧ್ಯರ್ಥಂ ಶುಕ್ರಗ್ರಹ ಪೂಜಾ, ರಜತ ದಾನಂ ಕರಿಷ್ಯೇ ತದಾದೌ ಶ್ರೀ ಮಹಾಗಣಪತಿ ಪೂಜಾಂ ಕರಿಷ್ಯೇ''

ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಬೇಕು. ಆಮೇಲೆ ಶುಕ್ರನ ಪ್ರತಿಮೆಯನ್ನು ಮುಟ್ಟಿ ಧ್ಯಾನಿಸಬೇಕು.

ಧ್ಯಾನಂ– ಜಟಿಲಂ ಚಾಕ್ಷಸೂತ್ರಂಚ ವರದಂಡ ಕಮಂಡಲಂ।
ಶ್ವೇತ ವಸ್ತ್ರಾವೃತಂ ವಜ್ರರತ್ನಾಭರಣ ಭೂಷಿತಂ।

''ಶುಕ್ರಂತೇ ಅನ್ಯದ್ಯಜ ತಂತೇ ಅನ್ಯದ್ವಿಷುರೂಪೇ ಅಹನೀದ್ಯೌರಿವಾಸಿ । ವಿಶ್ವಾಹಿಮಾಯಾ ಅವಸಿಸ್ವಧಾವೋ ಭದ್ರಾತೇ ಪೂಷನ್ನಿಹ ರಾತಿ ರಸ್ತು'' ॥

ಎಂದು ಧ್ಯಾನಿಸಿ ಓಂ ಭೂಃ ಶುಕ್ರಗ್ರಹ ಮಾವಾಹಯಾಮಿ। ಓಂ ಭುವಃ ಶುಕ್ರಗ್ರಹ ಮಾವಾಹಯಾಮಿ। ಓಂ ಸುವಃ ಶುಕ್ರಗ್ರಹ ಮಾವಾಹಯಾಮಿ। ಓಂ ಭೂರ್ಭುವಃ ಸುವಃ ಶುಕ್ರಗ್ರಹ ಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಿ ನಂತರ,

ಓಂ ಭೂರ್ಭುವಃ ಸ್ವರೋಂ ಸಶಕ್ತಿ ಸಾಂಗಸಾಯುಧ ಸವಾಹನ ಸಪರಿವಾರ ಓಂ ಶುಕ್ರಗ್ರಹ ದೇವತಾ ಅತ್ರಾಗಚ್ಛಾಗಚ್ಛ। ಆವಾಹಯಾಮಿ। ಆವಾಹಿತೋಭವ। ಸ್ಥಾಪಯಾಮಿ ಸ್ಥಾಪಿತೋಭವ । ಸನ್ನಿಹಿತೋಭವ । ಸಮ್ಮುಖೋಭವ, ಅವಕುಂಠಿತೋಭವ। ವರದೋಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ,

''ಓಂ ಶುಕ್ರಗ್ರಹಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ'' ಎಂದು ನಮಸ್ಕರಿಸಿ ''ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ'' ಎಂದು ಆಸನವನ್ನು ಮುಟ್ಟಿ ''ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ'' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ ''ಹಸ್ತಯೋಃ ಅರ್ಘ್ಯ ಮರ್ಘ್ಯಂ ಸಮರ್ಪಯಾಮಿ'' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ ''ಮುಖೇ ಆಚಮನೀಯಂ ಸಮರ್ಪಯಾಮಿ'' ಎಂದು

ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು. ನಂತರ ''ಓಂ ಶುಕ್ರಗ್ರಹಾಯ ನಮಃ'' ಎಂಬ ಮಂತ್ರದಿಂದ ಭಸ್ಮ, ಬಿಳಿಯ ಗಂಧ, ಬಿಳಿಯ ಅಕ್ಷತೆ, ಅತ್ತಿಯ ಎಲೆ, ಬಿಳಿಯ ಹೂಗಳಿಂದ ಪೂಜಿಸಿ ಪಂಚಕೋಣ ಮಂಡಲದ ಒಂದೊಂದು ಕೋಣೆಯಲ್ಲಿ

ಪೂರ್ವಕ್ಕೆ ''ದೈತ್ಯಾಚಾರ್ಯಾಯ ನಮಃ''
ದಕ್ಷಿಣಕ್ಕೆ ''ಭಾರ್ಗವಾಯ ನಮಃ''
ನೈಋತ್ಯಕ್ಕೆ ''ಇಂದ್ರಾಣೇಶಾಯ ನಮಃ''
ವಾಯವ್ಯಕ್ಕೆ ''ಕವಯೇ ನಮಃ'' ಉತ್ತರಕ್ಕೆ ಭೃಗು ಸುತಾಯ ನಮಃ''

ಈ ಐದು ನಾಮಗಳನ್ನು ಬರೆದು ಆ ನಾಮಗಳಿಗೆ ಆಯಾ ಕೋಣೆಗಳಲ್ಲಿ ಪೂಜಿಸಿ ಶುಕ್ರನ ಪ್ರತಿಮೆಗೆ ಧೂಪ, ದೀಪಾದಿಗಳಿಂದ ಬೆಳಗಿ ಅನ್ನ, ತುಪ್ಪದ ನೈವೇದ್ಯವನ್ನು ಸಮರ್ಪಿಸಿ ಪೂಜಾ ಸಮಾಪ್ತಿ ಮಾಡಬೇಕು. ಆ ಮೇಲೆ ಓರ್ವ ವಿಪ್ರ ಅಥವಾ ಜಂಗಮ ಮೂರ್ತಿಯನ್ನು ಭಸ್ಮ ಬಿಳಿಯ ಗಂಧ, ಬಿಳಿಯ ವಸ್ತ್ರ, ಬಿಳಿಯ ಪುಷ್ಪ ಹಾರಾದಿಗಳಿಂದ ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಶಕ್ತ್ಯಾನುಸಾರ ದಕ್ಷಿಣೆಯೊಂದಿಗೆ ಬೆಳ್ಳಿಯ ಪಾತ್ರೆ, ಶುಕ್ರನ ಪ್ರತಿಮೆ, ಅವರೆಕಾಳು ಸಹಿತ ದಾನ ಕೊಡಬೇಕು ಮತ್ತು ಶಾಂತಿ ಪಾಠ ಸೂಕ್ತವನ್ನು ಪಠಿಸಬೇಕು, ಕೊನೆಗೆ ಗಣಾರಾಧನೆ ಮಾಡಿಸಬೇಕು.

ಈ ಪ್ರಕಾರ ಮಾಡುವದರಿಂದ ಶುಕ್ರನ ಪೀಡೆಯಿಂದ ಮುಕ್ತನಾಗಿ ಧನ ಕನಕಾದಿ ಸಮಸ್ತಸಂಪತ್ತಿನೊಡನೆ ಜನನಾಯಕನಾಗಿ ಸುಖ–ಭೋಗಗಳನ್ನು ಭೋಗಿಸಿ ಕೊನೆಗೆ ವಿಷ್ಣು ಲೋಕದಲ್ಲಿ ಪ್ರವೇಶ ಮಾಡುತ್ತಾನೆ ಎಂಬುದಾಗಿ ಯಾಮಳ ತಂತ್ರದಲ್ಲಿ ಉಲ್ಲೇಖವಾಗಿದೆ.



## ಶುಕ್ರದಶಾ ಶುಕ್ರಭುಕ್ತಿಯಲ್ಲಿ ಶುಕ್ರ ಪ್ರೀತಿಕರ ಶ್ವೇತಗೋವು (ಬಿಳಿಯ ಆಕಳು) ದಾನವು

ಜನನ ಲಗ್ನ ಕುಂಡಲಿಯಲ್ಲಿ ಶುಕ್ರನು 6–8–12 ಸ್ಥಾನಗಳಲ್ಲಿದ್ದರೆ, ಶತ್ರು ರಾಶಿಗಳಲ್ಲಿದ್ದರೆ, ನೀಚನಾಗಿದ್ದರೆ, ಬಲಹೀನನಾಗಿದ್ದರೆ, ಶುಕ್ರದಶಾ ಶುಕ್ರಭುಕ್ತಿಯಲ್ಲಿ ಧನ ಹಾನಿಯು, ಆಪ್ತಬಂಧು ಜನರಿಗೆ ದುಃಖವು, ಹೆಂಡತಿಗೆ ಪೀಡೆಯು, ವಾಹನ ನಾಶವು, ಪಶುಹಾನಿಯು, ಆಸ್ತಿನಷ್ಟವು, ಮಾನಹಾನಿಯು, ಸ್ಥಾನ ಬಿಟ್ಟು ತಿರುಗಾಡುವಿಕೆಯು, ಈ ದೋಷ ಪರಿಹಾರಕ್ಕಾಗಿ ರವಿದಶಾ ಚಂದ್ರಭುಕ್ತಿಯಲ್ಲಿ ತಿಳಿಸಿದಂತೆ ಶ್ವೇತಗೋವು (ಬಿಳಿಯ ಆಕಳು) ದಾನ ಮಾಡುವದರಿಂದ ಕ್ಷೇಮವಾಗುವದು. (ಪುಟ 13 ನೋಡಿರಿ)



## ಶುಕ್ರದಶಾ ರವಿಭುಕ್ತಿಯಲ್ಲಿ ರವಿ ಪ್ರೀತಿಕರ ಛಾಯಾದಾನವು

ಜನನ ಲಗ್ನ ಕುಂಡಲಿಯಲ್ಲಿ ರವಿಯು ನೀಚರಾಶಿಗಳಲ್ಲಿದ್ದರೆ, ಶತ್ರುರಾಶಿಗಳಲ್ಲಿದ್ದರೆ, 2–7ನೆಯ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ, 6–8–12 ಸ್ಥಾನಗಳಲ್ಲಿದ್ದರೆ ಶುಕ್ರದಶಾ ರವಿಭುಕ್ತಿಯಲ್ಲಿ ಅಣ್ಣ–ತಮ್ಮಂದಿರ ಕಲಹವು. ಪಿತ್ತಜ್ವರ ಬಾಧೆಯು, ಅಧಿಕಾರ ನಾಶವು, ದೇಹ ಪೀಡೆಯು, ಹೆಂಡತಿ–ಮಕ್ಕಳಿಗೆ ದುಃಖವು. ಈ ದೋಷ ಪರಿಹಾರಕ್ಕಾಗಿ ಸೂರ್ಯ ಪ್ರಾರ್ಥನೆಯನ್ನು ಮಾಡಬೇಕು ಮತ್ತು ಛಾಯಾ ದಾನ ಮಾಡುವದರಿಂದ ಶಾಂತಿಯಾಗುವದೆಂದು ವಿಷ್ಣುಯಾಮಳ ಕಲ್ಪದಲ್ಲಿ ಉಕ್ತವಾಗಿದೆ. ಈ ಛಾಯಾ ದಾನ ಮಾಡುವದರಿಂದ ಬ್ರಹ್ಮಹತ್ಯಾ ಸುರಾಪಾನ, ಕಳವು ಮುಂತಾದ ಮಹಾಪಾತಕಗಳು ಶಾಂತಿಯಾಗುವವು ಮತ್ತು ಅಪಮೃತ್ಯು ಭಯವು, ಸರ್ವ ಉಪದ್ರವಗಳು, ಸಮಸ್ತವ್ಯಾಧಿಗಳು ನಿವಾರಣೆಯಾಗುವವು.

ಛಾಯಾ ದಾನ ವಿಧಾನ– ಕರ್ತೃವಿನ ಜನ್ಮ ಅಥವಾ ನಾಮ ನಕ್ಷತ್ರದ ದಿವಸ ಆತನು ಪ್ರಾತಃಕಾಲದಲ್ಲಿ ಎದ್ದು ಭಕ್ತಿಯಿಂದ ತನ್ನ ಇಷ್ಟ ದೇವರನ್ನು ಧ್ಯಾನಿಸಿ ದಂತಧಾವನಾದಿ ನಿತ್ಯ ಕ್ರಿಯೆಗಳನ್ನು ತೀರಿಸಿಕೊಂಡು ಸ್ನಾನ ಮಾಡಿ ಶುಚಿರ್ಭೂತನಾಗಿ ಸ್ವಗೃಹದಲ್ಲಿ ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿದ ಶುದ್ಧ ಪ್ರದೇಶದಲ್ಲಿ ಎಳ್ಳಿನ ಗುಂಪೆಯನ್ನು ಚಚ್ಚೌಕಾಗಿ ರಚಿಸಿ ಅದರ ಮೇಲೆ ಕಮಲವನ್ನು ಬರೆದು ಅದರ ಮೇಲೆ ಕಪ್ಪು ಬಣ್ಣದ ಬಟ್ಟೆಯನ್ನು ಹಾಸಿ ಅದರಲ್ಲಿ ನೀಲಿಬಣ್ಣದಿಂದ ಕಮಲವನ್ನು ಬರೆದು ಅದನ್ನು ಗಂಧ, ಎಳ್ಳು, ಅಕ್ಷತೆ ಪುಷ್ಪಗಳಿಂದ ಪೂಜಿಸಿ ಅದರ ಮೇಲೆ ಬಂಗಾರದ ಯಮಪ್ರತಿಮೆಯನ್ನು ಇಟ್ಟು,

ಕರ್ತೃವು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ ''ಮಮ ಇಹಜನ್ಮನಿ ಜನ್ಮಾಂತರೇಷು ಸಂಭಾವಿತಾನಾಂ ಸಮಸ್ತ ಪಾಪಕ್ಷಯಾರ್ಥಂ ಯಮದೇವ, ಕಾಲ ಪೂಜಾಂಚಕೃತ್ವಾ ಛಾಯಾ ದಾನಂ ಕರಿಷ್ಯೇ ತದಾದೌ ಮಹಾಗಣಪತಿ ಪೂಜಾಂ ಕರಿಷ್ಯೇ''

ಎಂದು ಸಂಕಲ್ಪವನ್ನು ಮಾಡಿ ಗಣಪತಿ ಪೂಜೆಯನ್ನು ಮಾಡಿ ಯಮ ಪ್ರತಿಮೆಯನ್ನು ಮುಟ್ಟಿ ಧ್ಯಾನ ಮಾಡಬೇಕು.

ಧ್ಯಾನಂ– ರಕ್ತನೇತ್ರಂ ರಕ್ತಕೇಶಂ ರಕ್ತ ಚಂದನ ಲೇಪಿತಂ।
ಉಗ್ರದಂಷ್ಟ್ರಂ ಮಹಾಕಾಯಂ ಉಗ್ರನೇತ್ರ ಭಯಂಕರಂ ॥
ವ್ಯಾವೃತಾಸ್ಯಂ ಮಹಾವೀರಂ ಕಾಲಂ ಮಹಿಷವಾಹನಂ।

ಉದ್ಯತೇನ್ಯೈಕ ಹಸ್ತೇನ ಭ್ರಾಮಯಂತಂ ವಿಭೀಷಣಂ ॥
ಜ್ವಾಲಾವಲಿ ಸಮಾಯುಕ್ತಂ ಕಾಲದಂಡಂ ಭಯಂಕರಂ ।
ಬಿಭ್ರಾಣಂ ವಾಮಹಸ್ತೇನ ಪಾಶಮತ್ಯುಗ್ರಬೇಧನಂ ।

ಎಂದು ಯಮದೇವನನ್ನು ಧ್ಯಾನಿಸಿ 'ಓಂ ಭೂಃ ಯಮ ಮಾವಾಹಯಾಮಿ। ಓಂ ಭುವಃ ಯಮ ಮಾವಾಹಯಾಮಿ । ಓಂ ಸುವಃ ಯಮ ಮಾವಾಹ ಯಾಮಿ। ಓಂ ಭೂರ್ಭುವಃ ಸುವಃ ಯಮ ಮಾವಾಹಯಾಮಿ ಸ್ಥಾಪಯಾಮಿ। ಪೂಜಯಾಮಿ।

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಿ ನಂತರ,

ಓಂ ಭೂರ್ಭುವಃ ಸ್ವರೋಂ ಸಶಕ್ತಿಸಾಂಗಸಾಯುಧ ಸವಾಹನ ಸಪರಿವಾರ ಓಂ ಯಮದೇವ ಅತ್ರ ಆಗಚ್ಛಾಗಚ್ಛ । ಆವಾಹಯಾಮಿ, ಆವಾಹಿತೋ ಭವ । ಸ್ಥಾಪಯಾಮಿ, ಸ್ಥಾಪಿತೋಭವ। ಸನ್ನಿಹಿತೋಭವ। ಸಮ್ಮುಖೋಭವ। ಅವಕುಂಠಿತೋಭವ ವರದೋಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ,

"ಓಂ ಯಮದೇವಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ" ಎಂದು ನಮಸ್ಕರಿಸಿ 'ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ' ಎಂದು ಆಸನವನ್ನು ಮುಟ್ಟಿ 'ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ' ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ 'ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ' ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ "ಮುಖೇ ಆಚಮನೀಯಂ ಸಮರ್ಪಯಾಮಿ" ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು. "ಓಂ ಯಮದೇವಾಯ ನಮಃ" ಎಂಬ ಮಂತ್ರದಿಂದ ಷೋಡಶೋಪಚಾರಗಳಿಂದ ಪೂಜಿಸಬೇಕು.

ಮತ್ತು ಯಮದೇವ ಪ್ರತಿಮೆಯ ಮುಂಭಾಗದಲ್ಲಿ ಒಂದು ಕುಂಭವನ್ನು ಸ್ಥಾಪಿಸಬೇಕು. ಆ ಕುಂಭದಲ್ಲಿ "ಕಾಲ" (ಯಮ)ನನ್ನು ಆವಾಹನೆ ಮಾಡಿ ಪೂಜಿಸಬೇಕು. ನಂತರ ಆಚಾರ್ಯನು ಪ್ರಾಣಾಯಾಮವನ್ನು ಮಾಡಿ,

'ಯದತ್ರ ಸಂಸ್ಥಿತಂ ಭೂತಂ ಸ್ಥಾನಮಾಶ್ರಿತ್ಯ ಸರ್ವದಾ ।
ಸ್ಥಾನಂ ತ್ಯಕ್ತ್ವಾತು ತತ್ಸರ್ವಂ ಯದಸ್ಥಂ ತತ್ರಗಚ್ಛತು' ॥

ಈ ಮಂತ್ರದಿಂದ ಸುತ್ತಲೂ ಬಿಳಿಯ ಸಾಸಿವೆಗಳನ್ನು ಹಾಕಿ ಬಳಿಕ

"ಆಪೋಹಿಷ್ಠಾ ಮಯೋಭುವಸ್ತಾನ ಊರ್ಜೇದಧಾತನ । ಮಹೇರಣಾಯ ಚಕ್ಷಸೇ । ಯೋವಶ್ಶಿವ ತಮೋ । ರಸಸ್ತಸ್ಯ ಭಾಜಯತೇಹನಃ । ಉಶತೀರಿವ ಮಾತರಃ । ತಸ್ಮಾ ಅರಂಗ ಮಾಮವೋ ಯಸ್ಯ ಕ್ಷಯಾಯ ಜಿನ್ವಥ । ಆಪೋಜನ ಯಥಾಚನಃ ॥"

ಈ ಮಂತ್ರದಿಂದ ಜಲವನ್ನು ಸಿಂಪಡಿಸಬೇಕು. ಆಕಳ ಶೆಗಣಿ (ಗೋಮಯ) ಮೂತ್ರ (ಗೋಮೂತ್ರ) ಹಾಲು, ಮೊಸರು, ತುಪ್ಪ, ಗೋರೋಜನ ಈ ವಸ್ತುಗಳಿಂದ ಸಾರಿಸಿದ ಶುದ್ಧ ಪ್ರದೇಶದಲ್ಲಿ ರಂಗವಲ್ಲಿಯಿಂದ 1 ಅಷ್ಟ ದಳ ಕಮಲವನ್ನು ರಚಿಸಿ,

''ಮಹೀದ್ಯೌಃ ಪೃಥಿವೀಚನ ಇಮಂ ಯಜ್ಞಂ ಮಿಮಿಕ್ಷತಾಂ ಪಿಪೃತಾನ್ನೋ ಭರೀಮಭಿಃ ॥''

ಈ ಮಂತ್ರವನ್ನು ಉಚ್ಚರಿಸುತ್ತ ತನ್ನ ಎರಡೂ ಕೈಗಳಿಂದ ಆ ಪ್ರದೇಶದ ಮಧ್ಯ, ಪೂರ್ವ ಪಶ್ಚಿಮ, ಉತ್ತರ ದಕ್ಷಿಣ ಭೂಮಿಯನ್ನು ಮುಟ್ಟಿ ಆ ಸ್ಥಾನಗಳಲ್ಲಿ

''ಓಷಧಯಃ ಸಂವದಂತೇ ಸೋಮೇನ ಸಹರಾಜ್ಞಾ। ಯಸ್ಮೈ ಕೃಣೋತಿ ಬ್ರಾಹ್ಮಣಸ್ತಗ್‌ಂ ರಾಜನ್ ಪಾರಯಾಮಸಿ'' ॥

ಎಂದು ಉಚ್ಚರಿಸುತ್ತ ಆ ಕಮಲಗಳ ಮೇಲೆ ಬಾಳೆಯ ಎಲೆಗಳನ್ನು ಹಾಸಿ.

ಯೇನತೇವ ಕಾಯತನಯಾಯ ಧಾನ್ಯಂ ಬೀಜಂ ವಹಧ್ವೇ ಅಕ್ಷಿತಂ। ಅಸ್ಮಭ್ಯಂ ತದ್ಧತ್ತ ನಯದ್ಧ್ವಈ ಮಹೇರಾಧೋ ವಿಶ್ವಾಯ ಸೌಭಗಂ'' ॥

ಈ ಮಂತ್ರದಿಂದ ಎಲೆಗಳ ಮೇಲೆ ಬಳ್ಳ (1ಸೇರು) ಪ್ರಮಾಣದಂತೆ ಅಕ್ಕಿಯ 5 ಗುಡ್ಡೆಗಳನ್ನು ರಚಿಸಿ.

''ಆ ಕಲಶೇಷು ಧಾವತಿ ಶ್ಯೇನೋ ವರ್ಮವಿಗಾಹತೇ। ಅಭಿದ್ರೋಣಾ ಕನಿಕ್ರದತ್'' ॥

ಎಂದು ಅನ್ನುತ್ತ ಅಕ್ಕಿಯ ಗುಂಪೆಗಳ ಮೇಲೆ ತಾಮ್ರ ಅಥವಾ ಮಣ್ಣಿನ 5 ಕಲಶ (ತಂಬಿಗೆ) ಗಳನ್ನು ಸ್ಥಾಪಿಸಿ,

''ಇಮಂಮೇ ಗಂಗೇ ಯಮುನೇ ಸರಸ್ವತಿ ಶತುದ್ರಿಸ್ತೋಮಗ್‌ಂ ಸಚತಾ ಪರುಷ್ಣಿಯಾ। ಅಸಿಕ್ನಿಯಾ ಮರುದ್ವೃಧೇ ವಿತಸ್ತಯಾರ್ಜೀ ಕೀಯೇ ಶೃಣುಹ್ಯಾಸುಷೋಮಯಾ'' ॥

ಎಂದು ಉಚ್ಚರಿಸುತ್ತ ಆ ಕಲಶಗಳಲ್ಲಿ ನೀರನ್ನು ತುಂಬಿ.

'ಗಂಧದ್ವಾರಾಂ ದುರಾಧರ್ಷಾಂ ನಿತ್ಯ ಪುಷ್ಟಾಂ ಕರೀಷಿಣೀಂ। ಈಶ್ವರೀಗ್‌ಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರೀಯಂ' ॥

ಈ ಮಂತ್ರದಿಂದ ಕಲಶಗಳಲ್ಲಿ ಗಂಧವನ್ನು ಹಾಕಿ ಹಾಗೂ ಮೇಲೆಯೂ ಧರಿಸಿ ಪುಷ್ಪ ಮಾಲಿಕೆಗಳಿಂದ ಅಲಂಕರಿಸಿ.

''ಓಂ ಯಾಓಷಧೀಃ ಪೂರ್ವಾಜಾತಾ ದೇವೇಭ್ಯ ಸ್ತ್ರೀಯುಗಂ ಪುರಾ। ಮನ್ಯೈನುಬ ಭ್ರೂಣಾಷು ಹಗ್‌ಂ ಶತಂಧಾಮಾನಿಸಪ್ತಚ'' ॥

ಈ ಮಂತ್ರದಿಂದ ಕಲಶಗಳಲ್ಲಿ(ಶತೌಷಧಿ) ಸರ್ವ ಔಷಧಿ ದ್ರವ್ಯಗಳನ್ನು ಹಾಕಿ (ಶತೌಷಧಿ (100 ಔಷಧಿ) ಗಳ ಹೆಸರುಗಳನ್ನು ಮುಂದೆ ಕೊಟ್ಟಿದೆ)

'ಕಾಂಡಾತ್ಕಾಂಡಾ ತ್ಪ್ರರೋಹಂತಿ ಪರುಷಃ ಪರುಷಃ ಪರಿ। ಏವಾನೋ ದೂರ್ವೇ ಪ್ರತನು ಸಹಸ್ರೇಣ ಶತೇನಚ' ॥

ಈ ಮಂತ್ರದಿಂದ ದರ್ಭೆಗಳನ್ನಿಟ್ಟು

'ಓಂ ಅಶ್ವತ್ಥೇವೋ ನಿಷದನಂ ಪರ್ಣೇವೋ ವ್ವಸತಿಷ್ಕೃತಾ। ಗೋಭಾಯ ಇತ್ಕಿಲಾ ಸಥಯತ್ಸನವಥ ಪೂರುಷಮ್' ॥

ಈ ಮಂತ್ರದಿಂದ ಮಾವು, ಆಲ, ಅರಳೆ, ಅತ್ತಿ ಹುಣಸೆ ಈ ಪಂಚ ಪಲ್ಲವ (ಎಲೆ) ಗಳನ್ನು ಇಟ್ಟು,

''ಸ್ಯೋನಾ ಪೃಥಿವಿನೋಭವಾ ನೃಕ್ಷರಾ ನಿವೇಶನೀ। ಯಚ್ಛಾನಃಶರ್ಮ ಸಪ್ರಥಾಃ''॥

ಈ ಮಂತ್ರದಿಂದ (ಸಪ್ತಮೃತ್ತಿಕೆಗಳನ್ನು) ಹಯಶಾಲೆ, ಗಜಶಾಲೆ, ಗೋಶಾಲೆ, ರಥ ನಿಲ್ಲುವ ಸ್ಥಳ, ಹತ್ತು ನದಿ ಮೂಲ (ಉಗಮ) ಎರಡು ನದಿಗಳ ಸಂಗಮ ಈ ಸ್ಥಳಗಳಲ್ಲಿಯ ಮಣ್ಣನ್ನು ಕಲಶಗಳಲ್ಲಿ ಹಾಕಿ

''ಯಾಃ ಫಲನೀರ್ಯಾ ಅಫಲಾ ಅಪುಷ್ಪಾಯಾಶ್ಚ ಪುಷ್ಪಿಣೀಃ ॥ ಬೃಹಸ್ಪತಿ ಪ್ರಸೂತಾಸ್ತಾನೋ ಮುಂಚತ್ವಗ್ಂ ಹಸಃ'' ॥

ಈ ಮಂತ್ರದಿಂದ ಕಲಶಗಳ ಮೇಲೆ ತೆಂಗಿನ ಕಾಯಿಗಳನ್ನಿಟ್ಟು

'ಸಹಿರತ್ನಾನಿ ದಾಶುಷೇ ಸುವಾತಿ ಸವಿತಾ ಭಗಃ। ತಂ ಭಾಗಂ ಚಿತ್ರಮೀ ಮಹೇ'॥

ಈ ಮಂತ್ರದಿಂದ ಮುತ್ತು, ಮಾಣಿಕ, ಹವಳ, ಇಂದ್ರನೀಲ, ವಜ್ರ ಈ ಪಂಚರತ್ನಗಳನ್ನು ಹಾಕಿ,

''ಹಿರಣ್ಯರೂಪ ಸ್ಸಹಿರಣ್ಯ ಸಂದೃಗಪಾನ್ನಪಾತ್ಸೇದು ಹಿರಣ್ಯ ವರ್ಣಃ। ಹಿರಣ್ಯಯಾತ್ಪರಿಯೋ ನೇರ್ನಿಷದ್ಯಾ ಹಿರಣ್ಯ ದಾದದತ್ಯನ್ನಮಸ್ಮೈ'' ॥

ಈ ಮಂತ್ರದಿಂದ ಕಲಶಗಳಲ್ಲಿ ಶಕ್ತ್ಯಾನುಸಾರ ಬಂಗಾರವನ್ನು ಹಾಕಿ

'ತಂತುಂ ತನ್ವನ್ ರಜಸೋಭಾನುಮನ್ವಿಹಿ । ಜ್ಯೋತಿಷ್ಮತಃ ಪಥೋ ರಕ್ಷಧಿಯಾ ಕೃತಾನ್। ಅನುಲ್ಬಣಂ ಪಯಸಜೋಗುವಾಮಪೋ ಮನುರ್ಭವ ಜನಯಾದೈವ್ಯಂ ಜನಂ' ॥

ಎಂದು ಉಚ್ಚರಿಸುತ್ತ ಕಲಶಗಳಿಗೆ ಕೆಂಪು ದಾರವನ್ನು ಸುತ್ತಬೇಕು.

'ಯುವಾ ಸುವಾಸಾಃ ಪರಿವೀತ ಆಗಾತ್ ಸಉಶ್ರೇಯಾನ್ ಭವತಿ ಜಾಯಮಾನಃ। ತಂಧೀರಾಸಃ ಕವಯ ಉನ್ನಯಂತಿ ಸ್ವಾಧ್ಯಿಯೋ ಮನಸಾ ದೇವಯಂತಃ' ॥

ಎಂದು ಉಚ್ಚರಿಸುತ್ತ ಕಲಶಗಳಿಗೆ ಕೆಂಪು ವಸ್ತ್ರಗಳನ್ನು ಧರಿಸಿ

ಧ್ಯಾನಂ- "ಓಂ ಇಮಂ ಯಮ ಪ್ರಸ್ತರ ಮಾಹಿಸೀದಾಂಗಿ ರೋಭಿಃ ಪಿತೃಭಿಃ ಸಂವಿದಾನಃ ಆತ್ವಾಮತ್ರಾಃ ಕವಿಶಸ್ತ್ರಾ ವಹಂತ್ವೇ ನಾರಾಜನ್ಹವಿಷಾಮಾದಯ ಸ್ವ"

ಎಂದು ಕಲಶವನ್ನು ಮುಟ್ಟಿ ಯಮದೇವನನ್ನು ಧ್ಯಾನಿಸಿ,

ಓಂ ಭೂಃ ಕಾಲದೇವ ಮಾವಾಹಯಾಮಿ । ಓಂ ಭುವಃ ಕಾಲ ದೇವ ಮಾವಾಹಯಾಮಿ। ಓಂ ಸುವಃ ಕಾಲದೇವ ಮಾವಾಹಯಾಮಿ। ಓಂ ಭೂರ್ಭುವಃ ಸುವಃ ಕಾಲದೇವ ಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಎಂದು ಕಲಶದ ಮೇಲೆ ಅಕ್ಷತೆಗಳನ್ನು ಹಾಕಿ ನಂತರ,

ಓಂ ಭೂರ್ಭುವಃ ಸ್ವರೋಂಸಶಕ್ತಿ ಸಾಂಗಸಾಯುಧ ಸವಾಹನ ಸಪರಿವಾರ ಓಂ ಕಾಲದೇವ ಅತ್ರಾಗಚ್ಛಾಗಚ್ಛ । ಆವಾಹವಾಯಾಮಿ ಆವಾಹಿತೋಭವ । ಸ್ಥಾಪಯಾಮಿ। ಸ್ಥಾಪಿತೋಭವ । ಸನ್ನಿಹಿತೋಭವ । ಸಮ್ಮುಖೋಭವ । ಅವಕುಂಠಿತೋಭವ। ವರದೋಭವ।

"ಓಂ ಕಾಲಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ" ಎಂದು ನಮಸ್ಕರಿಸಿ "ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ" ಎಂದು ಆಸನವನ್ನು ಮುಟ್ಟಿ "ಪಾದಯೋಃ ಪಾದ್ಯಂಪಾದ್ಯಂ ಸಮರ್ಪಯಾಮಿ" ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ "ಹಸ್ತಯೋಃ ಅರ್ಘ್ಯ ಮರ್ಘ್ಯಂ ಸಮರ್ಪಯಾಮಿ" ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ "ಮುಖೇ ಆಚಮನೀಯಂ ಸಮರ್ಪಯಾಮಿ" ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು. ನಂತರ "ಓಂ ಕಾಲಾಯ ನಮಃ" ಎಂಬ ಮಂತ್ರದಿಂದ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಬಳಿಕ ಆ ಕುಂಭದ ಪಶ್ಚಿಮ ಭಾಗದಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿ ಸಂಸ್ಕರಿಸಿ 108 ಆಜ್ಯ ಆಹುತಿಗಳನ್ನೂ, ತಿಲ ಹೋಮ ಸರ್ವಜಪ ಹೋಮ, ಪೂರ್ಣಾಹುತಿ ಮೊದಲಾದವನ್ನು ಮಾಡಬೇಕು. ಮೂಲ ಮಂತ್ರದಿಂದ ತುಪ್ಪವನ್ನು 108 ಸಾರೆ ಅಥವಾ 28 ಸಾರೆ ಆಹುತಿ ಕೊಟ್ಟು "ಯಮಾಯಸ್ವಾಹಾ" ಇತಿ ಮಂತ್ರದಿಂದ 15 ಸಾರೆ, ಎಳ್ಳಿನಿಂದ ಪ್ರತ್ಯೇಕವಾಗಿ 28 ಸಾರೆ, ಹವನ ಮಾಡಿ ಹೋಮ ಕರ್ಮವನ್ನು ಸಮಾಪ್ತಿಗೊಳಿಸಬೇಕು.

ಬಳಿಕ ಹರವಾದ ಕಂಚಿನ ಪಾತ್ರೆಯಲ್ಲಿ ಅದರಲ್ಲಿ ತುಪ್ಪವನ್ನು ಹಾಕಿ ಆ ಪಾತ್ರೆಯ ಮಧ್ಯದಲ್ಲಿ ಬಂಗಾರವನ್ನು ಇಟ್ಟು ಆ ಪಾತ್ರೆಯ ಮೇಲೆ ಕಪ್ಪು ವಸ್ತ್ರವನ್ನು ಹೊದಿಸಬೇಕು ಮತ್ತು ಕಂಚಿನ ಪಾತ್ರೆಯನ್ನು ಕುಂಭದ ಮುಂಭಾಗದಲ್ಲಿ ಇಡಬೇಕು. ಕಾಲ ಪುರುಷನನ್ನು ಭಕ್ತಿಯಿಂದ ಪೂಜೆ ಮಾಡಿ ಸ್ತೋತ್ರ ಮಾಡಬೇಕು ಮತ್ತು ಪುಷ್ಪಾಂಜಲಿ ಕೊಡಬೇಕು.

ಸ್ತೋತ್ರ- ಯಮಾಯ ಧರ್ಮರಾಜಾಯ ಮೃತ್ಯುವೇಚಾಂತ ಕಾಯಚ।
ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯಚ॥
ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ।
ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯಚ ಕ್ರಮಾತ್॥
ದಂಡಪಾಶಕರಾಯೇತಿ ಕೃತ್ವಾ ಪುಷ್ಪಾಂಜಲಿಂ ಬುಧಃ।
ತತಸ್ತಸ್ಮಿನ್ ಸಮಾಲೋಕ್ಯ ಸರ್ವಾಂಗಂ ದೃಶ್ಯತೇ ಯಥಾ॥
ಬದ್ಧಾಂಜಲಿ ಪುಟೋಭೂತ್ವಾ ಮಂತ್ರಮಿತ್ಥಮುದೀರಯೇತ್।

ಮಂತ್ರ- ಜನ್ಮಾಂತರೇಷು ಯತ್ಪಾಪಂ ಮನೋವಾಕ್ಕಾಯ ಕರ್ಮಜಂ।
ಜ್ಞಾನತೋಽಜ್ಞಾನತೋವಾಪಿ ಯದ್ಯತ್ಪಾಪಂ ಕೃತಂಮಯಾ।
ತತ್ಸರ್ವಂ ಮಮದೇಹಾಚ್ಚ ನಿರ್ಗಮ್ಯ ಘೃತಪೂರಿತೇ।
ಪಾತ್ರೇಕಾಂಸ್ಯಮಯೇ ಪಾಪಂ ಛಾಯಾ ರೂಪೇಣ ವರ್ತತೇ॥

ಎಂದು ಉಚ್ಚರಿಸುತ್ತ ಕಂಚಿನ ಪಾತ್ರೆಯಲ್ಲಿಯ ಕರಗಿರುವ ತುಪ್ಪದಲ್ಲಿ ಛಾಯಾ ಪುರುಷನ (ದರ್ಶನ) ಅವಲೋಕನವನ್ನು 3 ಸಾರೆ ಮಾಡಬೇಕು. ನಂತರ ಓರ್ವ ಬ್ರಾಹ್ಮಣ ಅಥವಾ ಜಂಗಮ ಮೂರ್ತಿಯನ್ನು ಪೂಜಿಸಿ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತ ಎಲ್ಲವನ್ನೂ ದಾನ ಕೊಡಬೇಕು.

ಮಂತ್ರ- ಯದ್ಯತ್ಪಾಪಂ ಕೃತಂ ಪೂರ್ವಂ ವರ್ತತೇ ಮಯಿಸರ್ವದಾ॥
ಛಾಯಾರೂಪೇಣ ತತ್ಸರ್ವಂ ಗೃಹಣತ್ವ ದ್ವಿಜೋತ್ತಮ।
ಅಪಮೃತ್ಯುಹರಂ ಯಸ್ಮಾಚ್ಛಾಯಾ ರೂಪ ಮನುತ್ತಮಂ।
ತಸ್ಮಾದಸ್ಯ ಪ್ರದಾನೇನ ಪ್ರೀತೋಭವತು ಧರ್ಮರಾಟ್॥

ಎಂದು ಉಚ್ಚರಿಸುತ್ತ ಯಥಾ ಶಕ್ತಿ ದಕ್ಷಿಣೆ ಸಹಿತ ಸರ್ವವನ್ನೂ ದಾನಕೊಟ್ಟರೆ ಸರ್ವ ಅನಿಷ್ಟಗಳೂ, ರೋಗಗಳೂ, ಮೃತ್ಯುವೂ ಪರಿಹಾರವಾಗುವವು ಹಾಗೂ ಯಾರು ಈ ಛಾಯಾ ದಾನವನ್ನು ಮಾಡುವರೋ ಅವರಿಗೆ ಅಗ್ನಿಭಯ, ಶಸ್ತ್ರಭಯ, ಭೂತ, ಪ್ರೇತ, ಪಿಶಾಚಿಭಯ, ಯಂತ್ರ, ಮಂತ್ರ, ತಂತ್ರ, ಅಭಿಚಾರ, ಮಾಟ, ಮದ್ದುವಗೈರೆ ಯಾವ ಮಾರಣಾದಿಗಳ ಭಯವೂ ಉಂಟಾಗಲಾರದು ಎಂಬುದಾಗಿ ವಿಷ್ಣು ಯಾಮಳ ಕಲ್ಪದಲ್ಲಿ ಉಕ್ತವಾಗಿದೆ.



## ಶುಕ್ರದಶಾ ಚಂದ್ರಭುಕ್ತಿಯಲ್ಲಿ ಚಂದ್ರ ಪ್ರೀತಿಕರ ಮೃಗ (ಚಿಗರೆ) ದಾನವು

ಜನನ ಲಗ್ನ ಕುಂಡಲಿಯಲ್ಲಿ ಚಂದ್ರನು 6-8-12 ನೆಯ ಸ್ಥಾನಗಳಲ್ಲಿದ್ದರೆ, 2ನೆಯ ಸ್ಥಾನಾಧಿಪತಿಯೊಡನೆ ಕೂಡಿದ್ದರೆ, ನೀಚರಾಶಿಗಳಲ್ಲಿದ್ದರೆ, ಪಾಪ ಗ್ರಹಗಳೊಡನೆ ಕೂಡಿದ್ದರೆ, ಕ್ಷೀಣ ಚಂದ್ರನಾಗಿದ್ದರೆ, ವಿಕಲಾಂಶದಲ್ಲಿದ್ದರೆ ಶುಕ್ರದಶಾ ಚಂದ್ರಭುಕ್ತಿಯಲ್ಲಿ ಧನ ಹಾನಿಯು, ತಾಯಿ ಅಥವಾ ತಾಯಿಯ ಸಂಬಂಧಿಕರಿಗೆ ದುಃಖವು, ಸ್ತ್ರೀ ಸಂಬಂಧ ಕಲಹವು. ದೇಹದಲ್ಲಿ ವಾತರೋಗ ಪೀಡೆಯು, ಊಟದಲ್ಲಿ ರುಚಿ ಕಡಿಮೆ, ಸಮಾಜ ಜನರೊಡನೆ ದ್ವೇಷವು, ಸರಕಾರದವರಿಂದ ಭಯವು. ಈ ದೋಷ ಪರಿಹಾರಕ್ಕಾಗಿ ಕೇತುದಶಾ ಬುಧಭುಕ್ತಿಯಲ್ಲಿ ತಿಳಿಸಿದಂತೆ ಮೃಗ (ಚಿಗರೆ) ದಾನ ಮಾಡುವದರಿಂದ ಕ್ಷೇಮವಾಗುವದು. (ಪುಟ 147 ನೋಡಿರಿ)



## ಶುಕ್ರದಶಾ ಕುಜಭುಕ್ತಿಯಲ್ಲಿ ಕುಜಪ್ರೀತಿಕರ ಅನಡ್ವಾಹ (ಎತ್ತು) ದಾನವು

ಜನನ ಲಗ್ನ ಕುಂಡಲಿಯಲ್ಲಿ ಕುಜನು 6-8-12 ಸ್ಥಾನಗಳಲ್ಲಿದ್ದರೆ, 2-7ನೆಯ ಸ್ಥಾನದಲ್ಲಿದ್ದರೆ, ಕ್ರೂರದ್ರೇಕ್ಕಾಣದಲ್ಲಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, ನೀಚರಾಶಿಯಲ್ಲಿದ್ದರೆ, ಶತ್ರುಕ್ಷೇತ್ರಗಳಲ್ಲಿದ್ದರೆ ಶುಕ್ರದಶಾ ಕುಜಭುಕ್ತಿಯಲ್ಲಿ ಸಹೋದರ ನಾಶವು, ಮನೋವ್ಯಥೆಯು, ಹೊಲ-ಮನೆ ಆಸ್ತಿನಾಶವು, ಧನ ಧಾನ್ಯ ಹಾನಿಯು, ಅಣ್ಣ-ತಮ್ಮಂದಿರ ಕಲಹವು, ಸಾಲದ ಬಾಧೆಯು, ವಿಷ, ಶಸ್ತ್ರ, ಅಗ್ನಿ ಭಯವು, ಬುದ್ಧಿ ಭ್ರಂಶವು, ಮನೋವ್ಯಥೆಯು ಸರ್ವತ್ರ ಕಲಹವು, ಪಿತ್ತಜ್ವರ ಪೀಡೆಯು. ಈ ದೋಷ ಪರಿಹಾರಕ್ಕಾಗಿ ಷಣ್ಮುಖಸ್ವಾಮಿಯನ್ನು ಪೂಜಿಸಿ ರವಿದಶಾ ಕುಜಭುಕ್ತಿಯಲ್ಲಿ ತಿಳಿಸಿದಂತೆ ವೃಷಭ (ಎತ್ತು) ದಾನ ಮಾಡುವದರಿಂದ ಸುಖವು, ಕ್ಷೇಮವು. (ಪುಟ 17 ನೋಡಿರಿ)



## ಶುಕ್ರದಶಾ ರಾಹುಭುಕ್ತಿಯಲ್ಲಿ ರಾಹು ಪ್ರೀತಿಕರ ಮಹಾಕೂಷ್ಮಾಂಡ ದಾನವು

ಜನನ ಲಗ್ನ ಕುಂಡಲಿಯಲ್ಲಿ ರಾಹು ನೀಚರಾಶಿಗಳಲ್ಲಿದ್ದರೆ, 6-8-12-2-7ನೆಯ ಸ್ಥಾನಗಳಲ್ಲಿದ್ದರೆ, 4-10, 5-9 ಸ್ಥಾನಗಳಲ್ಲಿದ್ದರೆ,

ಕ್ರೂರದ್ರೇಕ್ಕಾಣದಲ್ಲಿದ್ದರೆ, ಕ್ರೂರ ಷಷ್ಟ್ಯಂಶದಲ್ಲಿದ್ದರೆ ಶುಕ್ರದಶಾ ರಾಹುಭುಕ್ತಿಯಲ್ಲಿ ವಾತಜ್ವರ, ಅಜೀರ್ಣ ರೋಗವು, ಕಾರ್ಯ ವಿಘ್ನವು, ಮನೋವ್ಯಥೆಯು ಶಿರೋವ್ಯಾಧಿಯು, ಸರ್ವ ವಿನಾಶವು, ಭಯವು, ಸ್ಥಾನ ಬಿಟ್ಟು ತಿರುಗಾಡುವಿಕೆಯು ಈ ದೋಷ ಪರಿಹಾರಕ್ಕಾಗಿ ದುರ್ಗಾ ಜಪವನ್ನು ಮಾಡಬೇಕು ಅಥವಾ ದೇವೀ ಪುರಾಣವನ್ನು ಪಾರಾಯಣ ಮಾಡಬೇಕು. ಮಹಾಕೂಷ್ಮಾಂಡ ದಾನವನ್ನು ಮಾಡಬೇಕು. (ಪುಟ 118 ನೋಡಿರಿ)



## ಶುಕ್ರದಶಾ ಗುರುಭುಕ್ತಿಯಲ್ಲಿ ಗುರುಪ್ರೀತಿಕರ ಕೂಷ್ಮಾಂಡ ದಾನವು

ಜನನ ಲಗ್ನಕುಂಡಲಿಯಲ್ಲಿ ಗುರು ನೀಚ ರಾಶಿಗಳಲ್ಲಿದ್ದರೆ, ಪರಾಜಿತನಾಗಿದ್ದರೆ, ಪಾಪಗ್ರಹಗಳಿಂದ ಕೂಡಿದ್ದರೆ, ದುಷ್ಟ ಸ್ಥಾನಗಳಲ್ಲಿದ್ದರೆ, ಶುಕ್ರದಶಾ ಗುರುಭುಕ್ತಿಯಲ್ಲಿ ಕಾರ್ಯ ಹಾನಿಯು, ಸರಕಾದವರ ಭಯವು, ಆಸ್ತಿನಾಶವು, ಬ್ರಾಹ್ಮಣರಿಂದ ಭಯವು, ಗುರುಜನರಿಂದ ಭಯವು, ಗುರುಜನರ ವಿರೋಧವು, ಜಾತಿ ಕಲಹವು, ಹೆಂಡತಿ ಮಕ್ಕಳಿಂದ ವಿಯೋಗವು, ಬುದ್ಧಿಭ್ರಂಶವು. ಈ ದೋಷ ಪರಿಹಾರಕ್ಕಾಗಿ ಶ್ರೀ ರುದ್ರಜಪ ಅಥವಾ ಶ್ರೀರುದ್ರ ಪಾರಾಯಣವನ್ನು ಮಾಡಿಸಿ ಬಂಗಾರವನ್ನು ಹುದುಗಿಸಿದ ಕುಂಬಳಕಾಯಿಗಳ ದಾನವನ್ನು ಶನಿದಶಾ ರವಿಭುಕ್ತಿಯಲ್ಲಿ ಹೇಳಿದಂತೆ ಮಾಡಬೇಕು. (ಪುಟ 118 ನೋಡಿರಿ)



## ಶುಕ್ರದಶಾ ಶನಿಭುಕ್ತಿಯಲ್ಲಿ ಶನಿ ಪ್ರೀತಿಕರ ಮಹಿಷೀ ದಾನವು

ಜನನ ಲಗ್ನ ಕುಂಡಲಿಯಲ್ಲಿ ಶನಿಯು 1–6–8–12 ಸ್ಥಾನಗಳಲ್ಲಿದ್ದರೆ, 2–7 ನೆಯ ಸ್ಥಾನಾಧಿಪತಿಗಳೊಡನೆ ಕೂಡಿದ್ದರೆ, ನೀಚ ಕ್ಷೇತ್ರಗತನಾಗಿದ್ದರೆ, ನೀಚಾಂಶದಲ್ಲಿದ್ದರೆ, ನೀಚ ಗ್ರಹಗಳೊಡನೆ ಕೂಡಿದ್ದರೆ ಕ್ರೂರಗ್ರಹಗಳೊಡನೆ ಕೂಡಿದ್ದರೆ ಶುಕ್ರದಶಾ ಶನಿಭುಕ್ತಿಯಲ್ಲಿ ಕಾರ್ಯ ನಾಶವು, ಧನ–ಧಾನ್ಯ ನಷ್ಟವು, ಸರ್ಕಾರದವರ ಕೋಪವು, ಆಪ್ತ ಮಿತ್ರರ ನಾಶವು, ಪಶುನಾಶವು, ವಾತಜ್ವರ, ಅತಿಸಾರ, ಶೂಲಿ, ಪಾಂಡು ಮೊದಲಾದ ರೋಗ ಪೀಡೆಯು. ಈ ದೋಷ ಪರಿಹಾರಕ್ಕಾಗಿ ರವಿದಶಾ ರಾಹು ಭುಕ್ತಿಯಲ್ಲಿ ಹೇಳಿದಂತೆ ಮಹಿಷೀ ದಾನವನ್ನು ಮಾಡಬೇಕು. (ಪುಟ 20 ನೋಡಿರಿ)



## ಶುಕ್ರದಶಾ ಬುಧ ಭುಕ್ತಿಯಲ್ಲಿ ಬುಧ ಪ್ರೀತಿಕರ ಲಕ್ಷ್ಮೀನಾರಾಯಣ ದಾನವು

ಜನನ ಲಗ್ನಕುಂಡಲಿಯಲ್ಲಿ ಬುಧನು 6–8–12 ಸ್ಥಾನಗಳಲ್ಲಿದ್ದರೆ, ನೀಚ ರಾಶಿಗಳಲ್ಲಿದ್ದರೆ, ಬಲಹೀನನಾಗಿದ್ದರೆ, 2–7 ಸ್ಥಾನಗಳಲ್ಲಿದ್ದರೆ, ಕ್ರೂರಾಂಶದಲ್ಲಿದ್ದರೆ, ಕ್ರೂರ ಗ್ರಹಗಳೊಡನೆ ಕೂಡಿದ್ದರೆ, 6–8ನೆಯ ನವಾಂಶದಲ್ಲಿದ್ದರೆ ಶುಕ್ರದಶಾ ಬುಧ ಭುಕ್ತಿಯಲ್ಲಿ ಬಂಧುಗಳೊಡನೆ ಕಲಹವು, ಸೋದರ ಮಾವನಿಗೆ ಅರಿಷ್ಟವು, ಅಪ ಕೀರ್ತಿಯು, ಭಯವು, ಧನಧಾನ್ಯ ಹಾನಿಯು, ಅಧಿಕಾರ ಕಳೆದುಕೊಳ್ಳುವಿಕೆಯು, ಪಿತ್ತ ರೋಗ, ಜ್ವರ, ಅತಿಸಾರ ಮೊದಲಾದ ರೋಗ ಪೀಡೆಯು, ತಾಯಿ ಮತ್ತು ತಾಯಿಯ ಸಂಬಂಧಿಕರಿಗೆ ದುಃಖವು. ಈ ದೋಷ ಪರಿಹಾರಕ್ಕಾಗಿ ಚಂದ್ರದಶಾ ಬುಧಭುಕ್ತಿಯಲ್ಲಿ ತಿಳಿಸಿದಂತೆ ಲಕ್ಷ್ಮೀ ನಾರಾಯಣ ದಾನವನ್ನು ಮಾಡುವದರಿಂದ ಕ್ಷೇಮವಾಗುವದು. (ಪುಟ 57 ನೋಡಿರಿ)



## ಶುಕ್ರದಶಾ ಕೇತುಭುಕ್ತಿಯಲ್ಲಿ ಕೇತು ಪ್ರೀತಿಕರ ಛಾಗ ದಾನವು

ಜನನ ಲಗ್ನಕುಂಡಲಿಯಲ್ಲಿ ಕೇತು 4–7–10–5–9–2–4–6–8–12 ಸ್ಥಾನಗಳಲ್ಲಿದ್ದರೆ, ಪಾಪಗ್ರಹಗಳೊಡನೆ ಕೂಡಿದ್ದರೆ, ಕ್ರೂರದ್ರೇಕ್ಕಾಣದಲ್ಲಿದ್ದರೆ, ಕ್ರೂರಷಷ್ಟ್ಯಂಶದಲ್ಲಿದ್ದರೆ, ಶುಕ್ರದಶಾ ಕೇತುಭುಕ್ತಿಯಲ್ಲಿ ಕಲಹವು, ಶತ್ರುಗಳಿಂದ ಉಪದ್ರವವು. ವಿಷ, ಶಸ್ತ್ರ, ಅಗ್ನಿ ಭಯವು, ಹೆಂಡತಿ ಮಕ್ಕಳಿಗೆ ದುಃಖವು, ಪಿತ್ತರೋಗ ವಿಕಾರವು, ಶಿರೋಭ್ರಮಣವು, ದೇಹ ಪೀಡೆಯು, ಕಲಹವು, ಆಸ್ತಿನಾಶವು, ಚಿತ್ತ ವಿಭ್ರಮವು. ಈ ದೋಷ ಪರಿಹಾರಕ್ಕಾಗಿ ಮೃತ್ಯುಂಜಯ ಜಪವನ್ನು ಮಾಡಿಸಿ ರವಿದಶಾ ಶನಿಭುಕ್ತಿಯಲ್ಲಿ ಹೇಳಿದಂತೆ ಛಾಗ (ಮೇಕೆ) ದಾನವನ್ನು ಮಾಡಬೇಕು. (ಪುಟ 26 ನೋಡಿರಿ)



## ರವಿರಕ್ಷಾ ವಿಧಾನ

ಸೂರ್ಯಗ್ರಹದ ಕ್ರೂರ ದೋಷದಿಂದ ಉಂಟಾಗುವ ನಾನಾ ರೀತಿಯ ಪೀಡೆಗಳ ಪರಿಹಾರಕ್ಕೆ ಗ್ರಾಮದ ಈಶಾನ್ಯ ಅಥವಾ ಉತ್ತರ ದಿಕ್ಕುಗಳಲ್ಲಿರುವ ಬಿಳಿಯ ಎಕ್ಕೆಯ ಗಿಡದ ಬಳಿಗೆ ಶನಿವಾರ ಸಾಯಂಕಾಲಕ್ಕೆ ಹೋಗಬೇಕು. ಅದನ್ನು ಪೂಜಾ ಮಾಡಿ ರೋಗಿಯ ಹೆಸರನ್ನು ಒಂದು ಕಾಗದದಲ್ಲಿ ಬರೆದು, ಆ ಕಾಗದದ ಚೀಟಿಯನ್ನು ಎಕ್ಕೆಯ

ಗಿಡದ ಉತ್ತರದ ಕೊಂಬೆಯಲ್ಲಿ ಕಟ್ಟಿ ಬರಬೇಕು. ಮರುದಿವಸ ಅಂದರೆ ರವಿವಾರ ಪ್ರಾತಃಕಾಲದಲ್ಲಿ ಮೌನವಾಗಿ ಸ್ನಾನಾದಿ ಕ್ರಿಯೆಗಳನ್ನು ತೀರಿಸಿಕೊಂಡು ಶುಚಿರ್ಭೂತನಾಗಿ ಆ ಗಿಡದ ಹತ್ತಿರಕ್ಕೆ ಹೋಗಿ ಸೂರ್ಯನ ದ್ವಾದಶ (12) ನಾಮಗಳಿಂದ (ಗಂಧ, ಕುಂಕುಮ, ಅಕ್ಷತೆ, ಧೂಪ, ದೀಪಾದಿಗಳಿಂದ) ಪೂಜಿಸಿ ಆ ಗಿಡದ ಈಶಾನ್ಯ ದಿಕ್ಕಿನ ಟೊಂಗೆಯಲ್ಲಿಯ ನಾರನ್ನು ತೆಗೆದು ಅರಿಷಿಣದ ಅರಿವೆಯಲ್ಲಿ ಕಟ್ಟಿ ನೆಲದ ಮೇಲೆ ಇಡದೆ ಮುಡಿಚಟ್ಟಾಗದಂತೆ ಮನೆಗೆ ತರಬೇಕು. ರೋಗಪೀಡಿತನಿಗೆ ದೂರ್ವೋದಕ (ಕರಿಕೆ ಪತ್ರಿ ಮಿಶ್ರ ಜಲ) ದಿಂದ ಸೂರ್ಯನಾಮಗಳನ್ನು ಪಠಿಸುತ್ತ ಪ್ರೋಕ್ಷಣೆ ಮಾಡಿ ಅರಿಷಿಣದ ಅರಿವೆಗೆ ಧೂಪ ಹಾಕಿ ಅದನ್ನು ರೋಗಿಯ ತೋಳಿಗೆ ಅಥವಾ ಟೊಂಕಕ್ಕೆ ಇಲ್ಲವೆ ಕೊರಳಲ್ಲಿ ಗಂಟು ಹಾಕಿ ಕಟ್ಟಿ ಸೂರ್ಯ ಪ್ರಾರ್ಥನೆಯನ್ನು ಮಾಡುವದರಿಂದ ಸೂರ್ಯನ ದೋಷದಿಂದ ಉಂಟಾಗಿದ್ದ ಸಮಸ್ತ ಪೀಡೆಗಳೆಲ್ಲವೂ ಪರಿಹಾರವಾಗುವವು.

## ಸೂರ್ಯನ ದ್ವಾದಶ (12) ನಾಮಗಳು

ಸೂರ್ಯಾಯ ನಮಃ। ಆದಿತ್ಯಾಯ ನಮಃ। ಅರ್ಕಾಯ ನಮಃ। ಭಾನವೇ ನಮಃ। ಭಾಸ್ಕರಾಯ ನಮಃ। ದಿವಾಕರಾಯ ನಮಃ। ಮಾರ್ತಾಂಡಾಯ ನಮಃ। ರವಿಯೇ ನಮಃ। ಮಿಹಿರಾಯ ನಮಃ। ತೀಕ್ಷ್ಣಾಂಶವೇ ನಮಃ। ಸಪ್ತತುರಂಗ ಬಾಹವೇ ನಮಃ। ಪದ್ಮಕರಾಯ ನಮಃ।

ಈ ರಕ್ಷಾ ವಿಧಾನವು ಅಶ್ವಿನಿ ತಂತ್ರದಲ್ಲಿ ಉಲ್ಲೇಖವಾಗಿದೆ. ಪರಮಾನ್ನ ದಿಂದಲೂ (ಗೋದಿ ಹುಗ್ಗಿ) ತುಪ್ಪದಿಂದಲೂ, ಬಿಳಿ ಎಕ್ಕೆಯ ಕುಡಿ, ಕಡ್ಡಿಗಳಿಂದಲೂ, ಸೂರ್ಯನ ("ಓಂ ಆಕೃಷ್ಣೇನ ರಜಸಃ ಇದಂ ಸೂರ್ಯಾಯ ನಮಮ'') ಈ ಮಂತ್ರದಿಂದ ಮಾಡುವ ಹೋಮವೂ, ಗೋಧೂಮ (ಗೋದಿ) ಧಾನ್ಯಗಳ ದಾನವೂ, ಉಪ್ಪು ಇಲ್ಲದ ಆಹಾರ ಸೇವನೆಯೂ, ರವಿಯ ಪ್ರಾರ್ಥನೆ, ಸ್ತೋತ್ರಗಳಿಂದಲೂ ಸೂರ್ಯನು ಸಂತುಷ್ಟನಾಗಿ ಸರ್ವ ಅರಿಷ್ಟಗಳನ್ನು ನಿವಾರಿಸುವನು. ಚಂದ್ರನೇ ಮೊದಲಾದ ಸರ್ವ ಗ್ರಹಗಳ ವಿಕಾರಗಳಿಗೆ ಸೂರ್ಯನೇ ಕಾರಣನಾಗಿರುವನು. ಆಕಾಶದಲ್ಲಿರುವ ಎಲ್ಲ ಗ್ರಹಗಳಿಗೆ ಸೂರ್ಯನೇ ರಾಜನು. ಸೂರ್ಯನೇ ಸರ್ವಾತ್ಮಕನು ಮತ್ತು ಕರ್ಮ ಸಾಕ್ಷೀಭೂತನಾಗಿರುವದರಿಂದ ಸರ್ವಗ್ರಹಗಳ ದಶಾ ಭುಕ್ತಿ ಕಾಲಗಳಲ್ಲಿಯಾದರೂ ಎಲ್ಲ ಗ್ರಹಗಳ ದೋಷಗಳಿಂದ ಉಂಟಾಗಬಹುದಾದ ಸಮಸ್ತ ಪೀಡೆಗಳ ಪರಿಹಾರಕ್ಕೋಸ್ಕರವಾಗಿ ಸೂರ್ಯನನ್ನೇ ಆರಾಧನೆ ಮಾಡಿ ಸೂರ್ಯ ರಕ್ಷಾ ವಿಧಾನವನ್ನು ಪ್ರಯೋಗಿಸಿಕೊಂಡು ಆಯಾ ಗ್ರಹಗಳಿಗೆ ಹೇಳುವ ರಕ್ಷಾ ತಂತ್ರಗಳನ್ನು ಸೇರಿಸುವದರಿಂದ ಸರ್ವಗ್ರಹಗಳ ಶಾಂತಿಯೂ, ಸರ್ವ ಪೀಡೆಗಳ ನಿವೃತ್ತಿಯೂ ಆಗುವದು.



## ಚಂದ್ರಗ್ರಹ ರಕ್ಷಾ ವಿಧಾನ

ಪೂರ್ವ ದಿಕ್ಕಿನ ಕಡೆಗೆ ಹರಿಯುವ ಕಾಲುವೆಯ ನೀರನ್ನು ಶುಚಿರ್ಭೂತರ್ನಾಗಿ ಬೆಳ್ಳಿಯ ತಂಬಿಗೆ (ಕಲಶ) ಯಲ್ಲಿ ತುಂಬಿಕೊಂಡು ಬಂದು ಅದರಲ್ಲಿ ಬಿಳಿ ಕರಿಕೆಯ ಕಟ್ಟನ್ನು ಇಟ್ಟು ಸೂರ್ಯೋದಯ ಸಮಯದಲ್ಲಿ ಮೌನವಾಗಿ ಮನೆಗೆ ತರಬೇಕು.

ಕರ್ತೃವು ಪೂರ್ವಾಭಿಮುಖವಾಗಿ ಆಸನದ ಮೇಲೆ ಕುಳಿತುಕೊಂಡು ಕಲಶವನ್ನು ಎಡ ಹಸ್ತದಲ್ಲಿ ಇರಿಸಿ ಬಲ ಹಸ್ತದಿಂದ ಕಲಶವನ್ನು ಮುಚ್ಚಿ

"ಆಪೋಹಿಷ್ಠಾ ಮಯೋಭುವಸ್ತಾನ ಊರ್ಜೇದಧಾತನ।
ಮಹೇರಣಾಯ ಚಕ್ಷಸೇ। ಯೋವಃ ಶಿವತಮೋರಸಸ್ತಸ್ಯ
ಭಾಜಯತೇ ಹನಃ। ಉಶತೀರಿವ ಮಾತರಃ। ತಸ್ಮಾ ಅರಂಗ
ಮಾಮವೋ ಯಸ್ಯ ಕ್ಷಯಾಯ ಜಿನ್ವಥ। ಆಪೋಜನ ಯಥಾಚನಃ॥

ಈ ಮಂತ್ರವನ್ನು ಉಚ್ಚರಿಸಿ ಭಸ್ಮ ಗಂಧ, ಕುಂಕುಮ, ಅಕ್ಷತೆ, ಪತ್ರಿ, ಪುಷ್ಪಗಳಿಂದ ಆ ಜಲದಿಂದ ಆಕಳ ಕೆಚ್ಚಲವನ್ನು ತೊಳೆದು ಪೂರ್ವಾಭಿಮುಖವಾಗಿ ನಿಲ್ಲಿಸಿದ ಆಕಳನ್ನು ತಾನು ಉತ್ತರಾಭಿಮುಖವಾಗಿ ಕುಳಿತು ಕಲಸ (ತಂಬಿಗೆ) ದಲ್ಲಿಯ ಜಲವನ್ನು ಬೇರೊಂದು ಪಾತ್ರೆಯಲ್ಲಿ ಹಾಕಿ ಅದೇ ಬೆಳ್ಳಿಯ ಕಲಶದಲ್ಲಿ ಹಾಲು ಕರೆಯಿಸಿ (ಹಿಂಡಿ) ಆ ಹಾಲಿನ ಪಾತ್ರೆಯಲ್ಲಿ ಚಂದ್ರನನ್ನು ಆವಾಹನೆ ಮಾಡಿ ಪೂಜಿಸಬೇಕು.

ಬಳಿಕ ಕರ್ತೃವು ಪೂರ್ವಾಭಿಮುಖವಾಗಿ ಕುಳಿತುಕೊಂಡು

ರಂಗವಲ್ಲಿಯಿಂದ ಅಷ್ಟದಳ ಕಮಲವನ್ನು ಬರೆದು ಅಲ್ಲಿ ಅಕ್ಕಿಯ ಗುಂಪೆಯನ್ನು ರಚಿಸಿ ಅದರ ಮೇಲೆ ಹಾಲು ತುಂಬಿದ ಬೆಳ್ಳಿಯ ಕಲಶವನ್ನು ಸ್ಥಾಪಿಸಿ ಪೂಜಿಸಬೇಕು.

"ಆಪ್ಯಾಯಸ್ವಸಮೇತುತೇ ವಿಶ್ವತಸ್ಸೋಮ ವೃಷ್ಣಿಯಂ ಭವಾ ವಾಜಸ್ಯ ಸಂಗಥೇ"

ಎಂದು ಉಚ್ಚರಿಸುತ್ತ ಕಲಶವನ್ನು ಮುಟ್ಟಿ ಚಂದ್ರನನ್ನು ಧ್ಯಾನಿಸಬೇಕು, ಬಳಿಕ "ಓಂ ಭೂವಃ ಚಂದ್ರಮಾವಾಹಯಾಮಿ। ಓಂ ಭುವಃ ಚಂದ್ರಮಾ ವಾಹಯಾಮಿ। ಓಂ ಸುವಃ ಚಂದ್ರಮಾವಾಹಯಾಮಿ । ಓಂ ಭೂರ್ಭುವಃ ಸುವಃ ಚಂದ್ರಮಾವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ।

ಎಂದು ಪ್ರತಿಮೆಯ ಮೇಲೆ ಅಕ್ಷತೆಗಳನ್ನು ಹಾಕಿ ನಂತರ,

"ಓಂ ಭೂರ್ಭುವಃ ಸ್ವರೋಂ ಸಶಕ್ತಿ ಸಾಂಗಸಾಯುಧ ಸವಾಹನ ಸಪರಿವಾರ ಓಂ ಚಂದ್ರಗ್ರಹ ಅತ್ರಾಗಚ್ಛಾಗಚ್ಛ। ಆವಾಹಯಾಮಿ ಆವಾಹಿತೋಭವ। ಸ್ಥಾಪಯಾಮಿ ಸ್ಥಾಪಿತೋಭವ । ಸನ್ನಿಹಿತೋಭವ । ಸಮ್ಮುಖೋಭವ । ಅವಕುಂಠಿತೋಭವ । ವರದೋಭವ।

ಎಂದು ಷಣ್ಮುದ್ರೆಗಳನ್ನು ತೋರಿಸಿ,

"ಓಂ ಚಂದ್ರ ಗ್ರಹಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ" ಎಂದು ನಮಸ್ಕರಿಸಿ "ಆವಾಹಯಾಮಿ ಸಿಂಹಾಸನಂ ಸಮರ್ಪಯಾಮಿ" ಎಂದು ಆಸನವನ್ನು ಮುಟ್ಟಿ "ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ" ಎಂದು ಪಾದಗಳಿಗೆ ಪಾದ್ಯವನ್ನು ಸಿಂಪಡಿಸಿ "ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ" ಎಂದು ಹಸ್ತಗಳಿಗೆ ಅರ್ಘ್ಯವನ್ನು ಮುಟ್ಟಿಸಿ "ಮುಖೇ ಆಚಮನೀಯಂ ಸಮರ್ಪಯಾಮಿ" ಎಂದು ಮುಖಕ್ಕೆ ಆಚಮನವನ್ನು ಪ್ರೋಕ್ಷಿಸಬೇಕು. ನಂತರ "ಓಂ ಚಂದ್ರಗ್ರಹಾಯ ನಮಃ" ಈ ಮಂತ್ರದಿಂದ ಬಿಳಿವಸ್ತ್ರ, ಭಸ್ಮ ಬಿಳಿಗಂಧ, ಬಿಳಿ ಅಕ್ಷತೆ, ಮಲ್ಲಿಗೆ ಹೂ, ಧೂಪ, ದೀಪಾದಿಗಳಿಂದ ಪೂಜಿಸಿ ಅಕ್ಕಿಅನ್ನ, ಹಾಲು ನೈವೇದ್ಯ ಮಾಡಿ ಪೂಜಾ ಸಮಾಪ್ತಿ ಮಾಡಬೇಕು. ನಂತರ ಗುರುಪಾದ ತೀರ್ಥವನ್ನು ತೆಗೆದುಕೊಂಡು ಬಿಳಿಯ ವಸ್ತ್ರ, ಅಕ್ಕಿ, ಹಾಲು, ಬಿಳಿಯ ಬಣ್ಣದ ಆಕಳು ಹಾಗೂ ಅನ್ನದಾನ ಮಾಡುವದರಿಂದ ಚಂದ್ರನಿಂದ ಉಂಟಾಗಿರುವ ದೋಷಗಳೆಲ್ಲವೂ ನಿವಾರಣೆಯಾಗುವವು. ರಕ್ತವನ್ನು ಕರೆಯುತ್ತಿರುವ (ಹಿಂಡುತ್ತಿರುವ) ಆಕಳು ಸಹಿತ ಚಂದ್ರನ ಪೂಜಾದಾನಗಳಿಂದ ಶುದ್ಧವಾದ ಹಾಲು ಹಿಂಡುವದು.

## ಅಂಗಾರಕ ರಕ್ಷಾ ವಿಧಾನ

ಒಂದು ಮಣ್ಣಿನ ಹೊಸ ಮಡಿಕೆಯಲ್ಲಿ ಅನ್ನವನ್ನು ಮಾಡಿ ಆ ಮಡಿಕೆಯನ್ನು ಕೆಂಪು ವಸ್ತ್ರದಿಂದ ಸುತ್ತಿ ಆ ಮಡಿಕೆಯ ಮೇಲೆ ದೀಪವನ್ನು ಇಟ್ಟು ದೀಪ ಸಹಿತ ಮಡಿಕೆಯನ್ನು ರೋಗಿಗೆ ನಿವಾಳಿಸಿ ತೆಗೆದು ನಾಯಿಂದ (ಕ್ಷೌರಿಕ) ನಿಗೆ ದೀಪಸಹಿತ ಕುಡಿಕೆಯನ್ನು ದಾನ ಕೊಡುವದರಿಂದ ಕುಜದೋಷ ಪರಿಹಾರವಾಗುವದು.

## ಬುಧಗ್ರಹ ರಕ್ಷಾ ವಿಧಾನ

ರೋಗ ಪೀಡಿತನನ್ನು ಒಂದು ತಕ್ಕಡಿಯಲ್ಲಿ ಕೂಡ್ರಿಸಿ ಇನ್ನೊಂದು ಪರಡಿಯಲ್ಲಿ ಹೆಸರು ಧಾನ್ಯಗಳನ್ನು ಇಟ್ಟು ತೂಗಿ ಆ ಧಾನ್ಯಗಳನ್ನು ಸದಾಚಾರಿಯೂ, ವಿದ್ವಾಂಸನೂ ಆದ ಬ್ರಾಹ್ಮಣನಿಗೆ ಅಥವಾ ಜಂಗಮ ಮೂರ್ತಿಗೆ ತನ್ನ ಶಕ್ತ್ಯಾನುಸಾರ ದಕ್ಷಿಣೆಯೊಂದಿಗೆ ದಾನ ಕೊಡಬೇಕು ಮತ್ತು ಬುಧದೋಷದಿಂದ ಉಂಟಾದ ಶಿರೋರೋಗಗಳೆಲ್ಲವೂ ಉತ್ತರಾಣಿ (ಅಪಾಮಾರ್ಗ) ಬೀಜಗಳಿಂದ ಅನ್ನ, ಕಷಾಯ, ಲೇಹ, ಭಕ್ಷ್ಯ ಹೀಗೆ ನಾಲ್ಕು ಪ್ರಕಾರದ ಕಲ್ಪಗಳನ್ನು ತಯಾರಿಸಿ ಸೇವಿಸುವದರಿಂದ ನಿವಾರಣೆಯಾಗುವವು.

## ಗುರುಗ್ರಹ ರಕ್ಷಾ ವಿಧಾನ

ಬಂಗಾರವನ್ನು, ಸಾಲಿಗ್ರಾಮವನ್ನು, ತುಳಸಿಯನ್ನು, ಕಮಲವನ್ನು, ವೇದಾಧ್ಯಯನವನ್ನು ಮಾಡಿದ ಮತ್ತು ಬ್ರಹ್ಮಚಾರಿಯಾಗಿರುವ ಬ್ರಾಹ್ಮಣನಿಗೆ ಅಥವಾ ಜಂಗಮ ಮೂರ್ತಿಗೆ ದಾನ ಮಾಡಬೇಕು ಮತ್ತು ಗುರುವಾರ ಏಕಾದಶಿ ತಿಥಿ ಕೂಡಿದ ದಿವಸ ಅರಳೀ ಮರದ ಬದನಿಕೆಯನ್ನು ಪೂಜಿಸಿ ತಂದು ಮನೆಗೆ ರಕ್ಷೆಯಂ ಕಟ್ಟಿದರೆ ಗುರುಗ್ರಹದಿಂದ ಉಂಟಾದ ಪೀಡೆಗಳೆಲ್ಲವೂ ಪರಿಹಾರವಾಗುವವು.

## ಶುಕ್ರಗ್ರಹ ರಕ್ಷಾ ವಿಧಾನ

ಬ್ರಾಹ್ಮಣರ ಅಥವಾ ಮಹೇಶ್ವರರ ಮನೆಯಲ್ಲಿ ಕನ್ಯೆಯು ಪ್ರಥಮ ರಜಸ್ವಲೆಯಾದಾಗ ಆಕೆಯ ವಸ್ತ್ರ, ಅಲಂಕಾರಗಳಿಗೆ, ಭೋಜನಕ್ಕೆ, ಉತ್ಸವಕ್ಕೆ ಧನ ಸಹಾಯ ಮಾಡುವದು, ತಮ್ಮ ಕುಲ (ಇಷ್ಟ) ದೇವತೆಯ ಮುಂಭಾಗದಲ್ಲಿ ವೇಶ್ಯಾ ಸ್ತ್ರೀಯರಿಂದ ನೃತ್ಯ ಮಾಡಿಸುವದು, ಗೋವುಗಳಿಗೆ ಹಸಿ ಹುಲ್ಲು ಕೊಡುವದು, ಚಿಕ್ಕಮಕ್ಕಳಿಗೆ ಹಾಲು ಕೊಡುವದು, ಗೀತ ವಾದ್ಯಂಗಳೊಡನೆ ಹರಿ–ಹರ ನಾಮ ಸಂಕೀರ್ತನೆ, ಭಜನೆ ಮಾಡಿಸುವದು, ಬ್ರಾಹ್ಮಣ ಅಥವಾ ಮಾಹೇಶ್ವರ ದಂಪತಿಗಳಿಗೆ ಭೋಜನ ಮಾಡಿಸುವದು, ಮೊದಲಾದವುಗಳಿಂದ ಶುಕ್ರ ಗ್ರಹದ ಪ್ರೀತಿಯಾಗಿ ಸರ್ವದುಃಖಗಳು ನಾಶವಾಗುವವು.

## ಶನಿಗ್ರಹ ರಕ್ಷಾ ವಿಧಾನ

ಸ್ಮಶಾನದಲ್ಲಿರುವ ಬನ್ನಿಗಿಡದ ಬುಡದಲ್ಲಿ ಬಲಿ ಅನ್ನವನ್ನು ಇಟ್ಟು ಆ ಬಲಿ ಅನ್ನವನ್ನು ಅಂತ್ಯಜರಿಗೆ ಕೊಡುವದು, ಎಳ್ಳು ತುಂಬಿದ ಪಾತ್ರೆಯನ್ನು ದಕ್ಷಿಣೆ ಸಹಿತ ದಾನ ಮಾಡುವದು, ಅಶ್ವತ್ಥ( ಅರಳಿ) ವೃಕ್ಷವನ್ನು ಪ್ರದಕ್ಷಿಣೆ ಹಾಕುವದು. ಮಹಾಭಾರತ ಕಥಾ ಶ್ರವಣ ಮಾಡುವದು, ಗೋಸೇವೆ ಮಾಡುವದು, ಇತ್ಯಾದಿಗಳಿಂದ ಶನಿಗ್ರಹದ ಪೀಡೆಯು ನಿವಾರಣೆಯಾಗುವದು.

## ರಾಹು ಗ್ರಹ ರಕ್ಷಾ ವಿಧಾನ

ಗರಗು ಮಸಾಲೆ ಸಹಿತ ಅನ್ನವನ್ನು ಮಾಡಿ ಆ ಅನ್ನವನ್ನು ದಕ್ಷಿಣೆ ಸಹಿತ ವಿಧವಾ ಸ್ತ್ರೀಯಳಿಗೆ, ಮುಸಲ್ಮಾನನಿಗೆ ಅಥವಾ ಪಂಚಾಳನಿಗೆ ದಾನ ಕೊಟ್ಟರೆ ರಾಹುಪೀಡಾ ಪರಿಹಾರವಾಗುವದೆಂದು ಮಯತಂತ್ರದಲ್ಲಿ ಹೇಳಲ್ಪಟ್ಟಿದೆ.

## ಕೇತು ಗ್ರಹ ರಕ್ಷಾ ವಿಧಾನ

ಈಶ್ವರನ ಗುಡಿಯಲ್ಲಿ108 ಅಥವಾ ಸಹಸ್ರ ದೀಪಾರಾಧನೆ ಮಾಡಿಸಿ ಈಶ್ವರನಿಗೆ ರುದ್ರಾಭಿಷೇಕ ಮಾಡಿಸಿ ಬ್ರಾಹ್ಮಣರಿಂದ ದರ್ಭಸ್ತಂಭ ವ್ರತವನ್ನು ಮಾಡಿಸಿದರೆ ಕೇತುಗ್ರಹಪೀಡಾ ನಿವೃತ್ತಿಯಾಗುವದು.

## ಕುಜ ಗ್ರಹಣ

ಮಂತ್ರ- ಏರಿಂಚಿನಾ ಸಹೋತ್ಪನ್ನ ಪರಮೇಷ್ಠೀ ನಿಸರ್ಗಜ।
ನುದಸರ್ವಾಣಿ ಪಾಪಾನಿ ದರ್ಭಸ್ಪಷ್ಟಿ ಕರೋಭವ॥

ಈ ಮಂತ್ರವನ್ನು ಉಚ್ಚರಿಸುತ್ತ ಪೂರ್ವ ಅಥವಾ ಉತ್ತರಾಭಿಮುಖವಾಗಿ "ಹುಂ ಫಟ್" ಕಾರೇಣ ಮಂತ್ರದಿಂದ ಬ್ರಾಹ್ಮಣರು ಅಥವಾ ಮಾಹೇಶ್ವರರಿಗೆ 4 ದರ್ಭೆ, ಕ್ಷತ್ರಿಯರು 2 ದರ್ಭೆ ಉಳಿದವರೆಲ್ಲರೂ 1 ದರ್ಭೆಯನ್ನು ಹಿಡಿಯುವದು.



## ತೃಚಾಕಲ್ಪ ನಮಸ್ಕಾರ

ಕರ್ತೃವು ಆಚಮನ ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಾದಿಗಳನ್ನು ಉಚ್ಚರಿಸಿ "ಶ್ರುತಿ ಸ್ಮೃತಿ ಪುರಾಣೋಕ್ತ ಫಲ ಪ್ರಾಪ್ತ್ಯರ್ಥಂ ಶ್ರೀ ಸವಿತೃನಾರಾಯಣ ಪ್ರೀತ್ಯರ್ಥಂಚ ತೃಚಾಕಲ್ಪವಿಧಿನಾ ನಮಸ್ಕಾರಾಖ್ಯಂ ಕರ್ಮಕರಿಷ್ಯೇ" ಎಂದು ಸಂಕಲ್ಪವನ್ನು ಮಾಡಿ ಹರವಾದ ಒಂದು ತಾಮ್ರದ ಪಾತ್ರೆಯಲ್ಲಿ ಜಲವನ್ನು ತುಂಬಿ ಆ ಪಾತ್ರೆಯ ಮಧ್ಯದಲ್ಲಿ ಗಂಧ, ಅಕ್ಷತೆ, ಪುಷ್ಪಗಳನ್ನು ಇಟ್ಟು,

ಧ್ಯಾನಂ- ಧ್ಯೇಯಃ ಸದಾ ಸವಿತ್ರ ಮಂಡಲಮಧ್ಯವರ್ತಿ ನಾರಾಯಣಃ
ಸರಸಿಜಾಸನ ಸಂ ನಿವಿಷ್ಟಃ। ಕೇಯೂರವಾನ್ಮಕರ ಕುಂಡಲವಾನ್
ಕಿರೀಟೀಹಾರೀ ಹಿರಣ್ಮಯ ವಪು ರ್ಧೃತ ಶಂಖ ಚಕ್ರಃ।

ಈ ಪ್ರಕಾರವಾಗಿ ಧ್ಯಾನಮಾಡಿ,

"ಓಂ ಹ್ರಾಂ ಉದ್ಯನ್ನದ್ಯ ಮಿತ್ರವಾಹಃ ಹ್ರಾಂ ಓಂ ಮಿತ್ರಾಯ ನಮಃ। ಓಂ ಹ್ರೀಂ ಆರೋಹನ್ನುತ್ತರಾಂ ದಿವಮ್ ಹ್ರೀಂ ಓಂ ರವಯೇ ನಮಃ। ಓಂ ಹ್ರೂಂ ಹೃದ್ರೋಗಂ ಮಮ ಸೂರ್ಯ ಹ್ರೂಂ ಓಂ ಸೂರ್ಯಾಯ ನಮಃ। ಓಂ ಹ್ರೈಂ ಹರಿಮಾಣಮಚ ನಾಶಯ ಹ್ರೈಂ ಓಂ ಭಾನವೇ ನಮಃ। ಓಂ ಹ್ರೌಂ ಶುಕೇಷುಮೇ ಹರಿಮಾಣಮ್ ಹ್ರೌಂ ಓಂ ಖಗಾಯ ನಮಃ। ಓಂ ಹ್ರಃ ರೋಷಣಾಕಾ ಸುದಧ್ಮಸಿ ಹ್ರಃ ಪೂಷ್ಣೇ ನಮಃ। ಓಂ ಹ್ರಾಂ ಅಧೋಹಾರಿದ್ರವೇಷು ಮೇ ಹ್ರಾಂ ಓಂ ಹಿರಣ್ಯಗರ್ಭಾಯ ನಮಃ। ಓಂ ಹ್ರೀಂ ಹರಿಮಾಣಂ ನಿದಧ್ಮಸಿ ಹ್ರೀಂ ಓಂ ಮರಿಚಯೇ ನಮಃ। ಓಂ ಹ್ರೂಂ

ಉದಗಾದಯ ಮಾದಿತ್ಯಃ ಹ್ರೂಂ ಓಂ ಆದಿತ್ಯಾಯ ನಮಃ ಓಂ ಹ್ರೈಂ ವಿಶ್ವೇನ ಸಹಸಾ ಸಹ ಹ್ರೈಂ ಓಂ ಸವಿತ್ರೇ ನಮಃ। ಓಂ ಹ್ರೌಂ ದ್ವಿಷಂತಂ ಮಹ್ಯಂ ರಧಯನ್ ಹ್ರೌಂ ಓಂ ಅರ್ಕಾಯ ನಮಃ। ಓಂ ಹ್ರಃ ಮೋ ಅಹಂ ದ್ವಿಷತೇ ರಧಮ್ ಹ್ರಃ ಓಂ ಭಾಸ್ಕರಾಯ ನಮಃ। ಓಂ ಹ್ರಾಂ ಹ್ರೀಂ ಉದ್ಯನ್ನದ್ಯಮಿತ್ರಮಹ ಆರೋಹನ್ನುತ್ತರಾಂ ದಿವಂ। ಹ್ರಾಂ ಹ್ರೀಂ ಓಂ ಮಿತ್ರರವಿಭ್ಯಾಂ ನಮಃ। ಓಂ ಹ್ರೂಂ ಹ್ರೈಂ ಹೃದ್ರೋಗಂ ಮಮ ಸೂರ್ಯ ಹರಿಮಾಣಂಚ ನಾಶಯ ಹ್ರೂಂ ಹ್ರೈಂ ಓಂ ಸೂರ್ಯಭಾನುಭ್ಯಾಂ ನಮಃ। ಓಂ ಹ್ರೌಂ ಹ್ರಃ ಶುಕೇಷುಮೇಹರಿಮಾಣಂ ರೋಪಣಾಕಾಸು ದಧ್ಮಸಿ ಹ್ರೌಂಃ ಹ್ರಂ ಓಂ ಖಗ ಪೂಷಭ್ಯಾಂ ನಮಃ। ಓಂ ಹ್ರಾಂ ಹ್ರೀಂ ಅಥೋ ಹಾರಿದ್ರವೇಷು ಮೇಹರಿ ಮಾಣಂ ನಿದಧ್ಮಸಿ ಹ್ರಾಂ ಹ್ರೀಂ ಓಂ ಹಿರಣ್ಯಗರ್ಭಮರೀಚಿಭ್ಯಾಂ ನಮಃ। ಓಂ ಹ್ರೂಂ ಹ್ರೈಂ ಉದಗಾದಯ ಮಾದಿತ್ಯೋ ವಿಶ್ವೇನಸಹಸಾಸಹ ಹ್ರೂಂ ಹ್ರೈಂ ಓಂ ಆದಿತ್ಯ ಸವಿತೃಭ್ಯಾಂ ನಮಃ। ಓಮ ಹ್ರೌಂ ಹ್ರಃ ದ್ವಿಷಂತ ಮಹ್ಯಂ ರಂಧಯನ್ಮೋ ಅಹಂ ದ್ವಿಷತೇರಧಂ ಹ್ರೌಂ ಹುಂ ಓಂ ಭಾಸ್ಕರಾಭ್ಯಾಂ ನಮಃ। ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಉದ್ಯನ್ನದ್ಯಂ ದಿವಂ। ಹೃದ್ರೋಗಂ ನಾಶಯ ಹ್ರಾಂ ಹ್ರೀಂ ಹ್ರೂಂ ಹ್ರೈಂ ಓಂ ಮಿತ್ರ ರವಿ ಸೂರ್ಯ ಭಾನುಭ್ಯೋ ಓಂ ಹ್ರೌಂ ಹ್ರಃ ಹ್ರಾಂ ಹ್ರೀಂ ಶುಕೇಂ ಸುದಧ್ಮಸಿ। ಅಥೋ ಹಾಂ ನಿದಧ್ಮಸಿ ಹ್ರೌಂ ಹ್ರಃ ಹ್ರಾಂ ಹ್ರೀಂ ಓಂ ಖಗಪೂಷಹಿರಣ್ಯಗರ್ಭ ಮರೀಚಿಭ್ಯೋಂ। ಓಂ ಹ್ರೂಂ ಹ್ರೈಂ ಹ್ರೌಂ ಹ್ರಃ ಉದಗಾದಯ ಸಹ। ದ್ವಿಷಂತಂರಧಂ ಹ್ರೂಂ ಹ್ರೈಂ ಹ್ರೌಂ ಹ್ರಃ ಓಂ ಆದಿತ್ಯ ಸವಿತ್ರರ್ಕ ಭಾಸ್ಕರೇ ಭ್ಯೋ ನಮಃ। ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ ಹ್ರಃ ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ ಹ್ರಃ ಉದ್ಯನ್ನದ್ಯಂ। ದ್ವಿಷಂತಂ ಮಹ್ಯಂರಂಧಯನ್ಮೋ ಅಹಂ ದ್ವಿಷತೇ ರಧಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ ಹ್ರಃ ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ ಹ್ರಃ। ಓಂ ಮಿತ್ರ ರವಿ ಸೂರ್ಯಭಾನು ಖಗ ಪೂಷ ಹಿರಣ್ಯಗರ್ಭ ಮರೀಚ್ಯಾದಿತ್ಯ ಸವಿತ್ರರ್ಕ ಭಾಸ್ಕರೇಭ್ಯೋ ನಮಃ। ಇತಿತ್ರಿಃ ವಿನತಾ ತನಯೋ ದೇವ ಇತ್ಯರುಣಂ ಪ್ರಣಮೇತ್। ಆದಿತ್ಯಸ್ಯ ನಮಸ್ಕಾರ ಮಿತ್ಯಾದಿ ಪೂರ್ವವತ್। ಅನೇನ ತೃಚಾಕಲ್ಪ ನಮಸ್ಕಾರಾಖ್ಯೇನ ಕರ್ಮಣಾ ಭಗವಾನ್ ಶ್ರೀಸವಿತೃ ಸೂರ್ಯನಾರಾಯಣಃ ಪ್ರೀಯತಾಂ। ಇತಿತೃಚಾ ಕಲ್ಪ ನಮಸ್ಕಾರಾಃ॥



## ಸೌರ ಸೂಕ್ತ ಪ್ರಾರಂಭ

ಓಂ ಉದುತ್ಯಮಿತಿ ತ್ರಯೋದಶರ್ಚ್ಯ ಸೂಕ್ತಸ್ಯ ಕಾಣ್ವಃ ಪ್ರಸ್ಕಣ್ವಃ ಸೂರ್ಯೋ ನವಾದ್ಯಾ ಗಾಯತ್ರ್ಯೋಂ ಅತ್ಯಾಶ್ಚತಸ್ರೋ ನುಷ್ಟುಭೋಂತ್ಯಸ್ತ್ರ ಚೋರೋಗಘ್ನ ಉಪನಿಷದಂ ತ್ರ್ಯೋರ್ಧರ್ಚೋ ದ್ವಿಷಘ್ನಃ॥ ಚಿತ್ರಂ ದೇವಾನಾಂ ಇತಿ ಷಳರ್ಚಸ್ಯ

ಸೂಕ್ತಸ್ಯ ಆಂಗೀರಸಃ ಕುತ್ಸಃ ಸೂರ್ಯ ಸ್ತ್ರಿಷ್ಟುಪ್। ಇಂದ್ರಮಿತ್ರಂ ಇತಿ ದ್ವಯೋರೌಚ ಥ್ಯೋ ದೀರ್ಘತಮಾಃ ಸೂರ್ಯ ಸ್ತ್ರಿಷ್ಟುಪ್ । ಹಂಸಃ ಶುಚಿಷ ದಿತ್ಯಸ್ಯ ಗೌತಮೋ ವಾಮದೇವಃ ಸೂರ್ಯೋಜಗತೀ। ಯತ್ವೇತಿ ಭೌಮಾತ್ರಿಃ ಸೂರ್ಯೋಽನುಷ್ಟುಪ್। ಯದದ್ಯೇ ತ್ಯೇಕಾ ಉತ್ಸೂರ್ಯ ಇತಿ ತಿಸ್ರಃ ಉದ್ವೇತೀತಿ ಚತಸ್ರೋಽರ್ಧ ಪಂಚಮಾಃ ಏತಾಸಾಂ ಮೈತ್ರಾ ವರುಣಿರ್ವಶಿಷ್ಠಃ ಸೂರ್ಯಸ್ತ್ರಿಷ್ಟುಪ್। ಉದುತ್ಯದ್ದರ್ಶತಮ್ ಇತಿ ತೃಚಸ್ಯ ಮೈತ್ರಾ ವರುಣಿರ್ವಶಿಷ್ಠಃ ಸೂರ್ಯಃ ಆದ್ಯಾ ಬೃಹತೀ ದ್ವಿತೀಯಾ ಸತೋ ಬೃಹತೀ ತೃತಿಯಾ ಪುರಉಷ್ಣಿಕ್ ಬಣ್ಮಹಾನಿತಿದ್ವಯೋಃ ಭಾರ್ಗವೋ ಜಮದಗ್ನಿಃ ಸೂರ್ಯಃ ಆದ್ಯಾ ಬೃಹತೀ ಉತ್ತರಾ ಸತೋ ಬೃಹತೀ। ನಮೋ ಮಿತ್ರಸ್ಯೇತಿ ದ್ವಾದಶರ್ಚಸ್ಯ ಸೂಕ್ತಸ್ಯ ಸೌರ್ಯೋಽಭಿತಪಾಃ ಸೂರ್ಯೋ ಜಗತೀ ದಶಮೀ ತ್ರಿಷುಪ್। ಸೂರ್ಯೋನ ಇತಿ ಪಂಚರ್ಚಸ್ಯ ಸೂಕ್ತಸ್ಯ ಸೌರ್ಯಶ್ಚಕ್ಷುಃ ಸೂರ್ಯೋ ಗಾಯತ್ರೀ। ವಿಭ್ರಾಡ್ ಬೃಹದಿತಿ ಚತಸೃಣಾಂ ಸೌರ್ಯೋ ವಿಭ್ರಾಟ್ ಸೂರ್ಯೋಜಗತೀ ಅಂತ್ಯಾ ಪ್ರಸ್ತಾರ ಪಂಕ್ತಿಃ। ಅಯಂ ಗೌರಿತಿ ತೃಚಸ್ಯ ಸಾರ್ಪರಾಜ್ಞೀ ಸೂರ್ಯೋ ಗಾಯತ್ರೀ । ಶ್ರೀ ಸವಿತೃ ಸೂರ್ಯನಾರಾಯಣ ಪ್ರೀತ್ಯರ್ಥೇ ಸೌರ ಮಂತ್ರ ಜಪೇವಿನಿಯೋಗಃ॥

ಓಂ ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ। ದೃಶೇ ವಿಶ್ವಾಯ ಸೂರ್ಯ । ಅಪತ್ಯೇ ತಾಯವೋ ಯಥಾ ನಕ್ಷತ್ರಾಯಂ ತ್ಯಕ್ತುಭಿಃ । ಸೂರಾಯ ವಿಶ್ವಚಕ್ಷಸೇ ಅದೃಶ್ರಮಸ್ಯ ಕೇತವೋ ವಿರಶ್ಮಯೋ ಜನಾಂ ಅನು। ಭ್ರಾಜಂತೋಽ ಅಗ್ನಯೋ ಯಥಾ । ತರಣಿಃ ವಿಶ್ವದರ್ಶತೋಜ್ಯೋತಿಷ್ಮದಸಿ ಸೂರ್ಯ । ವಿಶ್ವ ಮಾಭಾಸಿರೋಚನಂ। ಪ್ರತ್ಯಂಗ್ ದೇವಾನಾಂ ವಿಶಃ ಪ್ರತ್ಯಂಗ್ಗುದೇಷಿಮಾನುಷಾನ್। ಪ್ರತ್ಯಂಗ್ ವಿಶ್ವಂ ಸ್ವರ್ದೃಶೇ॥ 1॥

ಯೇನಾ ಪಾವಕಚಕ್ಷಸಾ ಭುರಣ್ಯಂತಂ ಜನಾಂ ಅನು। ತ್ವಂ ವರುಣ ಪಶ್ಯಸಿ। ವಿದ್ಯಾಮೇಷಿ ರಜಸ್ಪೃಥ್ವಹಾಮಿ ಮಾನೋಽ ಅಕ್ತುಭಿಃ। ಪಶ್ಯನ್ ಜನ್ಮಾನಿ ಸೂರ್ಯ। ಸಪ್ತತ್ವಾ ಹರಿತೋ ರಥೇ ವಹಂತಿ ದೇವ ಸೂರ್ಯ । ಶೋಚಿಷ್ಕೇಶಂ ವಿಚಕ್ಷಣಂ। ಅಯುಕ್ತ ಸಪ್ತಶುಂ ಧ್ಯುವಃ ಸೂರೋರಥಸ್ಯನಪ್ತ್ಯಃ । ತಾಭಿರ್ಯಾತಿ ಸ್ವಯುಕ್ತಿಭಿಃ। ತದ್ವಯಂ ತಮಸಸ್ಪರಿಜ್ಯೋತಿ ಷ್ಪಶ್ಯಂತ ಉತ್ತರಂ। ದೇವಂ ದೇವತ್ರಾ ಸೂರ್ಯ ಮಗನ್ಮ ಜ್ಯೋತಿರುತ್ತಮಂ। ಉದ್ಯನ್ನದ್ಯ ಮಿತ್ರಮಹಃ ಅರೋಹನ್ನುತ್ತರಾಂದಿವಂ। ಹೃದ್ರೋಗಂ ಮಮಸೂರ್ಯ ಹರಿಮಾಣಂ ಚ ನಾಶಯ। ಶುಕೇಷು ಮೇಹರಿಮಾಣಂ ರೋಪಣಾ ಕಾಸುದಧ್ಮಸಿ। ಅಥೋಹಾರಿ ದ್ರವೇಷುಮೇ ಹರಿಮಾಣಂ ನಿದಧ್ಮಸಿ। ಉದಗಾದಯ ಮಾದಿತ್ಯೋ ವಿಶ್ವೇನ ಸಹಸಾಸಹ । ದ್ವಿಷಂತಂ ಮಹ್ಯಂ ರಂಧಯನ್ಮೋಽ ಅಹಂ ದ್ವಿಷತೇರಧಂ॥ 2॥

ಚಿತ್ರಂ ದೇವಾನಾ ಮುದಗಾದಿನೀ ಕಂಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ। ಆಪ್ರಾದ್ಯಾವಾ ಪೃಥವೀs ಅಂತರಿಕ್ಷಂ ಸೂರ್ಯs ಆತ್ಮಾ ಜಗತಸ್ತಸ್ಥುಷಶ್ಚ। ಸೂರ್ಯೋದೇವಿ ಮುಷನಂ ರೋಚಮಾನಾಂ ಮರ್ಯೋನಯೋ ಷಾಮಭ್ಯೇತಿಪಶ್ಚಾತ್। ಯತ್ರಾನರೋ ದೇವಯಂತೋ ಯುಗಾನಿ ವಿತನ್ವತೇಪ್ರಾತಿ ಭದ್ರಾಯ ಭದ್ರಂ। ಭದ್ರಾs ಅಶ್ವಾ ಹರಿತಃ ಸೂರ್ಯಸ್ಯ ಚಿತ್ರಾs ಏತಗ್ವಾs ಅನುಮಾ ದ್ಯಾಸಃ। ನಮಸ್ಯಂತೋ ದಿವs ಆ ಪೃಷ್ಠಮಸ್ಥುಃ ಪರಿದ್ಯಾವಾ ಪೃತಿವೀಯಂ ತಿಸದ್ಯಃ। ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ ಮಧ್ಯಾ ಕರ್ತೋರ್ವಿತತಂ ಸಂಜಭಾರ। ಯದೇದಯುಕ್ತ ಹರಿತಃ ಸದಸ್ಥಾದಾದ್ರಾತ್ರೀ ವಾಸಸ್ತನುತೇಸಿ ಮಸ್ಮೈ। ತನ್ಮಿತ್ರಸ್ಯ ವರುಣಸ್ಯಾಭಿ ಚಕ್ಷೇ ಸೂರ್ಯೋ ರೂಪಂ ಕೃಣುತೇದ್ಯೋರುಪಸ್ಥೇ। ಅನಂತಮನ್ಯದ್ಧೃಶದಸ್ಯ ಪಾಜಃ ಕೃಷ್ಣಮನ್ಯದ್ದರಿತಃ ಸಂಭರಂತಿ। ಅದ್ಯಾ ದೇವಾs ಉದಿತಾ ಸೂರ್ಯಸ್ಯ ನಿರಂಹಸಃ ಪಿಪೃತಾನಿ ರವದ್ಯಾತ್। ತನ್ಮೇ ಮಿತ್ರೋ ವರುಣೋ ಮಾಮಹಂ ತಾಮದಿತಿಃ ಸಿಂಧುಃ ಪೃಥಿವೀs ಉತದ್ಯೌಃ॥ 3 ॥

ಇಂದ್ರಂ ಮಿತ್ರಂ ವರುಣ ಮಗ್ನಿ ಮಾಹುರಥೋ ದಿವ್ಯಃ ಸಸು ಪರ್ಣೋ ಗುರುತ್ಮಾನ್। ಏಕಂ ಸದ್ವಿಪ್ರಾಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾ ನಮಾಹುಃ। ಕೃಷ್ಣಂ ನಿಯಾನಂ ಹರಯಃ ಸುವರ್ಣಾs ಅಪೋವಸಾನಾ ದಿವ ಮುತ್ಪತಂತಿ। ತs ಆವವೃತ್ತನ್ತ್ಸದನಾ ದೃತಸ್ಯಾದಿದ್ಧೃತೇನ ಪೃಥಿವೀ ವ್ಯದ್ಯತೇ। ಹಂಸಃ ಶುಚಿದ್ವಸುರಂತ ರಿಕ್ಷಸದ್ಧೋತಾ ವೇದಿಷದ ತಿಥಿ ರ್ದುರೋಣಸತ್ ನೃಷದ್ವರಸ ದೃತ ಸದ್ವ್ಯೋ ಮಸದಬ್ಜಾಗೋಜಾs ಋತಜಾ ಅದ್ರಿಜಾ ಋತಂ। ಯತ್ವಾ ಸೂರ್ಯ ಸ್ವರ್ಭಾನು ಸ್ತಮಸಾ ವಿಧ್ಯದಾಸುರಃ। ಅಕ್ಷೇತ್ರವಿದ್ಯಥಾ ಮುಗ್ಧೋ ಭುವನಾನ್ಯದಿಧಯುಃ॥ 4 ॥

ಯದದ್ಯ ಸೂರ್ಯ ಬ್ರವೋನಾಗಾs ಉದ್ಯನ್ಮಿತ್ರಾಯ ವರುಣಾಯ ಸತ್ಯಂ। ವಯಂ ದೇವತ್ರಾ ದಿತೇಸ್ಯಾಮತ ವಪ್ರಿಯಾಸೋs ಅರ್ಯಮನ್ಗೃಣತಃ। ಉತ್ಸೂರ್ಯೋ ಬೃಹದರ್ಚೀಷ್ಯ ಶ್ರೇತ್ಪುರು ವಿಶ್ವಾಜನಿ ಮಮಾನುಷಾಣಾಂ। ಸಮೋದಿವಾದ ದೃಶೇರೋಚ ಮಾನಃ ಋತ್ವಾ ಕೃತಃ ಸುಕೃತಃ ಕರ್ತೃ ಭಿರ್ಭೂತ್। ಸಸೂರ್ಯ ಪ್ರತಿ ಪುರೋನs ಉದ್ಗಾs ಏಭಿಃ ಸ್ತೋಮೇಭಿರೇತ ಶೇಭಿರೇವೈಃ। ಪ್ರನೋಮಿತ್ರಾಯ ವರುಣಾಯ ವೋಚೋನಾ ಗಸೋs ಅರ್ಯಮ್ಣೇs ಅಗ್ನಯೇಚ ವಿನಃ ಸಹಸ್ರಂ ಶುರುಘೋರದಂ ತ್ಸ್ವತಾ ವಾನೋ ವರುಣೋ ಮಿತ್ರೋs ಅಗ್ನಿಃ। ಯಚ್ಛಂತು ಚಂದ್ರಾs ಉಪಮಂ ನೋ ಅರ್ಕಮಾನಃ ಕಾಮಂ ಪೂಪುರಂತುಸ್ತಾನಾಃ॥ 5 ॥

ಉದ್ವೇತಿ ಸುಭಗೋ ವಿಶ್ವಚಕ್ಷಾಃ ಸಾಧಾರಣಃ ಸೂರ್ಯೋಮಾನುಷಾಣಾಂ ಚಕ್ಷುರ್ಮಿತ್ರಸ್ಯ ವರುಣಸ್ಯ ದೇವಶ್ಚ ರ್ಮೇವಯಃ ಸಮವಿವ್ಯಕ್ತ ಮಾಂಸಿ। ಉದ್ವೇತಿ

ಪ್ರಸವೀತಾ ಜನಾನಾಂ ಮಹಾನ್ ಕೇತು ರರ್ಣವಃ ಸೂರ್ಯಸ್ಯ। ಸಮಾನಂ ಚಕ್ರಂ ಪರ್ಯಾ ವಿವೃತ್ಸನ್ಯ ದೇತಶೋ ವಹತಿ ಧೂರ್ಷುಯುಕ್ತಃ। ವಿಭ್ರಾಜಮಾನಽ ಉಷಸಾ ಮುಪಸ್ಥಾ ದ್ರೇಭ್ಯೈರುದೇತನು ಮದ್ಯಮಾನಃ। ಏಷಮೇದೇವಃ ಸವಿತಾಚಚ್ಛಂದಯಃ ಸಮಾನಂದಪ್ರಮಿನಾತಿ ಧಾಮ। ದಿವೋರುಕ್ಮ ಉರುಚಕ್ಷಾಽ ಉದೇತಿ ದೂರೇಽ ಅರ್ಥಸ್ತರಣಿ ಭ್ರಾಜಮಾನಃ। ನೂನಂ ಜನಾಃ ಸೂರ್ಯೇಣ ಪ್ರಸೂತಾಽ ಅಯನ್ನರ್ಥಾನಿ ಕೃಣವನ್ನ ಪಾಂಸಿ। ಯತ್ರಾಚ ಕ್ರುರ ಮೃತಾಗಾತು ಮಸ್ಮೈಶ್ಯೇ ನೋ ನದೀಯನ್ನ ನ್ವೇತಿ ಪಾಥಃ। ಉದುತ್ಯದ್ದರ್ಶತಂ ವಪು ರ್ದಿವ ಏತಿ ಪ್ರತಿಹ್ವರೇ। ಯದೀ ಮಾಶುರ್ವಹತಿದೇವಽ ಏತಶೋ ವಿಶ್ವಸ್ಮೈಚಕ್ಷಸೇಽ ಅರಂ। ಶೀರ್ಷ್ಣಃ ಶೀರ್ಷ್ಣೋ ಜಗತಸ್ತಸ್ಥುಷಸ್ಪತಿಂ ಸಮಯಾ ವಿಶ್ವಮಾರಜಃ। ಸಪ್ತಸ್ವಸಾರಃ ಸುವಿತಾಯ ಸೂರ್ಯಂ ವಹಂತಿ ಹರಿತೋರಥೇ। ತಚ್ಚಕ್ಷು ರ್ದೇವಹಿತಂ ಶುಕ್ರ ಮುಚ್ಚರತ್। ಪಶ್ಯೇಮಶರದಃ ಶತಂಜೀವೇ ಮಶರದಃ ಶತಮ್। ಬಣ್ಮಹಾಂ ಅಸಿಸೂರ್ಯ ಬಳಾದಿತ್ಯಮಹಾಂ ಅಸಿ। ಮಹ್ನಾದೇವಾನಾಮ ಸೂರ್ಯಃ ಪುರೋಹಿತೋ ವಿಭು ಜ್ಯೋತಿರದಾಭ್ಯಂ ॥ 7 ॥

ನಮೋ ಮಿತ್ರಸ್ಯವರುಣಸ್ಯ ಚಕ್ಷಸೇ ಮಹೋದೇವಾಯತ ಧೃತಂ ಸಪರ್ಯತ। ದೂರೇ ದೃಶೇ ದೇವಜಾತಾಯ ಕೇತವೇದಿ ವ ಸ್ಪತ್ರಾಯ ಸೂರ್ಯಾಯ ಶಂಸತ। ಸಂಮಾಸತ್ಯೋಕ್ತಿಃ ಪರಿಪಾತು ವಿಶ್ವತೋದ್ಯಾವಾಚಯತ್ರತ ತನನ್ನಹಾನಿಚ। ವಿಶ್ವಮಾನ್ಯನ್ನಿ ವಿಶತೇಯದೇ ಜತಿ ವಿಶ್ವಾಹಾಪೋ ವಿಶ್ವಾ ಹೋ ದೇತಿ ಸೂರ್ಯಃ। ನತೇಅದೇವಃ ಪ್ರತಿವೋನಿ ವಾಸತೇಯ ದೇತಶೇಭಿಃ ಪತರ್ರ್ಯೆರಥರ್ಯಸಿ। ಪ್ರಾಚೀನ ಮನ್ಯದನುವರ್ತರೇರಜಽ ಉದನ್ಯೇನ ಜ್ಯೋತಿಷಾ ಯಾಸಿ ಸೂರ್ಯ। ಯೇನ ಸೂರ್ಯ ಜ್ಯೋತಿಷಾ ಬಾಧಸೇತ ಮೋ ಜಗಚ್ಚ ವಿಶ್ವಮುದಿಯರ್ಷಿ ಭಾನುನಾ। ತೇನಾಸ್ಮದ್ವಿಶ್ವಾ ಮನಿ ರಾಮನಾಹುತಿ ಮ ಪಾಮೀವಾಮಪದುಃಸ್ವಪ್ನ್ಯಂ ಸುವ। ವಿಶ್ವಸ್ಯ ಹಿ ಪ್ರೇಷಿ ತೋರಕ್ಷಸಿ ವ್ರತಮಹೇಳಯನ್ನುಚ್ಚರಿಸಿ ಸ್ವಧಾಽ ಅನು। ಯದ ದ್ಯತ್ವಾ ಸೂರ್ಯೋಪ ಬ್ರವಾಮಹೈ ತನ್ನೋ ದೇವಾಽ ಅನುಮಂ ಸೀರತಕ್ರತುಂ। ತನ್ನೋದ್ಯಾವಾ ಪೃಥಿವೀತನ್ನಽ ಆಪ ಇಂದ್ರಃ ಶೃಣ್ವಂತುಮರು ತೋಹಮಂ ವಚಃ। ಮಾಶೂನೇ ಭೂಮ ಸೂರ್ಯಸ್ಯಸಂದೃಶಿ ಭದ್ರಂ ಜೀವಂತೋ ಜರಣಾಮಶೀಮಹೀ ॥ 8 ॥

ವಿಶ್ವಾಹಾತ್ವಾ ಸುಮನಸಃ ಸುಚಕ್ಷಸಃ ಪ್ರಜಾವಂತೋಽ ಅನಮೀವಾಽ ಅನಾಗತಃ ಉದ್ಯಂತಂ ತ್ವಾಮಿತ್ರ ಮಹೋ ದಿವೇ ದಿವೇಜ್ಯೋಗ್‌ಜೀವಾಃ ಪ್ರತಿಪಶ್ಯೇಮ ಸೂರ್ಯ। ಮಹಿಜ್ಯೋತಿರ್ಭಿ ಬ್ರತಂತ್ವಾ ವಿಚಕ್ಷಣ ಭಾಸ್ವಂತಂಚಕ್ಷುಷೇ ಚಕ್ಷಷೇಮಯಃ। ಆರೋಹಂತ ಬೃಹತಃ ಪಾ ಜಸಸ್ಪರಿ ವಯಂ ಜೀವಾಃ ಪ್ರತಿಪಶ್ಯೇಮ ಸೂರ್ಯ। ಯಶ್ಯತೇ ವಿಶ್ವಾಭುವನಾನಿ ಕೇತುನಾ ಪ್ರಚೇರ ತೇನಿಚ ವಿಶಂತೇಽ ಅಕುಭಿಃ। ಅನಾಗಾಸ್ತ್ವೇನ

ಹರಿಕೇಶ ಸೂರ್ಯಾಹ್ನಾ ಹ್ನಾನೋವಶ್ಯ ಸಾವಸ್ಯಸೋ ದಿಹಿ । ಶಂನೋಭವ ಚಕ್ಷಸಾಂಶನೋಽ ಅಹ್ನಾಶಂ ಭಾನುನಾಶಂ ಹಿಮಾಶು ಘೃಣೇನ। ಯಥಾ ಶಮಧ್ವಂ ಚ್ಛ ಮಸ ದ್ದುರೋಣೇತತ್ಸೂರ್ಯ ದ್ರವಿಣಂ ಧೇಹಿ ಚಿತ್ರಂ। ಅಸ್ಮಾಕಂ ದೇವಾಽ ಉಭಯಾಮ ಜನ್ಮನೇ ಶರ್ಮ ಯಚ್ಛತ ದ್ವಿಪ ದೇಚ ತುಷ್ಪದೇ । ಅದತ್ಪಿಬದೂ ರ್ಜಯ ಮಾನ ಮಾಶಿತಂತದ ಸ್ಮೇಶಂ ಯೋರರ ಪ್ರೋದಧಾತನಃ ಯದ್ವೋದೇ ವಾಶ್ಚಕೃಮ ಜಿಪ್ವಯಾ ಗುರುಮನ ಸೋ ವಾಪ್ರ ಯುತೀ ದೇವ ಹೇಳನಂ। ಅರಾವಾ ಯೋನೋಽ ಅಭಿದುಚ್ಛು ನಾಯತೇ ತಸ್ಮಿಂತ ದೇನೋ ವ ಸವೋನಿ ದೇತನ॥ 9 ॥

ಸೂರ್ಯೋನೋ ದಿವಸ್ಪಾತು ವಾತೋಽ ಅಂತರಿ ಕ್ಷಾತ್ । ಅಗ್ನಿರ್ನಃ ಪಾರ್ಥಿವೇಭ್ಯಃ । ಜೋಷಾ ಸವಿತರ್ಯಸ್ಯತೇಹರಃ ಶತಂ ಸವಾಂ ಅರ್ಹತಿ । ಪಾಹಿನೋದಿದ್ಯುತಃ ಪತಂತ್ಯಾಃ । ಚಕ್ಷುರ್ನೋ ದೇವ ಸವಿತಾ ಚಕ್ಷುರ್ನಽ ಉತಪರ್ವತಃ । ಚಕ್ಷುರ್ಧಾತಾ ದಧಾತುನಃ ಚಕ್ಷುರ್ನೋ । ದೇಹಿ ಚಕ್ಷುಷೇಚಕ್ಷುರ್ವಿಖ್ಯೈ ತನೂಭ್ಯಃ । ಸಂಚೇದಂ ವಿಚಪಶ್ಯೇಮ । ಸುಸದೃಶಂ ತ್ವಾವಯಂ ಪ್ರತಿಪಶ್ಯೇಮ ಸೂರ್ಯ। ವಿಪಶ್ಯೇಮ ನೃಚಕ್ಷಸಃ॥ 10 ॥

ವಿಭ್ರಾಡ್ ಬೃಹತ್ಪಿಬತುಸೋಮ್ಯಂ ಮಧ್ವಾಯುರ್ದಧದ್ಯಜ್ಞ ಪತಾವ ವಿಹೃತಂ। ವಾತ ಜೂತೋಯೋಽ ಅಭಿರಕ್ಷತಿತ್ಮನಾ ಪ್ರಜಾಃ ಪುಪೋಷ ಪುರುಧಾವಿ ರಾಜತಿ । ವಿಭ್ರಾಡ್ ಬೃಹತ್ಸು ಭೃತಂ ವಾಜಸಾತಮಂ ಧರ್ಮಂ ದಿವೋ ಧರುಣೇ ಸತ್ಯಮರ್ಪಿತಂ। ಅಮಿತ್ರಹಾವೃತ್ರಹಾದಸ್ಯುಹಂ ತಮಂ ಜ್ಯೋತಿರ್ಜಜ್ಞೇಽ ಅಸುರಹಾಸ ಪತ್ರಹಾ। ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರುತ್ತಮಂ ವಿಶ್ವಚಿದ್ಧನ ಜಿದುಚ್ಯತೇ ಬೃಹತ್। ವಿಶ್ವಭ್ರಾಡ್ ಭ್ರಾಜೋಮಹಿ ಸೂರ್ಯೋ ದೃಶಽ ಉರುಪ ಪ್ರಥೇಸಹಽ ಓಜೋ ಅಚ್ಯುತಂ । ವಿಭ್ರಾಜಂ ಜ್ಯೋತಿಷಾ ಸ್ವರ ಗಚ್ಛೋ ರೋಚನಂ ದಿವಃ। ಯೇನೇಮಾ ವಿಶ್ವಾ ಬುವನಾನ್ಯಾ ಭೃತಾ ವಿಶ್ವಕರ್ಮಣಾ ವಿಶ್ವ ದೇವ್ಯವತಾ॥ 11 ॥

ಆಯಂ ಗೌಃ ಪೃಶ್ನಿರಕ್ರ ಮೀದಸದನ್ಮಾತರಂ ಪುರಃ। ಪಿತರಂಚ ಪ್ರಯನ್‌ತ್ಸ್ವಃ। ಅಂತಶ್ಚರತಿ ರೋಚನಾಸ್ಯ ಪ್ರಾಣಾದ ಪಾನತಿ। ವ್ಯಖ್ಯ ನ್ಮಹಿಷೋದಿವಂ। ತ್ರಿಂಶದ್ಧಾಮನಿ ರಾಜತಿ ವಾಕ್ ಪತಂಗಾಯ ಧೀಯತೇ । ಪ್ರತಿವಸ್ತೋ ರಹ ದ್ಯುಭಿಃ । ಸವಿತಾಪಶ್ಚಾತಾತ್ಸವಿತಾ ಪುರಸ್ತಾತ್ತ್ಸವಿತೋತ್ತರಾ ತಾತ್ತ್ಸವಿ ತಾಧರಾತ್ತಾತ್। ಸವಿತಾನಃ ಸುವತು ಸರ್ವತಾತಿಂ ಸವಿತಾನೋರಾಸತಾಂ ದೀರ್ಘಮಾಯುಃ । ಶ್ರೀ ಸವಿತೃ ಸೂರ್ಯನಾರಾಯಣಾರ್ಪಣ ಮಸ್ತು॥

ಇತಿ ಸೌರ ಸೂಕ್ತಾನಿ॥



## ಷೋಡಶೋಪಚಾರ ಪೂಜಾ ಪ್ರಯೋಗ

ಆವಾಹನ :- ಆತ್ಮಸಂಸ್ಥಮಜಂ ಶುದ್ಧಂತ್ವಾಮಹಂ ಪರಮೇಶ್ವರ
ಅರಣ್ಯಾಮಿವಹವ್ಯಾಂಶ ಮೂರ್ತಾವಾವಾಹಯಾಮ್ಯಹಂ॥
....ದೇವತಾಯ್ಯೆ ನಮಃ ಆವಾಹನಂ ಸಮರ್ಪಯಾಮಿ.

ಆಸನ :- ದೇವದೇವ ಮಹಾರಾಜ ಪ್ರಿಯೇಶ್ವರ ಪ್ರಜಾಪತೇ।
ಆಸನಂ ದಿವ್ಯಮೀಶಾನ ದಾಸ್ಯೇಯಂ ಪರಮೇಶ್ವರ॥
....ದೇವತಾಯ್ಯೆ ನಮಃ ಆಸನಂ ಸಮರ್ಪಯಾಮಿ.

ಪಾದ್ಯ :- ಯದ್ಭಕ್ತಿಲೇಶಸಂಪರ್ಕಾತ್ ಪರಮಾನಂದ ಸಂಭವಃ।
ತಸ್ಮೈತೇ ಚರಣಾಬ್ಜಾಯ ಪಾದ್ಯಂ ಶುದ್ಧಾಯಕಲ್ಪಯೇ॥
....ದೇವತಾಯ್ಯೆ ನಮಃ ಪಾದ್ಯಂ ಸಮರ್ಪಯಾಮಿ.

ಅರ್ಘ್ಯ :- ತಾಪತ್ರಯ ಹರಂದಿವ್ಯಂ ಪರಮಾನಂದ ಲಕ್ಷಣಂ
ತಾಪತ್ರಯ ವಿನಿರ್ಮುಕ್ತ್ಯೈತವಾರ್ಘ್ಯಂ ಕಲ್ಪಯಾಮ್ಯಹಂ॥
....ದೇವತಾಯ್ಯೆ ನಮಃ ಅರ್ಘ್ಯಂ ಸಮರ್ಪಯಾಮಿ.

ಆಚಮನ :- ವೇದನಾಮಪಿ ವೇದಾಯ ವೇದಾನಾಂ ದೇವತಾತ್ಮನೇ।
ಆಚಮ್ಯಂ ಕಲ್ಪಯಾಮೀಶ ಶುದ್ಧಾನಾಂ ಶುದ್ಧಿಹೇತವೇ॥
....ದೇವತಾಯ್ಯೆ ನಮಃ ಆಚಮನಂ ಸಮರ್ಪಯಾಮಿ

ಸ್ನಾನ :- ಗಂಗಾ ಸರಸ್ವತೀರೇವಾ ಪಯೋಷ್ಣೀ ನರ್ಮದಾಜಲೈಃ।
ಸ್ನಾಪಿತೋಸಿಮಯಾ ದೇವತಥಾಶಾಂತಿಂ ಕುರುಷ್ವಮೇ॥
....ದೇವತಾಯ್ಯೆ ನಮಃ ಜಲಸ್ನಾನಂ ಸಮರ್ಪಯಾಮಿ.

ಕ್ಷೀರ :- ಕಾಮಧೇನು ಸಮುತ್ಪನ್ನಂ ಸರ್ವೇಷಾಂ ಜೀವನಂಪರಂ।
ಪಾವನಂ ಯಜ್ಞಹೇತುಶ್ಚ ಪಯಃ ಸ್ನಾನಾರ್ಥ ಮರ್ಪಿತಮಂ॥
....ದೇವಾಯ ನಮಃ ಕ್ಷೀರೇಣ ಸ್ನಾಪಯಾಮಿ

ದಧಿ :- ಪಯಸಸ್ತುಸಮುದ್ಭೂತಂ ಮಧುರಾಮ್ಲಂ ಶಶಿಪ್ರಭಮ್।
ದಧ್ಯಾನೀತಂ ಮಯಾದೇವ ಸ್ನಾನಾರ್ಥಂ ಪ್ರತಿ ಗೃಹ್ಯತಾಂ॥
....ದೇವತಾಯ್ಯೆ ನಮಃ ದಧ್ನಾ ಸ್ನಾಪಯಾಮಿ

ಘೃತ :- ನವನೀತ ಸಮುತ್ಪನ್ನಂ ಸರ್ವಸಂತೋಷಕಾರಕಮ್।
ಘೃತಂ ತುಭ್ಯಂ ಪ್ರದಾಸ್ಯಾಮಿ ಸ್ನಾನಾರ್ಥಂ ಪ್ರತಿಗೃಹ್ಯತಾಂ।
....ದೇವತಾಯ್ಯೆ ನಮಃ ಘೃತೇನ ಸ್ನಾಪಯಾಮಿ.

ಮಧು :- ತರುಪುಷ್ಪ ಸಮುದ್ಭೂತಂ ಸುಸ್ವಾದುಮಧುರಂ ಮಧು।
ತೇಜಃ ಪುಷ್ಟಿಕರಂ ದಿವ್ಯಂ ಸ್ನಾನಾರ್ಥಂ ಪ್ರತಿಗೃಹ್ಯತಾಂ॥
....ದೇವತಾಯ್ಯೆ ನಮಃ ಮಧುನಾಸ್ನಾಪಯಾಮಿ.

ಶರ್ಕರಾ :- ಇಕ್ಷುಸಾರ ಸಮುದ್ಭೂತಾ ಶರ್ಕರಾ ಪುಷ್ಟಿಕಾರಿಕಾ।
ಮಲಾಪಹಾರಿಕಾ ದಿವ್ಯಾ ಸ್ನಾನಾರ್ಥಂ ಪ್ರತಿಗೃಹ್ಯತಾಂ॥
....ದೇವತಾಯ್ಯೆ ನಮಃ ಶರ್ಕರಯಾ ಸ್ನಾಪಯಾಮಿ.

ಪಂಚಾಮೃತ :- ಪಯೋದಧಿ ಘೃತಂಚೈವ ಮಧುಚ ಶರ್ಕರಾಯುತಮ್।
ಪಂಚಾಮೃತಂ ಮಯಾನೀತಂ ಸ್ನಾನಾರ್ಥಂ ಪ್ರತಿಗೃಹ್ಯತಾಂ॥
....ದೇವತಾಯ್ಯೆ ನಮಃ ಪಂಚಾಮೃತಸ್ನಾನಂ ಸಮರ್ಪಯಾಮಿ.

ಶುದ್ಧೋದಕ :- ಪರಮಾನಂದ ಬೋಧಾಬ್ಧೌ ನಿಮಗ್ನ ನಿಜಮೂರ್ತಯೇ।
ಸಾಂಗೋಪಾಂಗ ಮಿದಂ ಸ್ನಾನಂ ಕಲ್ಪಯಾಮಿ ಪ್ರಸೀದಮೇ॥
....ದೇವತಾಯ್ಯೆ ನಮಃ ಶುದ್ಧೋದಕೇನ ಸಮರ್ಪಯಾಮಿ.

ನಂತರ ಷೋಡಶೋಪಚಾರಗಳಿಂದ ಪೂಜೆಯನ್ನು ಮಾಡಬೇಕು. ಈಗ ಫಲ ಪಂಚಾಮೃತ, ರಸಪಂಚಾಮೃತ, ಪಿಷ್ಟಪಂಚಾಮೃತ, ಪಂಚಪಲ್ಲವೋದಕ, ಧಾನ್ಯ ಪಂಚಕಾಭಿಷೇಕ, ಪತ್ರಪಂಚಕಾಭಿಷೇಕ, ಗಂಧಪಂಚಕಾಭಿಷೇಕಗಳಿಂದಲೂ ಅಭಿಷೇಕಿಸಬಹುದು.

(ಈ ಮಂತ್ರಗಳಿಗಾಗಿ ನಮ್ಮ ರುದ್ರಾಭಿಷೇಕ ವಿಧಾನ ನೋಡಿಕೊಳ್ಳಿರಿ)

ವಸ್ತ್ರ :- ಸರ್ವಭೂಷಾಧಿಕೇ ಸೌಮ್ಯೇಲೋಕ ಲಜ್ಜಾನಿವಾರಣೇ।
ಮಯೋಪಪಾದಿತೇ ತುಭ್ಯಂ ವಾಸಸೀ ಪ್ರತಿಗೃಹ್ಯತಾಂ॥
....ದೇವತಾಯ್ಯೆ ನಮಃ ವಸ್ತ್ರಯುಗ್ಮಂ ಸಮರ್ಪಯಾಮಿ.

ಭಸ್ಮ :- ಅನಾದಿ ಶಾಶ್ವತಂ ಶಾಂತಂ ಚೈತನ್ಯಂ ಚಿತ್ಸ್ವರೂಪಕಂ।
ಚಿದಂಗಂ ವೃಷಭಾಕಾರಂ ಚಿದ್ಭಸ್ಮಲಿಂಗಧಾರಣಂ॥
....ದೇವತಾಯ್ಯೆ ನಮಃ ಭಸ್ಮಧಾರಯಾಮಿ.

ಯಜ್ಞಸೂತ್ರ :- ಯಸ್ಯಶಕ್ತಿತ್ರಯೇಣೇದಂ ಸಂಪ್ರೋತ ಮಖಿಲಂ ಜಗತ್।
ಯಜ್ಞಸೂತ್ರಾಯತೇ ತಸ್ಮೈ ಯಜ್ಞಸೂತ್ರಂ ಪ್ರಕಲ್ಪಯೇ॥
....ದೇವತಾಯ್ಯೆ ನಮಃ ಯಜ್ಞೋಪವೀತಂ ಸಮರ್ಪಯಾಮಿ.

ಗಂಧ :- ಶ್ರೀಖಂಡಂ ಚಂದನಂ ದಿವ್ಯಂ ಗಂಧಾಢ್ಯಂ ಸುಮನೋಹರಂ।
ವಿಲೇಪನಂ ಸುರಶ್ರೇಷ್ಠ ಚಂದನಂ ಪ್ರತಿಗೃಹ್ಯತಾಮ್॥
....ದೇವತಾಯ್ಯೆ ನಮಃ ಗಂಧಂಧಾರಯಾಮಿ.

- ಸ್ತ್ರೀ ದೇವತಾ ಆರಾಧನೆಯಲ್ಲಿ -

ಹರಿದ್ರಾ (ಅರಿಷಿಣ) :- ಹರಿದ್ರಾ ಸ್ವರ್ಣ ವರ್ಣಾಭಾ ಸರ್ವಸೌಭಾಗ್ಯದಾಯಿನೀ।
ಸರ್ವಾಲಂಕಾರ ಮುಖ್ಯಾಹಿದೇವೀತ್ವಂ ಪ್ರತಿಗೃಹ್ಯತಾಂ॥
....ದೇವತಾಯೈ ನಮಃ ಹರಿದ್ರಾಂ ಸಮರ್ಪಯಾಮಿ.

ಕುಂಕುಮ :- ಹರಿದ್ರಾಚೂರ್ಣ ಸಂಯುಕ್ತ ಕುಂಕುಮಂ ಕಾಮದಾಯಕಂ।
ವಸ್ತ್ರಾಲಂಕಾರಣಂ ಸರ್ವಂ ದೇವೀತ್ವಂ ಪ್ರತಿಗೃಹ್ಯತಾಂ॥
....ದೇವತಾಯೈ ನಮಃ ಕುಂಕುಮಂ ಧಾರಯಾಮಿ.

ಕಜ್ಜಲ (ಕಾಡಿಗೆ) :- ಕಜ್ಜಲಂ ಕಾಮಿಕಂ ರಮ್ಯಂ ಕಾಮಿನೀಕಾಮ ಸಂಭವಂ।
ನೇತ್ರಯೋರ್ಭೂಷಣಾರ್ಥಾಯ ಕಜ್ಜಲಂ ಪ್ರತಿಗೃಹ್ಯತಾಂ॥
....ದೇವತಾಯೈ ನಮಃ ಕಜ್ಜಲಂ ಸಮರ್ಪಯಾಮಿ.

ಸಿಂಧೂರ :- ಉದಿತಾರುಣ ಸಂಕಾಶಂ ಜಪಾಕುಸುಮ ಸನ್ನಿಭಂ।
ಸೀಮಂತ ಭೂಷಣಾರ್ಥಾಯ ಸಿಂಧೂರಂ ಪ್ರತಿಗೃಹ್ಯತಾಂ॥
....ದೇವತಾಯೈ ನಮಃ ಸಿಂಧೂರಂ ಸಮರ್ಪಯಾಮಿ.

ಕಂಠಸೂತ್ರ (ಮಂಗಲಸೂತ್ರ)
ಮಾಂಗಲ್ಯತಂತು ಮಣಿಭಿರ್ಮುಕ್ತಾಫಲ ವಿರಾಜಿತಂ।
ಕಂಠಸ್ಯ ಭೂಷಣಾರ್ಥಾಯ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ॥
....ದೇವತಾಯೈ ನಮಃ ಕಂಠಸೂತ್ರಂ ಸಮರ್ಪಯಾಮಿ.

ಕಂಕಣ ಧಾರಣ (ಬಳೆ) - ಕಾಚಸ್ಯನಿರ್ಮಿತಂ ದಿವ್ಯಂಕಂಕಣಂ ಚ ಸುರೇಶ್ವರೀ।
ಹಸ್ತಾಲಂಕರಣಾರ್ಥಾಯ ಕಂಕಣಂ ಪ್ರತಿಗೃಹ್ಯತಾಂ॥
....ದೇವತಾಯೈ ನಮಃ ಕಂಕಣಂ ಸಮರ್ಪಯಾಮಿ.

ಕರ್ಣಕುಂಡಲ (ಕಿವಿಯ ಆಭರಣ) :-
ನಾನಾಭರಣ ಶೋಭಾಢ್ಯಂ ನಾನಾರತ್ನೋಪಶೋಭಿತಂ।
ಅರ್ಪಿತಂಚ ಮಯಾದೇವೀ ಕುಂಡಲಂ ಪ್ರತಿಗೃಹ್ಯತಾಂ॥
....ದೇವತಾಯೈ ನಮಃ ಕರ್ಣಕುಂಡಲಂ ಸಮರ್ಪಯಾಮಿ.

- ಇತಿ ಸ್ತ್ರೀ ದೇವತಾ ಪೂಜೋಪಚಾರವು -

ಅಕ್ಷತಾ :- ಅಕ್ಷತಾಶ್ಚ ಸುರಶ್ರೇಷ್ಠ ಕುಂಕುಮೋಕ್ತಾಃ ಸುಶೋಭಿತಾಃ।
ಮಯಾನಿವೇದಿತಾ ಭಕ್ತ್ಯಾಗೃಹಾಣ ಪರಮೇಶ್ವರ॥
....ದೇವತಾಯೈ ನಮಃ ಅಕ್ಷತಾನ್ ಸಮರ್ಪಯಾಮಿ.

ಬಿಲ್ವಪತ್ರ :- ತ್ರಿದಲಂ ತ್ರಿಗುಣಾಕಾರಂ ತ್ರಿಣೇತ್ರಂ ಚ ತ್ರಿಯಾಯುಧಂ।
ತ್ರಿಜನ್ಮ ಪಾಪ ಸಂಹಾರಮೇಕಬಿಲ್ವಂ ಶಿವಾರ್ಪಣಂ॥
....ದೇವತಾಯ್ಯೆ ನಮಃ ಬಿಲ್ವ ಪತ್ರಾಣಿ ಧಾರಯಾಮಿ.

ಪುಷ್ಪ:- ತುರೀಯವನ ಸಂಭೂತಂ ನಾನಾಗುಣ ಸಮನ್ವಿತಂ।
ಆನಂದ ಸೌರಭಂ ಪುಷ್ಪಂ ಗೃಹ್ಯತಾಮಿದ ಮುತ್ತಮಂ॥
....ದೇವತಾಯ್ಯೆ ನಮಃ ಪುಷ್ಪಾಣಿ ಧಾರಯಾಮಿ.

ಧೂಪ :- ವನಸ್ಪತಿರಸೋ ಪೇತೋ ಗಂಧಾಢ್ಯೋ ಧೂಪ ಉತ್ತಮಃ।
ಆಘ್ರೇಯಸ್ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಂ॥
....ದೇವತಾಯ್ಯೆ ನಮಃ ಧೂಪಮಾಘ್ರಾಪಯಾಮಿ.

ದೀಪ:- ಸ್ವಪ್ರಕಾಶ ಮಹಾದೇವ ಸರ್ವಾಂತಸ್ತಿಮಿರಾಪಹ।
ಸಬಾಹ್ಯಾಭ್ಯಂತರಂ ಜ್ಯೋತಿರ್ದೀಪೋಽಯಂ ಪ್ರತಿಗೃಹ್ಯತಾಂ॥
....ದೇವತಾಯ್ಯೆ ನಮಃ ದೀಪಂ ದರ್ಶಯಾಮಿ.

ನೈವೇದ್ಯ :- ಸತ್ಪಾತ್ರ ಸಿದ್ಧಂ ಸಹವಿರ್ವಿವಿಧಾನೇಕ ಭಕ್ಷಣಂ।
ನಿವೇದಯಾಮಿ ದೇವೇಶ ಸಾನುಗಾಯ ಗ್ರಹಾಣತತ್॥
....ದೇವತಾಯ್ಯೆ ನಮಃ ನೈವೇದ್ಯಂ ನಿವೇದಯಾಮಿ. ನೈವೇದ್ಯಾಂತ್ಯೇ ಪಾನೀಯಂ ಸಮರ್ಪಯಾಮಿ.

ತಾಂಬೂಲ :- ಪೂಗೀಫಲ ಸಮಾಯುಕ್ತಂ ನಾಗವಲ್ಲೀದಲೈರ್ಯುತಮ್।
ಏಲಾಚೂರ್ಣಾದಿ ಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ॥
....ದೇವತಾಯ್ಯೆ ನಮಃ ತಾಂಬೂಲಂ ಸಮರ್ಪಯಾಮಿ.

ದಕ್ಷಿಣಾ :- ಹಿರಣ್ಯಗರ್ಭ ಗರ್ಭಸ್ಥಂ ಹೇಮಬೀಜಂ ವಿಭಾವಸೋಃ।
ಅನಂತಪುಣ್ಯ ಫಲದ ಮತಃ ಶಾಂತಿಂ ಪ್ರಯಚ್ಛಮೇ॥
....ದೇವತಾಯ್ಯೆ ನಮಃ ದಕ್ಷಿಣಾಂ ಸಮರ್ಪಯಾಮಿ.

ಕರ್ಪೂರದೀಪ :- ಕದಲೀಗರ್ಭಸಂಭೂತಂ ಕರ್ಪೂರಂಚ ಪ್ರದೀಪನಮ್।
ಆರಾರ್ತಿಕ್ಯಮಹಂ ಕುರ್ವೇಪಶ್ಯಮೇವರದೋಭವ॥
....ದೇವತಾಯ್ಯೆ ನಮಃ ಕರ್ಪೂರಾರ್ತಿಕ್ಯಂ ಪ್ರದರ್ಶಯಾಮಿ ನಂತರಂ ಆಚಮನೀಯಂ ಸಮರ್ಪಯಾಮಿ

ಪ್ರದಕ್ಷಿಣ :- ಯಾನಿಕಾನಿಚಪಾಪಾನಿ ಜನ್ಮಾಂತರ ಕೃತಾನಿಚ।
ತಾನಿಸರ್ವಾಣಿ ನಶ್ಯಂತು ಪ್ರದಕ್ಷಿಣ ಪದೇ ಪದೇ॥

ಸರ್ವಾರ್ಥ ಸಾಧನೋಪಾಯ ಸರ್ವೈಶ್ವರ್ಯ ಪ್ರದಾಯಕ।
ಸಮಸ್ತಾಪ ತ್ರತೀಕಾರ ಚಂದ್ರಶೇಖರ ತೇನಮಃ॥

....ದೇವತಾಯೈ ನಮಃ ಪ್ರದಕ್ಷಿಣಂ ಸಮರ್ಪಯಾಮಿ.

ಪುಷ್ಪಾಂಜಲಿ :- ಸೇವಂತಿಕಾ ಬಕುಲಚಂಪಕ ಪಾಟಲಾಬ್ಜೈಃ ಪುನ್ನಾಗಜಾತೀ
ಕರವೀರರ ಸಾಲಪುಷ್ಪೈಃ। ಬಿಲ್ವಪ್ರವಾಲತುಲಸೀದಲ ಮಾಲತಿ
ಭಿಸ್ತ್ವಾಂ ಪೂಜಯಾಮಿ ಜಗದೀಶ್ವರಮೇ ಪ್ರಸೀದ॥

....ದೇವತಾಯೈ ನಮಃ ಪುಷ್ಪಾಂಜಲಿಂ ಸಮರ್ಪಯಾಮಿ.

ನಮಸ್ಕಾರ :- ನಮಃ ಸರ್ವ ಹಿತಾರ್ಥಾಯ ಜಗದಾಧಾರ ಹೇತವೇ।
ಸಾಷ್ಟಾಂಗೋಽಯಂ ಪ್ರಣಾಮಸ್ತೇ ದೀನತ್ವೇನ ಮಯಾಕೃತಃ॥

....ದೇವತಾಯೈ ನಮಃ ಸಾಷ್ಟಾಂಗ ನಮಸ್ಕಾರಂ ಸಮರ್ಪಯಾಮಿ.

ಸ್ತೋತ್ರ :- ಅನನ್ಯ ಶರಣಂ ನಾಸ್ತಿತ್ವಮೇವ ಶರಣಂಮಮ।
ತಸ್ಮಾತ್ ಕಾರುಣ್ಯ ಭಾವೇನ ರಕ್ಷ ರಕ್ಷ ಮಹೇಶ್ವರ॥
ಅಪರಾಧ ಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ।
ದಾಸೋಽಹ ಮಿತಿಮಾಂ ಮತ್ವಾ ಕ್ಷಮಸ್ವಪರಮೇಶ್ವರ॥
ಯಸ್ಯಸ್ಮೃತ್ಯಾ ಚನಾಮೋಕ್ತ್ಯಾತಪಃ ಪೂಜಾಕ್ರಿಯಾದಿಷು।
ನ್ಯೂನಂ ಸಂಪೂರ್ಣತಾಂ ಯಾತಿಸದ್ಯೋವಂದೇ ಸದಾಶಿವಂ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಮಹೇಶ್ವರ।
ಯತ್ಪೂಜಿತಂ ಮಯಾದೇವ ಪರಿಪೂರ್ಣಂ ತದಸ್ತುತೇ॥

• ಅನೇನ ಶ್ರೀ.......ಪೂಜಾ ವಿಧಾನೇನ ಭಗವಾನ್ ಸರ್ವಾತ್ಮಕಃ ಶ್ರೀ ಸಾಂಬ ಸದಾಶಿವಃ ಸುಪ್ರೀತಃ ಸುಪ್ರಸನ್ನಃ ವರದೋಭವತು । ಇತಿಸಾಕ್ಷತ ಹಿರಣ್ಯೋದಕಂ ವಿಸೃಜೇತ್॥....ದೇವತಾಯೈ ನಮಃ ಶ್ರೀಮಹಾ....ಯಥಾಸ್ಥಾನಂ ಪ್ರತಿಷ್ಠಾಪಯಾಮಿ ಶೋಭನಾರ್ಥಂ ಪುನರಾಗಮನಾಯಚ॥

– ಷೋಡಶೋಪಚಾರ ಪೂಜಾ ಪ್ರಯೋಗ –

(ಪುರುಷ ಸೂಕ್ತಮಂತ್ರಗಳಿಂದ)

ಆವಾಹನ :- ಓಂ ಸಹಸ್ರ ಶೀರ್ಷಾಃ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್।
ಸಭೂಮಿಗ್ಂ ವಿಶ್ವತೋವೃತ್ವಾ ಅತ್ಯತಿಷ್ಠದ್ದಶಾಂಗುಲಮ್॥

ಓಂ ಭೂರ್ಭುವಸ್ವಃ....ದೇವಾಯ ನಮಃ ಆವಾಹನಂ ಸಮರ್ಪಯಾಮಿ.

